# ಹೊಸತು

## ಒಳಗೇನಿದೆ.....


ಕಾಶ್ಮೀರ ಸಮಸ್ಯೆಗೆ ಮಿಲಿಟರಿ ಪರಿಹಾರ ಸಾಧ್ಯವಿಲ್ಲ (ಸಂದರ್ಶನ)
- *ಎಂ. ಯೂಸುಫ್ ತರಿಗಾಮಿ* ... ೩೨

ಬಹು ಸಾಂಸ್ಕೃತಿಕತೆಯ ದೃಷ್ಟಿಯಲ್ಲಿ — *ಟಿ. ಎಸ್. ವೇಣುಗೋಪಾಲ್* ... ೧೧

ಕೃಷ್ಣಾ ನೀರಿನ ಬಳಕೆ — *ವೀರೇಂದ್ರ ಪಾಟೀಲ* ... ೧೩

ಬಗೆಹರಿಯಲೇಬೇಕಾದ ಭಾರತದ ಬೃಹತ್ ಸಮಸ್ಯೆಗಳು
*ಸದಾನಂದ ಹೆಗಡೆಕಟ್ಟೆ* ... ೧೦

ಮಕ್ಕಳ ಮೇಲೆ ಜಾಹೀರಾತುಗಳ ಪರಿಣಾಮ — *ಅಡ್ಡೂರು ಕೃಷ್ಣರಾವ್* ... ೩೭

ಪರಿಸರ ಚಳವಳಿಗಳ ಸೈದ್ಧಾಂತಿಕ ನೆಲೆಗಳು — *ಮೋಹನ್ ಕೃಷ್ಣ ರೈ ಕೆ.* ... ೫೪

ನಮ್ಮೊಳಗಿನ ನಾವು — *ಭಾರತೀ ಕಾಸರಗೋಡು* ... ೮

ಒಬ್ಬ ದೇಶ ಪ್ರೇಮಿಯ ಒಲವು — *ಹಂಝ ಮಲಾರ್* ... ೧೫

ಲಕ್ಸುರಿ — *ಹಾಲಾಡಿ ಮಾರುತಿರಾವ್* ... ೧೭

ಭೂಮಿ ದುಂಡಗಿದೆ — *ಚಿತ್ರಶೇಖರ ಕಂಠಿ* ... ೧೮

ಕೇಶಾಲಂಕಾರ ಪ್ರಸಂಗ — *ಸತ್ಯವತಿ* ... ೨೦

ಕಾವ್ಯಧಾರೆ — ೨೪, ೨೭, ೪೧, ೪೪, ೫೮

ಮಹಮ್ಮದ್ ಕಣ್ಣು ... ೪೦

ಉಳ್ಳವರು ಶಿವಾಲಯವ ಮಾಡುವರು — *ಜಿ. ಕೆ. ಗೋವಿಂದರಾವ್* ... ೨೩

ಬಸವಣ್ಣನವರ ಒಂದು ವಚನದ ಹೊಸ ಓದು — *ನಿಂಗಪ್ಪ ಮುದೇನೂರು* ... ೨೫

ಮಧ್ಯಕಾಲೀನ ಭಾರತದ ಸಾಮಾಜಿಕ ಚಿಂತನೆಗಳು — *ಡಾ|| ಸಿದ್ಧಲಿಂಗಸ್ವಾಮಿ* ... ೫೯

ಕರ್ನಾಟಕದ ಆರೋಗ್ಯ ಕ್ಷೇತ್ರದ ಇತಿಹಾಸದಲ್ಲೊಂದು ಮೈಲುಗಲ್ಲು -
ಆರೋಗ್ಯ ಕಾರ್ಯಪಡೆ ವರದಿ
*ಡಾ|| ಪ್ರಕಾಶ್ ಸಿ. ರಾವ್* ... ೨೯

ಕೀಟ ಖಾದ್ಯಗಳು - ಶಕ್ತಿಯ ಸಾಗರ — *ಡಾ|| ಸ. ಜ. ನಾಗಲೋಟಿಮಠ* ... ೪೧

ದೃಶ್ಯ ಪ್ರಪಂಚ — *ಎಂ. ಆರ್. ಎನ್. ಮೂರ್ತಿ* ... ೪೨

ನೋಡ ಬನ್ನಿ ಮಂಗಳೂರ — *ಮ. ಶ್ರೀ. ಮುರಳಿಕೃಷ್ಣ* ... ೪೭

ಶಿಲೆಯರಳಿ ಹೂವಾಯಿತು — *ದುರ್ಗಾಪ್ರವೀಣ ಎಂ. ಎ.* ... ೫೧

ಒಳ್ಳೆಯ ಓದು ... ೩೧

ಪೇಟೆಯ ಕಾವು : ಪ್ರಕೃತಿಯ ಸಾವು — *ಎ. ಪಿ. ಚಂದ್ರಶೇಖರ್* ... ೫೩

ಲಾವಂಚವೇ ಪ್ರಪಂಚ — *ಪುಷ್ಪ ಎಚ್. ಕೆ.* ... ೫೦

ಕ್ರಾಂತಿದೂತ ಬಸವಣ್ಣ (ನಾನು ಓದಿದ ಪುಸ್ತಕ) — *ರವೀಂದ್ರ ಹಳಿಂಗಳಿ* ... ೫೬

ಡಾ|| ರಹಮತ್ ತರೀಕೆರೆ ಅವರ ಅಂಡಮಾನ್ ಪ್ರವಾಸ ಕುರಿತು
*ಶಿವರಾಮಯ್ಯ* ... ೫೭

ಶರದ್ವೈಭವ (ನಭಾವಲೋಕನ) — *ಡಾ|| ಬಿ. ಎಸ್. ಶೈಲಜಾ* ... ೩೯

ಮೂಗುರ್ಬಿಗಳು — *ವಿ. ಚಂದ್ರಶೇಖರ ನಂಗಲಿ* ... ೬೦

ಬುದ್ಧನ ದೃಷ್ಟಿಯಲ್ಲಿ ಜಾತಿ ಮತ್ತು ಧರ್ಮ — *ಜ. ಹೊ. ನಾರಾಯಣಸ್ವಾಮಿ* ... ೬೧

ಸತ್ಯ ಮತ್ತು ಧರ್ಮ (ತಿಳಿವು) — *ಬ. ನಾ. ರಘುರಾಮ* ... ೬೨



*ಚಿತ್ರಗಳು : ಪಿ. ಮಹಮ್ಮದ್, ಸತೀಶ್ ಯಲ್ಲಾಪುರ, ವಿಶ್ವ,*
*ಜಿ. ಎಂ. ಬೊಮ್ನಳ್ಳಿ, ರವಿಕುಮಾರ್ ಅಜ್ಜೀಪುರ, ವಾಗೀಶ*
*ಮುಖಚಿತ್ರ : ಕಲಾವಿದ ಎಂ. ಅಬ್ದುಲ್ಲಯೆವ್‌ರ ಕೃತಿ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

ನಮ್ಮ ದೇಶದಲ್ಲಿ ಏನೆಲ್ಲಾ ನಡೆಯುತ್ತಿದೆ ಎಂದು ಗಾಬರಿ-ಸಿಟ್ಟು-ಆತಂಕ ಹುಟ್ಟಿಸಿದ ತಿಂಗಳು ಆಗಸ್ಟ್. ಚುನಾವಣೆಯಲ್ಲಿ ಸೋತಿದ್ದನ್ನು ಇನ್ನೂ ಒಪ್ಪಿಕೊಳ್ಳಲಾಗದೆ ತನ್ನ ಸ್ವಂತದ 'ಯುದ್ಧ' ಮುಂದುವರಿಸಲು ಬಹಳ ಹೀನಾಯ ಪಟ್ಟುಗಳನ್ನು ಹಾಕುತ್ತಿರುವ ತಮಿಳುನಾಡಿನ ಎಂ. ಕರುಣಾನಿಧಿ ಪ್ರಜಾಪ್ರಭುತ್ವದ ಮೂಲ ಸೂತ್ರಗಳಿಗೆ ಸವಾಲೆಸೆದಿದ್ದಾರೆ. ಮುಖ್ಯಮಂತ್ರಿ ಸ್ಥಾನದಲ್ಲಿರುವಾಕೆ ಸ್ವಚ್ಛಳಲ್ಲವೆಂಬುದನ್ನು ಮುಂದುಮಾಡಿ ಈತ ಮಾಡುವುದೆಲ್ಲಾ ಸರಿ ಅಥವಾ ಮೌಲ್ಯಯುತವಾದದ್ದೆಂದು ಮಾಧ್ಯಮದ ಒಂದು ದೊಡ್ಡ ವಿಭಾಗ ಸಂತೆಯಲ್ಲಿ ಅಂಗಡಿ ತೆರೆದಿದೆ. ವೀರಪ್ಪನ್ ಎಂಬ ಬ್ರಹ್ಮಾಸ್ತ್ರವನ್ನು ಎಂದು ಬಳಸಿಬಿಡುತ್ತಾಳೋ ಎಂಬ ಭಯ ಕರುಣಾನಿಧಿ ಬಣವನ್ನು ಕಂಗಾಲಾಗಿಸಿದೆಯೆಂದು ತೋರುತ್ತದೆ. ರಾಜಕೀಯವಾಗಿ ಸಂವಾದ-ಹೋರಾಟಗಳನ್ನು ಹಮ್ಮಿಕೊಳ್ಳುವುದು ಬಿಟ್ಟು ಜನರನ್ನು ರಸ್ತೆಗೆ ತಂದು ಅಶಿಸ್ತಿನ ಹಲ್ಲೆಗೆ ಕಾರಣವಾಗುವುದು ಎಂತಹ ತಂತ್ರ ? ನ್ಯಾಯಾಲಯಗಳ ಕಟಕಟೆಯಲ್ಲಿ ನಿಲ್ಲಿಸಿ ಆಕೆಯನ್ನು ಸೋಲಿಸಬಹುದೆಂಬ ಇವರ ನಂಬಿಕೆ ಈಗೇಕೆ ಹುಸಿಯಾಯಿತು ? ಇವರ ಮೆರವಣಿಗೆಯಲ್ಲಿ ಆಕೆ ಗೂಂಡಾಗಳನ್ನು ತೂರಿಸಿದಳೆಂದು ಹೇಳುವುದು ಎಷ್ಟರಮಟ್ಟಿಗೆ ಸರಿ ? ಅವರೆಲ್ಲಾ ಇವರ ಬಣದ ಗೂಂಡಾಗಳೆಂದೇ ಸಾರ್ವಜನಿಕರು ಏಕೆ ಭಾವಿಸಬಾರದು ? ಹೀಗೆ ಪ್ರಶ್ನೆಗಳು ಹತ್ತಾರು.

ಇಷ್ಟೆಲ್ಲಾ ತಲೆ ತುರಿಸಿಕೊಳ್ಳುತ್ತಿರುವಾಗ 'ರಾಜ್ಯತಂತ್ರ ಪ್ರವೀಣ' ಜಾರ್ಜ್ ಫರ್ನಾಂಡೀಸ್ ಮೂಗು ತೂರಿಸಿ ಹೇಳುತ್ತಾರೆ, 'ಯು.ಟಿ.ಐ. ಅಧ್ಯಕ್ಷರಾಗಿದ್ದ ಸುಬ್ರಹ್ಮಣ್ಯಂಗೆ ಆ ಪದವಿ ದೊರೆತದ್ದು ಜಯಲಲಿತಾಳಿಂದ' ಎಂದು. ಏನಿದರರ್ಥ ? ತಾನು ಅಂಚೆ ಪೇದೆಯ ಕೆಲಸ ಮಾಡುತ್ತಿದ್ದುದನ್ನು ಒಪ್ಪಿಕೊಂಡ ಜಾರ್ಜ್, ರಕ್ಷಣಾ ಸಚಿವರಾಗಿ ಯಾರ ರಕ್ಷಣೆಯಲ್ಲಿ ತೊಡಗಿದ್ದರು ? ಆಕೆ ಹೇಳಿದ್ದನ್ನೆಲ್ಲಾ ಮಾಡುತ್ತಿದ್ದ ವಾಜಪೇಯಿ ಸರ್ಕಾರಕ್ಕೆ ನಿರ್ದಿಷ್ಟವಾದ ನೀತಿ-ನಿಯಮಗಳು ಯಾವುವೂ ಇರಲಿಲ್ಲ, ಯು.ಟಿ.ಐ. ಅಧ್ಯಕ್ಷನಾಗಲು ಒಂದು ಶಿಫಾರಸು ಪತ್ರ ಬಿಟ್ಟು ಬೇರಾವ ಅರ್ಹತೆಯೂ ಬೇಕಿರಲಿಲ್ಲ, ಎಂಬುದು ಸರಿಯಾದರೆ ಇಂದಿನ ಯು.ಟಿ.ಐ. ಹಗರಣದ ಪೂರ್ತಿ ಜವಾಬ್ದಾರಿ ವಾಜಪೇಯಿಯವರದೇ ಆಗುತ್ತದೆ. ಲಕ್ನೋದಲ್ಲಿ ಹಣ ತೊಡಗಿಸುವಂತೆ ಸುಬ್ರಹ್ಮಣ್ಯಂಗೆ ಸ್ವತಃ ವಾಜಪೇಯಿ ಹೇಳಿದ್ದರೆಂಬ ಊಹೆಗೆ ಇದರಿಂದ ಪುಷ್ಟಿ ದೊರೆಯುತ್ತದೆ. ಜಯಲಲಿತಾ ಹೇಳಿದ್ದನ್ನು ವಾಜಪೇಯಿ ತಳ್ಳಿಹಾಕಲಿಲ್ಲ; ವಾಜಪೇಯಿ ಹೇಳಿದ್ದನ್ನು ಸುಬ್ರಹ್ಮಣ್ಯಂ ತಳ್ಳಿಹಾಕಲಿಲ್ಲ. ಒಟ್ಟು ಪರಿಣಾಮ, ಲಕ್ಷಾಂತರ ಭಾರತೀಯ ನಾಗರಿಕರ ಉಳಿತಾಯದ ಹಣ ಲಕ್ನೋ ಚರಂಡಿಯಲ್ಲಿ ಕೊಚ್ಚಿ ಹೋಯಿತು. ಸಾರ್ವಜನಿಕರ ಹಣದ ಹೂಡಿಕೆಯ ಬಗ್ಗೆ ತನಿಖೆ ನಡೆಯಬೇಕೆಂದು ಒತ್ತಾಯ ಬರುತ್ತಿರುವಾಗ ಅದನ್ನು ಮೂಲೆಗುಂಪಾಗಿಸಲು ಜಾರ್ಜ್ ಹೂಡುವ ತಂತ್ರ ಇದು : ಜಯಲಲಿತಾ ಎಂಬ ಗೂಬೆಯ ಹಿಂದೆ ಯಶವಂತ ಸಿಹ್ನಾ - ವಾಜಪೇಯಿ ಅಡಗಿ ಕುಳಿತುಕೊಳ್ಳಲು ಕೋಟೆಯ ರಚನೆ. ಇದು ಬಹುರಾಷ್ಟ್ರೀಯ ಕಂಪೆನಿಗಳ ದಳ್ಳಾಳಿಗಳಿಗೆ, ಸ್ವಕೀಯ ಲೂಟಿಕೋರರಿಗೆ ಸಂತಸ ತರಬಹುದು; ಆದರೆ ಭಾರತದ ಜನರಿಗೆ ಮತ್ತು ಪ್ರಜಾಪ್ರಭುತ್ವಕ್ಕೆ ಅಲ್ಲ.

ಇಂಥದೇ ಅಡ್ಡ ಮತ್ತು ಕ್ಷುದ್ರ ರಾಜಕೀಯ ಫೂಲನ್ ದೇವಿ ಹತ್ಯೆಯ ಸಂದರ್ಭದಲ್ಲೂ ಕಂಡುಬಂದಿದೆ. ಆಕೆ ಸತ್ತ ಮೇಲೆ ಲೀಟರುಗಟ್ಟಲೆ ಅಶ್ರುಧಾರೆಯನ್ನು ಧಾರಾಳವಾಗಿ ಹರಿಸಿದ ದೆಹಲಿಯ ನಾಯಕಗಣವು ಆಕೆ ಬದುಕಿದ್ದಾಗ ಬಾಳಲಾರದಂತೆ ಮಾಡಿದ್ದುದು ತಿಳಿದ ವಿಷಯ. ತನ್ನ ಪಕ್ಷದ ಬಗ್ಗೆ ಆಕೆಗೆ ಜುಗುಪ್ಸೆಯುಂಟಾಗಿತ್ತೆಂದು ಕೆಲವರು ಹೇಳಿದರೆ, ತಾನು ಸಂನ್ಯಾಸಿನಿಯಾಗಬಯಸಿದ್ದಳೆಂದು ಹೇಳುವವರು ಇನ್ನು ಕೆಲವರು. ಊಳಿಗಮಾನ್ಯ ಪದ್ಧತಿಯ ಹೇಸಿಗೆಯನ್ನು ಆ ವ್ಯವಸ್ಥೆಯ ಮುಂದಾಳುಗಳ ಮುಖಕ್ಕೆ ಬಳಿದ ಫೂಲನ್ ದೇವಿಯನ್ನು ಸಂಪ್ರದಾಯ ಶರಣರು, ಭೂಮಾಲಿಕರು, ಕೋಮು ರಾಜಕೀಯದ ನೇತಾರರು ಎಂದೂ ಮನ್ನಿಸಲಿಲ್ಲ. ಆಕೆಯ ಸಾವಿನಿಂದ ಈ ಜನ ನೊಂದಿದ್ದಾರೆಂದು ಬಗೆದರೆ ಅದಕ್ಕಿಂತಲೂ ದೊಡ್ಡ ಹುಚ್ಚು ಹುಂಬತನ ಇನ್ನೊಂದಿಲ್ಲ. ಹಿಂದುಳಿದ ಜನರು ಎಚ್ಚೆತ್ತುಕೊಳ್ಳುವುದನ್ನು ಸಹಿಸದ ವಿಷವರ್ಗವೊಂದು ನಮ್ಮಲ್ಲಿನ್ನೂ ಬಲವಾಗಿ ಕೂತಿದೆ. ಫೂಲನ್ ದೇವಿ ಪ್ರತಿನಿಧಿಸಿದ ಆ ಹಿಂದುಳಿದ ವರ್ಗದ ಜನರನ್ನು ಎಂದಿನಂತೆಯೇ ಕುರುಡು ಕನಸುಗಳಲ್ಲಿ ಮುಳುಗಿಸಿಟ್ಟು ತನ್ನ ದರ್ಪವನ್ನು ಮೆರೆಯುವ ಲಾಲಸೆ ಇರುವ ವರ್ಗದ ರಾಜಕೀಯ ಎಂಥದೆಂಬುದು ಈಗ ಗುಟ್ಟಾಗಿ ಉಳಿದಿಲ್ಲ. ಊಳಿಗಮಾನ್ಯತೆಯನ್ನು ಧಿಕ್ಕರಿಸಿ ಫೂಲನ್ ದೇವಿ ಪ್ರತೀಕಾರದ ಹೆಜ್ಜೆ ಹಾಕಿ ಒಂದಷ್ಟು ಯಶಸ್ಸು ಗಳಿಸಿದ್ದು ಕೆಲವರಿಗೆ ಅರುಚಿಕರವಾದ ಚರಿತ್ರೆ. ಆದರೆ ಬಾಕಿಯಿರುವ ಮಹತ್ತರ ಜವಾಬ್ದಾರಿಯೆಂದರೆ ಊಳಿಗಮಾನ್ಯ ವ್ಯವಸ್ಥೆಯ ಉಸಿರನ್ನು ಕಟ್ಟಿಸಿ ಅದನ್ನು ಹೂತುಹಾಕುವುದು. ಹಿಂದುಳಿದ ವರ್ಗಗಳ ಜೊತೆ ಸೇರಿ ದುಡಿಯುವ ಜನ ತುಳಿಯಬೇಕಾದ ಹಾದಿ ಅದು.




ಸಂಪುಟ-೩ ಸಂಚಿಕೆ - ೨ ಸೆಪ್ಟೆಂಬರ್ ೨೦೦೧



*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೯೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**

## ಸಂಪಾದಕೀಯ

# ಆರ್ಥಿಕ ನೀತಿಯ ದಿವಾಳಿತನ

**ಉ**ದಾರೀಕರಣವೆಂಬ ಹೆಸರಿನಲ್ಲಿ ಲಂಗುಲಗಾಮಿಲ್ಲದ ಸಡಲೀಕರಣವನ್ನು ಆಚರಿಸುತ್ತಿರುವ ಆರ್ಥಿಕ ನೀತಿಯ ಈ ಕಾಲದಲ್ಲಿ ಪದೇ ಪದೇ ಕೇಳಿಬರುವ ಒಂದು ಮಾತೆಂದರೆ, ಮಾರುಕಟ್ಟೆಯಲ್ಲಿ ಏರು-ಪೇರುಗಳು ಇದ್ದೇ ಇರುತ್ತವೆಯಾದ್ದರಿಂದ ಹೂಡಿಕೆಯ ತೀರ್ಮಾನಗಳು ಏರುಪೇರು ಆಗುವುದು ಸಹಜ ಎಂಬುದು. ಆದರೆ ಇಂಥ ನೆವ ಹೂಡಿ, ತಪ್ಪು ತೀರ್ಮಾನಗಳನ್ನು ಬೇಕೆಂದೇ ತೆಗೆದುಕೊಂಡೂ ಬಚಾವಾಗುವವರೇ ಹೆಚ್ಚಾಗುತ್ತಿದ್ದಾರೆ. ಅರ್ಥಮಂತ್ರಿಗಳ ಇನ್ನೊಂದು ನೆಪ, ಆರ್ಥಿಕ ಸುಧಾರಣೆಯು ಕಾರ್ಯಗತವಾಗುವ ೪-೫ ವರ್ಷಗಳಲ್ಲಿ ಅನೇಕ ಮುಗ್ಗಟ್ಟುಗಳನ್ನು ಜನತೆ ಅನುಭವಿಸಬೇಕಾಗುವುದು ಅನಿವಾರ್ಯ ಮತ್ತು ಅವರು ಅವನ್ನು ಸಹಿಸಿಕೊಳ್ಳಬೇಕು, ಎಂಬುದು. ಈ ತತ್ವದ ಆಚರಣೆಯಲ್ಲಿ ಯೂನಿಟ್ ಟ್ರಸ್ಟ್‌ನಂಥ ಸಾರ್ವಜನಿಕ ಹಣ ಸಂಗ್ರಹಣೆಯ ಸಂಸ್ಥೆ ಒಳಗೊಳಗೇ ದೊಗರೆ ಹೊಡೆದು, ಕುಸಿದುಬಿಟ್ಟರೆ ಅದೂ ಸಹಜವೆಂದು ವಾದ ಮಾಡಬಹುದು! ಆದರೆ ಕಳೆದ ದಶಕದ ಆರ್ಥಿಕ ನೀತಿಯ ಬೆಳವಣಿಗೆಯ ಜಾಡನ್ನು ಗಮನಿಸಿದರೆ ಇಂಥ ದುರಂತಗಳು ಅನಿವಾರ್ಯವೆನಿಸದೆ ಒಂದು ಸ್ತರದಲ್ಲಿ ಬೇಕೆಂತಲೇ ಪೂರ್ವಯೋಜಿತ ಸಂಚಿನಿಂದ ತಂದುಕೊಂಡ ಪರಿಸ್ಥಿತಿ ಎಂದು ಸ್ಪಷ್ಟವಾಗುವುದು. ಇನ್ನೂ ಇಂಥ ಹಲವು ಪ್ರಕರಣಗಳು ಸದ್ಯದಲ್ಲೇ ಹೊರಗೆ ಬರುವುದು ಖಂಡಿತ. ಈಗಂತೂ ದುರ್ವ್ಯವಹಾರ, ಅವ್ಯವಹಾರ, ತಪ್ಪು ವ್ಯವಹಾರ ನಡೆಸುವ ಉದ್ಯಮಿಯ ಮೇಲೆ ಕ್ರಮ ಜರುಗಿಸುವ ಬದಲು, ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆಹಾಕಿದಂತೆ ಚಿಕ್ಕ ಚಿಕ್ಕ ಉಳಿತಾಯದ ಗಂಟಿಗೇ, ಅದರ ಮೂಲಕ್ಕೇ, ಮೋಸ ಮಾಡುವ ಅನರ್ಥನೀತಿಯನ್ನು ಪ್ರತಿಪಾದಿಸಿ, ಕೋಟ್ಯಂತರ ಜನಸಮೂಹಕ್ಕೆ ಶಿಕ್ಷೆ ವಿಧಿಸಲಾಗಿದೆ. ಇದರ ಹಿಂದಿನ ಸೋಗಲಾಡಿತನವನ್ನು ಬಯಲಿಗೆ ಎಳೆಯುವುದು ಜರೂರಾಗಿದೆ. ಅರ್ಥಮಂತ್ರಿಗಳು ತಮ್ಮ ಜವಾಬ್ದಾರಿ ಒಪ್ಪಿಕೊಂಡು, ತನ್ನ ಮಂತ್ರಿ ಪದವಿಗೆ ರಾಜೀನಾಮೆ ಕೊಡುವುದು ಪ್ರಜಾಪ್ರಭುತ್ವದ ಅಗತ್ಯ. ತಾನು ರಾಜೀನಾಮೆ ಕೊಡುವುದರಿಂದ ಪರಿಸ್ಥಿತಿ ಸರಿಹೋಗುವುದೆ ಎಂದು ಪ್ರಶ್ನಿಸುವ ಇವರ ಧಿಮಾಕಿಗೆ ಹೇಳಬಹುದಾದ ಪ್ರತ್ಯುತ್ತರ ಒಂದೇ: ನೀವು ಇದ್ದು ಆಗುವುದಾದರು ಏನು ? ನೀವಿದ್ದರೆ ಅನರ್ಥವಂತೂ ತಪ್ಪಿದ್ದಲ್ಲ. ಆದ್ದರಿಂದ ದಯವಿಟ್ಟು ನಿಮ್ಮ ಕುರ್ಚಿ ಖಾಲಿ ಮಾಡಿ. ಬಲವಂತವಾಗಿ ಮಾಡಿಸಿಕೊಳ್ಳಬೇಡಿ.

ಸಣ್ಣ ಉಳಿತಾಯ ದೇಶದ ವಾರ್ಷಿಕ ಉತ್ಪಾದನೆಯ ಶೇ ೩೫-೪೦ರಷ್ಟು ಇದ್ದು ಅದರಿಂದ ಆರ್ಥಿಕ ಕ್ಷೇತ್ರದ ವಿಕಾಸಕ್ಕೆ ಬಂಡವಾಳ ಒದಗಿಸಿದರೆ ಇದು ರಾಷ್ಟ್ರದ ಆರ್ಥಿಕ ಆರೋಗ್ಯದ ಸೂಚನೆಯಾಗುತ್ತದೆ. ಮುಂದುವರಿದ ಅರ್ಥವ್ಯವಸ್ಥೆಯಲ್ಲೂ ಸರ್ಕಾರಗಳಲ್ಲೂ ಇದನ್ನು ತಮ್ಮ ಆರ್ಥಿಕ ನೀತಿಯಾಗಿ ಸ್ವೀಕರಿಸಿ, ಸಾಧಿಸಲು ಪ್ರಯತ್ನಪಡುತ್ತಾರೆ. ಹಿಂದುಳಿದ ಆರ್ಥಿಕ ವ್ಯವಸ್ಥೆಯಲ್ಲಿ ಸಣ್ಣ ಉಳಿತಾಯ ಮಾಡುವ ವ್ಯಕ್ತಿ ತಮ್ಮ ಸಂಪಾದನೆಯ ಒಂದು ಭಾಗವನ್ನು ಭವಿಷ್ಯದ ಅನಿರೀಕ್ಷಿತ ಸಂದರ್ಭಗಳಿಗಾಗಿ ಅಥವಾ ಮದುವೆ, ವಿದ್ಯಾಭ್ಯಾಸ, ಮನೆಕಟ್ಟುವ ಪೂರ್ವಯೋಜಿತ ಉದ್ದೇಶಗಳಿಗಾಗಿ, ತಾನು ಮಾರುಕಟ್ಟೆಯಲ್ಲಿ ಮಾಡುವ ಸದ್ಯದ ಗ್ರಾಹಕ ಅಗತ್ಯವೆಚ್ಚವನ್ನು ಕಡಿತಗೊಳಿಸಿಕೊಂಡು, ಕಷ್ಟಪಟ್ಟು ಉಳಿಸುತ್ತಾನೆ. ಈಗ ಜನತೆಯ ಈ ಉಳಿತಾಯ ಹಾಳಾಗುವ ಪರಿಸ್ಥಿತಿ ಉಂಟಾಗಿದೆ. ವೈಯಕ್ತಿಕ ನಷ್ಟಗಳು ಚಿಕ್ಕ ಮೊತ್ತದವೆಂದೋ, ಅದು ಕೋಟ್ಯಂತರ ಜನರ ಮೇಲೆ ಹರುಡುವುದರಿಂದ ಅದರ ಪರಿಣಾಮ ತೀವ್ರವಲ್ಲವೆಂದೋ, ಅರ್ಥ ವ್ಯವಸ್ಥೆ ಕಾಲಕ್ರಮದಲ್ಲಿ ಅದನ್ನು ಜೀರ್ಣಿಸಿಕೊಳ್ಳಬಹುದೆಂದೋ ಹೇಳುವವರು ಅವಿವೇಕಿಗಳು, ಸಮಾಜಘಾತುಕರು, ಸಾಮಾಜಿಕ ಹೊಣೆಗಾರಿಕೆ ಇಲ್ಲದವರು. ಮಿತಿಮೀರಿದ ಲಾಭ ದೃಷ್ಟಿಯುಳ್ಳ ಉದ್ಯಮಪತಿಯ ಪ್ರಗತಿಯೇ ರಾಷ್ಟ್ರದ ಪ್ರಗತಿ ಎಂದು ಸಮೀಕರಣ ಮಾಡುವ ಕಿಡಿಗೇಡಿಗಳ, ಸ್ವಾರ್ಥಿಗಳ ದೃಷ್ಟಿಯಿದು. ಮಾರುಕಟ್ಟೆಯ ಅಧೀನದ, ಬಂಡವಳಿಗ ಮಾರ್ಗದ ಅರ್ಥನೀತಿಯ ಆಚರಣೆಯ ದಿವಾಳಿತನ ಈ ಬೆಳವಣಿಗೆ ಎಂದು ಸ್ಪಷ್ಟವಾಗಿ ಗುರುತಿಸುವ ಕಾಲ ಈಗ ಬಂದಿದೆ.

೧೯೬೪ರಲ್ಲಿ ಸ್ಥಾಪನೆಯಾದ ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ (ಯೂಟಿಐ) ವಿಶಾಲವಾದ ಜನಸಾಮಾನ್ಯರಿಂದ ಸಣ್ಣ ಉಳಿತಾಯವನ್ನು ಮಹತ್ಪ್ರಮಾಣದಲ್ಲಿ ಸಂಗ್ರಹಿಸಿ, ಅದನ್ನು ಆರ್ಥಿಕ ವಿಕಾಸ ಕ್ಷೇತ್ರದಲ್ಲಿ ಬಂಡವಾಳವಾಗಿ ಹರಿಸುವ ಉದ್ದೇಶದಿಂದ ಸ್ಥಾಪಿತವಾದ ಸಾರ್ವಜನಿಕ ಸಂಸ್ಥೆ. ಇದೊಂದು ವಿಶ್ವಸ್ಥ ಸಂಸ್ಥೆಯಾಗಿ, ಉಳಿತಾಯ ಮಾಡುವವರಿಗೆ ಅವರ ಉಳಿತಾಯದ ರಕ್ಷಣೆಯ ಆಶ್ವಾಸನೆ ಮತ್ತು ಜೊತೆಗೆ, ಪೋಸ್ಟ್ ಆಫೀಸ್ ಉಳಿತಾಯ ಬ್ಯಾಂಕ್ ಅಥವಾ ಭವಿಷ್ಯ ನಿಧಿಯಲ್ಲಿ ದೊರಕುವುದಕ್ಕಿಂತ ಒಂದಿಷ್ಟು ಉತ್ತಮ ಡಿವಿಡೆಂಡ್ ಗಳಿಸಿಕೊಡುವ ಆಶಯವನ್ನು ಹೊಂದಿತ್ತು. ಸಣ್ಣ ಉಳಿತಾಯ ಮಾಡುವ ಅಸಂಖ್ಯಾತ ಜನರಿಗೆ, ನೇರವಾಗಿ ಷೇರುಪೇಟೆಯ ವ್ಯವಹಾರ ಮಾಡುವ ಸಾಮರ್ಥ್ಯವೂ, ಒಲವೂ, ಜಾಣ್ಮೆಯೂ ಇಲ್ಲದಿರಬಹುದಾದ್ದರಿಂದ ಈ ವಿಶ್ವಸ್ಥ ಮಂಡಲಿಯ ತಜ್ಞರು ಅವರ ಪರವಾಗಿ ಈ ಪಾತ್ರವನ್ನು ಸಾಮಾಜಿಕ ಜವಾಬ್ದಾರಿ ಎಂಬಂತೆ ನಿರ್ವಹಿಸುವರೆಂಬ ಆಶ್ವಾಸನೆಯೂ ಇತ್ತು. ಅಂದರೆ, ಈ ಸಂಸ್ಥೆ, ಷೇರುಪೇಟೆಯ ದಳ್ಳಾಳಿಗಳಂತೆ ಕರಡಿಯಾಗಿಯೇ, ಗೂಳಿಗಳಾಗಿಯೇ ವರ್ತಿಸದೆ, ಅಪಾಯಕಾರಿ ಸಾಹಸಮಾರ್ಗವನ್ನು ಬಿಟ್ಟು, ಜೋಪಾನವಾದ ಹೂಡಿಕೆಗಳನ್ನು ಮಾಡುವರೆಂಬ ಭರವಸೆ ಇತ್ತು. ಅದರ ಹೂಡಿಕೆಯ ಸಂಹಿತೆ ಈ ಸಂವೇದನೆಗಳನ್ನು ಪ್ರತಿಫಲಿಸುವಂತಿತ್ತು. ಹೀಗಿದ್ದುದರಿಂದಲೇ ಇದು ನಾಲ್ಕು ದಶಕಗಳ ಕಾಲ, ದೇಶದ ಅತಿ ಮೆಚ್ಚಿನ ಉಳಿತಾಯದ ಸಂಸ್ಥೆಯಾಗಿ ಬೆಳೆದು, ಇಂದು ಸುಮಾರು ೪೧೦ ಲಕ್ಷ ಹೂಡಿಕೆದಾರರನ್ನು ಪಡೆದಿದ್ದು ೭೨,೦೦೦ ಕೋಟಿ ರೂಗಳಿಗೂ ಮಿಕ್ಕ ಉಳಿತಾಯವನ್ನು ಸಂಗ್ರಹ ಮಾಡಬಲ್ಲ ಸಾಮರ್ಥ್ಯ ಬೆಳೆಸಿಕೊಂಡು, ದೇಶದ ಆರ್ಥಿಕ ರಂಗದಲ್ಲಿ ಅದರ ಪ್ರಭಾವ ಅತಿ ವ್ಯಾಪಕ ಮತ್ತು ಪ್ರಬಲವೆನ್ನಿಸಿದೆ. ತನ್ನ ಪ್ರಾರಂಭದಿಂದ ಇಲ್ಲಿಯವರೆಗೆ ಸುಮಾರು ೧,೫೦,೦೦೦ ಕೋಟಿ ರೂ.ಗಳ ಹಣಸಂಗ್ರಹ ಮಾಡಿ ೨೦,೦೦೦ ಕೋಟಿಯಷ್ಟು ಹಣವನ್ನು ಹಿಂದಿರುಗಿಸಿದುದೇ ಅಲ್ಲದೆ, ಹೂಡಿಕೆದಾರರಿಗೆ ೫೩,೦೦೦ ಕೋಟಿಯಷ್ಟು ಡಿವಿಡೆಂಡನ್ನು ಹಂಚಿದೆ. ಇಂಥ ಸಂಸ್ಥೆ ಇದ್ದಕ್ಕಿದ್ದಂತೆಯೇ ಯೂನಿಟ್ - ೬೪ ಖರೀದಿಸಿದವರಿಗೆ ಹಣ ಮರುಪಾವತಿ ನೀಡಲಾಗದ ಪರಿಸ್ಥಿತಿಗೆ ಬಂತೆಂದರೆ ಅದು ನಂಬಿಕೆ ದ್ರೋಹದ ಒಂದು ಪ್ರಚಂಡ ಆಘಾತ ಮಾತ್ರವಲ್ಲ; ಅದು ದೇಶದ ಆರ್ಥಿಕ ಸಾಮಾಜಿಕ ಕ್ಷೇತ್ರವನ್ನು ಅಲ್ಲೋಲ ಕಲ್ಲೋಲಗೊಳಿಸಿದೆ.

ಕೇತನ್ ಪಾರೀಖನ ಷೇರುಪೇಟೆ ಹಗರಣ ಬೆಳಕಿಗೆ ಬಂದೊಡನೆ, ಅದರ ಬೆನ್ನಿಗೆ ಯೂಟಿಐನ ಈ ಸಮಸ್ಯೆ ಉದ್ಭವಿಸಿರುವುದು ಅನಿರೀಕ್ಷಿತವಲ್ಲ. ಕಾರಣ ಅವನು ಚೆಲ್ಲಾಟವಾಡಿದ ಕೆಲವು ಷೇರುಗಳೇ ಯೂಟಿಐ ಬುಟ್ಟಿಯಲ್ಲೂ ಇದ್ದವು ! ಈ ಹಿಂದೆ ಹರ್ಷದ್

ಮೆಹ್ತಾ ೧೯೯೦-೯೧ರಲ್ಲಿ ಷೇರುಪೇಟೆಯ ಗೂಳಿಯಾಗಿ ಅರ್ಥವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸಿದ ಸಂದರ್ಭವೂ ಇಂದಿನ ಯೂಟಿಐನ ಪರಿಸ್ಥಿತಿಯ ಮೇಲೆ ಬೆಳಕು ಬೀರಬಲ್ಲದು. ಅಷ್ಟೇ ಏಕೆ, ಯೂಟಿಐನ ಈ ಪರಿಸ್ಥಿತಿ ಅದಕ್ಕೆ ಮಾತ್ರ ವಿಶೇಷವಲ್ಲ. ಇದರಂತೆಯೇ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ದಿವಾಳಿ ಏಳಿಸಿದ ಪರಿಸ್ಥಿತಿ, ಇದೇ ಪರಿಸ್ಥಿತಿಗೆ ಧಾವಿಸುತ್ತಿರುವ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಅಂಡ್ ರೀ ಕನ್‌ಸ್ಟ್ರಕ್ಷನ್ ಬ್ಯಾಂಕು ಮತ್ತು ಈಗಾಗಲೇ ಸರ್ಕಾರದಿಂದ ಸಾವಿರ ಕೋಟಿ ರೂಪಾಯಿಗಳ ರಕ್ತದಾನ ಪಡೆದು ಉಸಿರು ಮಾತ್ರ ಆಡುತ್ತಿರುವ ನಿರ್ವೀರ್ಯ ಇಂಡಸ್ಟ್ರಿಯಲ್ ಫೈನಾನ್ಸ್ ಕಾರ್ಪೊರೇಷನ್ ಆಫ್ ಇಂಡಿಯಾ ಸಂಸ್ಥೆ, ಇವೆಲ್ಲಾ ಮಣ್ಣು ಮುಕ್ಕುತ್ತಿರುವುದು ಷೇರುಪೇಟೆಯ ಜೂಜುಕೋರರ ಪ್ರತ್ಯಕ್ಷ ಪರೋಕ್ಷ ಪಿತೂರಿಗಳಿಂದಲೇ. ಈ ಪರಿಸ್ಥಿತಿಯನ್ನು ಎದುರಿಸುತ್ತಿರುವುದು ಸಾರ್ವಜನಿಕ ಹಣಕಾಸು ಸಂಸ್ಥೆಗಳು ಮಾತ್ರ ಎಂಬುದು ಗಮನಾರ್ಹ. ಈ ಸಮಸ್ಯೆಗಳೆಲ್ಲಾ ಒಟ್ಟೊಟ್ಟಿಗೆ ಉದ್ಭವಿಸುತ್ತಿರುವ ಸಂದರ್ಭವು, ಇದೇ ಕ್ಷೇತ್ರದಲ್ಲಿ ರಾಷ್ಟ್ರೀಯ, ಅಂತರರಾಷ್ಟ್ರೀಯ ಖಾಸಗೀ ಸಂಸ್ಥೆಗಳಿಗೆ ಬಾಗಿಲು ತೆರೆದ ಸಂದರ್ಭ. ಸಾರ್ವಜನಿಕ ಕ್ಷೇತ್ರದ ಸಂಸ್ಥೆಗಳ ನಾಶವಾಗದೆ, ಈ ಹೊಸ ಸಂಸ್ಥೆಗಳು ಮುಂಬರುವುದು ಸಾಧ್ಯವಿಲ್ಲ ಎಂದು ಲೆಕ್ಕ ಹಾಕಿವೆ. ಆರ್ಥಿಕ ಸುಧಾರಣೆಯೆಂದರೆ ಮುಕ್ತ ಮಾರುಕಟ್ಟೆ ಮುಕ್ತ ಪೈಪೋಟಿ ಎಂಬ ಪೊಳ್ಳು ಕೂಗಿಗೆ ಧಿಕ್ಕಾರವಿರಲಿ !

ಇಕ್ಕಟ್ಟಿನಲ್ಲಿ ಸಿಕ್ಕಿರುವ ಈ ಎಲ್ಲ ಸಂಸ್ಥೆಗಳಿಗೂ ಸಾಮಾನ್ಯ ವಿಷಯವೆಂದರೆ, ತಮ್ಮ ಬಂಡವಾಳ ಸಾಮರ್ಥ್ಯಕ್ಕೆ ಮೀರಿ ಸಾಲ ನೀಡಿರುವುದು, ನೀಡಿದ ಸಾಲದ ಆಧಾರ ಆಸ್ತಿಗಳು ಬೆಲೆ ಇಲ್ಲದಂತಹವಾಗಿರುವುದು ಹಾಗೂ ಸಾಲದ ಹೆಚ್ಚು ಪ್ರಮಾಣ ಕೆಲವೇ ಉದ್ದಿಮೆಗಳಲ್ಲಿ ಕೇಂದ್ರೀಕೃತವಾಗಿರುವುದು. ಮತ್ತೊಂದು ಗಮನಾರ್ಹ ವಿಷಯವೆಂದರೆ, ಬಹುಪಾಲು ಸಾಲ ನೀಡಿಕೆ ದೀರ್ಘಾವಧಿಯವು ಮತ್ತು ಈ ಸಾಲ ನೀಡಲು ಬಂಡವಾಳಕ್ಕಾಗಿ ಪಡೆದ ಸಾಲಗಳು ಮಧ್ಯ ಅಥವಾ ಲಘು ಕಾಲೀನವಾದುವು ಮತ್ತು ಹೆಚ್ಚು ಬಡ್ಡಿ ತೆರಬೇಕಾದುವು. ಅಂದರೆ ಖಂಡಿತವಾಗಿ ದಿವಾಳಿಯೇಳುವ ಎಲ್ಲ ಮಾರ್ಗಗಳನ್ನೂ ಈ ಸಂಸ್ಥೆಗಳು ಕ್ರಮಿಸಿವೆ ! ಹೊರಗಿನ ಒತ್ತಡಗಳಿಗೆ ಮಣಿದು, ಆಚಾರ ಸಂಹಿತೆಗಳನ್ನು ಮುರಿದು, ಇಂಥ ಪರಿಸ್ಥಿತಿಗೆ ತಲುಪಿವೆ. ಪರಿಣಾಮವಾಗಿ ಈ ಸಂಸ್ಥೆಗಳೆಲ್ಲಾ ತಮ್ಮ ಕ್ರೆಡಿಟ್ ರೇಟಿಂಗನ್ನು, ಅಂದರೆ ಇವುಗಳನ್ನು ಹೂಡಿಕೆಯ ದೃಷ್ಟಿಯಿಂದ ಆರೋಗ್ಯಕರ ಸಂಸ್ಥೆಯೆಂದು ನಂಬಬಹುದೇ ಇಲ್ಲವೇ ಎಂದು ನೀಡುವ ಶ್ರೇಯಾಂಕದಲ್ಲಿ ಕೆಳದರ್ಜೆಗೆ ದೂಡಲಾಗಿದೆ. ಅದೇ ಕಾರಣ ಈ ಸಂಸ್ಥೆಗಳಿಗೆ ಬೇರೆ ಸಾಲ ದೊರೆಯದ, ಸಾಲ ಹಿಂದಿರುಗಿಸಲಾಗದ ಪರಿಸ್ಥಿತಿ ಉದ್ಭವಿಸುವುದರಲ್ಲಿದೆ.

ಹರ್ಷದ್ ಮೆಹ್ತಾ ಪ್ರಕರಣದಲ್ಲಿ ಹಣ ಕಳಕೊಂಡ ಮಧ್ಯಮವರ್ಗದ ಹೂಡಿಕೆದಾರರ ಬಗ್ಗೆ, ಅಂದಿನ ವರ್ತಕ ದಳ್ಳಾಳಿಗಳ ಮನಮೋಹಕ ಅರ್ಥಮಂತ್ರಿಗಳು ಛೀಮಾರಿ ಹಾಕಿ, ಷೇರು ಪೇಟೆಯ ಜೂಜು-ಅಪಾಯಗಳು ನಿಮಗಲ್ಲ ಎಂದು ಜರಿದಿದ್ದರು. ಅವರು ಸರ್ಕಾರದ ಆಶ್ವಾಸನೆಯುಳ್ಳ ಕ್ಷೇಮಕರ ಸಂಸ್ಥೆಗಳನ್ನು ಆಶ್ರಯಿಸಬೇಕಿತ್ತು ಎಂಬುದು ಅವರ ಹಿತವಚನವಾಗಿತ್ತು. ಆದರೆ ಈ ಸಂಸ್ಥೆಗಳೂ ತಮ್ಮ ವ್ಯವಹಾರದಲ್ಲಿ ಜೂಜುಕೋರರಂತೆ ಬೇಜವಾಬ್ದಾರಿಯಿಂದ ವರ್ತಿಸಿದರೆ, ಜನತೆ ತಮ್ಮ ಉಳಿತಾಯವನ್ನು ಎಲ್ಲಿಡಬೇಕು ? ಹರ್ಷದ್ ಮೆಹ್ತಾ ಪ್ರಕರಣದ ಹಿನ್ನೆಲೆಯಲ್ಲೇ ೧೯೯೧-೯೨ರಲ್ಲಿ ಮನಮೋಹನರ ಮಾತಿಗೆ ಮನಸೋತೋ ಎಂಬಂತೆ, ಜನತೆ ಅಪಾರ ಸಂಖ್ಯೆಯಲ್ಲಿ ಯೂನಿಟ್ ಟ್ರಸ್ಟ್‌ನ ಖಾತೆಯಲ್ಲಿ ಅದರಲ್ಲೂ ಮುಖ್ಯವಾಗಿ ಯೂನಿಟ್-೬೪ ಖಾತೆಯಲ್ಲಿ ಸೇರಿದರು. **ಆ ಒಂದು ವರ್ಷದಲ್ಲಿ, ಈ ಖಾತೆಗೆ ಸೇರಿದವರ ಸಂಖ್ಯೆ ಅಭೂತಪೂರ್ವವಾಗಿ ಇಮ್ಮಡಿಯಾಯಿತು.** ಈ ಖಾತೆಯಲ್ಲಿ ಯೂನಿಟ್ ಟ್ರಸ್ಟ್ ನೀಡುತ್ತಿದ್ದ ಆದಾಯ ಅವಾಸ್ತವವೆನಿಸುವಷ್ಟು ಹೆಚ್ಚಾಗಿ, ಶೇ. ೨೬ಕ್ಕೆ ಮುಟ್ಟಿತು. ಮೋಸ ಮಾಡಲು ಹೊರಟಿರುವ ಚಿಟ್ ಫಂಡ್‌ಗಳು ಹೂಡಿಕೆದಾರರಿಗೆ ಮೊದಲಿನ ಕಂತಿನಲ್ಲೇ ಬೆಳ್ಳಿ ಬಟ್ಟಲಿನ, ಚಿನ್ನದ ಕಾಸಿನ ಇನಾಮು ಕೊಡುವುದರೊಡನೆ ಇದನ್ನು ಹೋಲಿಸಬಹುದೇ ? ಈ ಸಂಸ್ಥೆ ಇಷ್ಟೊಂದು ಆದಾಯ ಹೇಗೆ ನೀಡಬಲ್ಲದು ಎಂಬುದು ರಹಸ್ಯವಾಗೇ ಇತ್ತು. ಇಂದೂ ಯೂನಿಟ್-೬೪ರ ಹೂಡಿಕೆಯ ವಿವರವನ್ನು ಬಹಿರಂಗಪಡಿಸಿಲ್ಲ. ಎರಡನೇ, ಮೂರನೇ ಹಂತದ ನಿವೇಶನಕ್ಕೆ ವಸೂಲಿ ಮಾಡಿದ ಹಣದಿಂದ, ಮೊದಲನೇ ಹಂತದ ಅಭಿವೃದ್ಧಿ ಮಾಡುವ ಕುಖ್ಯಾತ ನಿವೇಶನ ಸಂಸ್ಥೆಗಳಂತೆ, ಯೂನಿಟ್ ಟ್ರಸ್ಟಿನವರು ಮಿಕ್ಕೆಲ್ಲಾ ಖಾತೆಗಳ ಆದಾಯವನ್ನು ಈ ಯೂನಿಟ್-೬೪ರ ಖಾತೆಗೆ ವರ್ಗಾಯಿಸಿ, ಈ ಖಾತೆಯನ್ನು ಮೆರೆಯಿಸುತ್ತಿದ್ದಿರಬಹುದೇ ? ಈ ಸಂಸ್ಥೆ ಇದೇ ಕಾಲದಲ್ಲಿ ಮೊಟ್ಟಮೊದಲು ''ವ್ಯವಹಾರದಲ್ಲಿ ಹೂಡಿಕೆ ಅಪಾಯಕರವಾದುದು, ನಾವೇನೂ ಆದಾಯ ಹೀಗೇ ಅಂತ ಭರವಸೆ ನೀಡುವುದಿಲ್ಲ'' ಎಂಬ ಎಚ್ಚರಿಕೆಯ ವಾಕ್ಯವನ್ನು ತಮ್ಮ ಪರಿಪತ್ರಗಳಲ್ಲಿ ಸೇರಿಸಲಾರಂಭಿಸಿದ್ದು ಕಾಕತಾಳೀಯವೇ ? ಸಂಗ್ರಹವಾದ ಅಪಾರ ಧನರಾಶಿಯನ್ನು ಎಚ್ಚರಿಕೆ ವಹಿಸದೆ, ಉದ್ಯಮಪತಿಗಳ, ರಾಜಕೀಯ ಶಕ್ತಿಗಳ, ಉನ್ನತ ಅಧಿಕಾರಿಗಳ ಒತ್ತಡ, ಮನ ಒಲಿಕೆ, ದಳ್ಳಾಳಿಗಳೊಡನೆ ಒಳಸಂಚು ಇವುಗಳಿಂದ ನಿರ್ದೇಶಿತರಾಗಿಯೋ ಎಂಬಂತೆ, ಪ್ರಭಾವಶಾಲಿಗಳ ಉದ್ಯಮಗಳಲ್ಲಿ ಪಕ್ಷಪಾತ ಮಾಡಿ ಬಂಡವಾಳ ಹೂಡುವುದು, ಷೇರುಪೇಟೆಯ ಏರುಪೇರಿನ ಚೆಲ್ಲಾಟದಲ್ಲಿ ಸೂಕ್ಷ್ಮವಾಗಿ ಭಾಗವಹಿಸುವ ಪರಿಪಾಠ ಬೇರೂರಿ, ಇಂದಿನ ಪರಿಸ್ಥಿತಿ ಬಂದಿದೆ ಎಂಬುದೇ ಗುಮಾನಿ. ಕಳೆದ ಮೇ ತಿಂಗಳೊಂದರಲ್ಲೇ, ಒಳ್ಳೆಯ ಬೆಲೆ ಇದ್ದಾಗ, ಮುಂಬರಲಿರುವ ಜೂನ್ ತಿಂಗಳ ಡಿವಿಡೆಂಡಿಗೂ ಕಾಯದೆ, ಯೂನಿಟ್-೬೪ರಲ್ಲಿ ಹೆಚ್ಚು ಪ್ರಮಾಣದಲ್ಲಿ ಹಣ ಹೂಡಿದ್ದ ಉದ್ಯಮಪತಿಗಳು, ಅವರ ಪ್ರತಿನಿಧಿಗಳು, ತಮ್ಮ ಯೂನಿಟ್-೬೪ ಪತ್ರಗಳನ್ನು ಮಾರಿದ್ದು ಸ್ಪಷ್ಟವಾಗಿದೆ. ಬರಲಿರುವ ಆತಂಕದ ಸುಳಿವು ಇವರಿಗೆ ಮಾತ್ರ ಹೇಗೆ ತಿಳಿಯಿತು ? ಯೂನಿಟ್ ಟ್ರಸ್ಟ್‌ನ ತಜ್ಞನೌಕರರು ಇನ್ನಿತರ ಖಾಸಗೀ ಹಣಕಾಸು ಸಂಸ್ಥೆಗಳಿಗೆ ಆಕರ್ಷಿತರಾಗಿದ್ದು, ಅವರು ಟ್ರಸ್ಟಿನ ಹಣಕಾಸಿನ ಪರಿಸ್ಥಿತಿಯ ಗುಟ್ಟು ಬಿಟ್ಟುಕೊಟ್ಟರೇ ? ಹಳೆಯ ನೌಕರರ ಮತ್ತು ಹಾಲಿ ನೌಕರರ ನಡುವೆ ಗಂಭೀರ ಸಂಬಂಧವಿದ್ದರೆ ಆಶ್ಚರ್ಯವಿಲ್ಲ. ಆದರೆ ಈ ಸುಳಿವನ್ನು ಒಂದಿಷ್ಟೂ ತಿಳಿಯದ ಬಹುಸಂಖ್ಯಾತ ಉಳಿಕೆದಾರರಿಗೆ ಮಾತ್ರ ಅವರ ಮೂಲಧನಕ್ಕೆ ಧಕ್ಕೆ ಉಂಟಾಗುವ ಪರಿಸ್ಥಿತಿ ಉದ್ಭವಿಸಿದೆ. ತನ್ನ ಇಲಾಖೆಯ ಅಧೀನದ ಅತಿ ದೊಡ್ಡ ಸಾರ್ವಜನಿಕ ಹಣಕಾಸು ಸಂಸ್ಥೆಯ ಈ ಅನರ್ಥ ತಮಗೆ ಏನೇನೂ ತಿಳಿಯದು, ಅದು ತಮ್ಮ ಜವಾಬ್ದಾರಿಯಲ್ಲ ಎಂದು ನಾಚಿಕೆ ಇಲ್ಲದೆ ಘೋಷಿಸುವ ಯಶವಂತರ ಅರ್ಥ ಸಚಿವ ಯಶಸ್ಸಿಗೆ ಯಾವ ಚಿಕ್ಕಾಸಿನ ಬೆಲೆ ? ೯೧-೯೨ರಲ್ಲಿ ಅವಾಸ್ತವವಾಗಿ ಹೆಚ್ಚು ಡಿವಿಡೆಂಡ್ ನೀಡಿ ಅಪಾರ ಹಣ ಸಂಗ್ರಹ ಮಾಡಿದ ಅನೀತಿಯ ಕಾಲದ ಆಡಳಿತಾರೂಢ ಕಾಂಗ್ರೆಸ್ ಪಕ್ಷ ತನ್ನನ್ನು ತಾನು ಹೇಗೆ ಸಮರ್ಥಿಸಿಕೊಳ್ಳಬಹುದು ? ಕಳೆದ ಒಂದು ದಶಕದಲ್ಲಿ ಯೂನಿಟ್ ಟ್ರಸ್ಟ್ ವಿಶ್ವಸ್ಥ ಸಂಸ್ಥೆ ಎಂಬ ಸ್ವರೂಪವನ್ನೂ ಕಳೆದುಕೊಂಡು,

೭ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨

ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೫

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೨೪೩೦೨




ಆಗಸ್ಟ್ ಸಂಚಿಕೆಯನ್ನು ಗಮನಿಸಿರುವೆ. ಕೆಲವು ಒಳ್ಳೆಯ ಲೇಖನಗಳಿವೆ. ನನ್ನ ಸಂಶೋಧನ ಗೆಳೆಯ ನಾಗಭೂಷಣ ಪಾಟೀಲನ ಸಾಹಿತ್ಯಿಕ ಚಳವಳಿ... ಕುರಿತಾದ ಲೇಖನವೂ ಚೆನ್ನಾಗಿದೆ. ಪತ್ರಿಕೆಯಲ್ಲಿ ಒಂದು ಪ್ರತಿಕ್ರಿಯಾತ್ಮಕ ಸಂವೇದದ ಕಾಲಂ ಇರುವುದೂ ಯೋಗ್ಯವಾಗಿದೆ. ಮತ್ತೆ ಬರೆಯುವೆ.

*ವಿದ್ಯಾರಣ್ಯ* — *ನಿಂಗಪ್ಪ ಮುದೇನೂರು*

'ಆ ಒಂದು ಚಿತ್ರ' ಲೇಖನ, ಜಗತ್ತಿನ ಧೀರ ಕ್ರಾಂತಿಕಾರಿಯಾದ ಚೆ ಗೆವಾರ ಅವರ ಫೋಟೋ ತೆಗೆದ ಕೋರ್ಡಾರ ಪರಿಚಯ ಮಾಡಿತು. ಮನಮುಟ್ಟುವ, ಇಂದೂ ಶಾಂತಿಗಾಗಿ ಪ್ರತಿಭಟಿಸುತ್ತಿರುವ ಧೀರ ಮಹಿಳೆ ಕೋನಿಯವರ ಬಗ್ಗೆ 'ಶ್ವೇತಭವನದ ಮುಂದೆ - ೨೦ ವರ್ಷ' ಲೇಖನ ತಿಳಿಸಿತು. ಹಿರೋಷಿಮಾದ ನೆನಪು ಮೂಡಿಸಿ, ಕ್ಷಿಪಣಿ, ಅಣ್ವಸ್ತ್ರ, ಪರಿಸರಗಳಂತಹ ವಿಷಯಗಳಲ್ಲಿ ಇಂದು ಜಗತ್ತಿನಲ್ಲೇ ಹಠಮಾರಿ ನಿಲುವು ಪ್ರದರ್ಶಿಸುವ ಅಮೆರಿಕಾದ ನೀತಿಗಳ ವಿರುದ್ಧ ಸಾಮೂಹಿಕ ವಿರೋಧ ಅಗತ್ಯ.

*ಕಾಸರಗೋಡು* — *ಶ್ರೀಧರಭಟ್ ಪೈವಳಿಕೆ*

ನನ್ನ ಹೆಸರಿನ ಹಿಂದೆ ಪ್ರೊ॥ ಗೆ ಬದಲಾಗಿ ಡಾ॥ ಎಂದಿರುವುದನ್ನು ಕಂಡು ನಾನು ಬೆರಗಾದೆ ! ಇದರಿಂದ ನನ್ನ ಬಗ್ಗೆ ಮತ್ತು ಪತ್ರಿಕೆಯ ಬಗ್ಗೆ ಓದುಗರಲ್ಲಿ ತಪ್ಪು ಕಲ್ಪನೆಯುಂಟಾಗುವ ಸಂಭವವಿದೆ. ಬರುವ ಸಂಚಿಕೆಯಲ್ಲಿ ಒಂದು ತಿದ್ದುಪಡಿ ಹಾಕುವುದು ಸೂಕ್ತವೇನೋ ಅನ್ನಿಸುತ್ತದೆ.

*ದಾವಣಗೆರೆ* — *ಬಿ. ವಿ. ವೀರಭದ್ರಪ್ಪ*

ನಿಟ್ಟೂರು ಶ್ರೀನಿವಾಸರಾಯರ ಮುಖಪುಟದೊಂದಿಗೆ ಬಂದ 'ಹೊಸತು' ತುಂಬ ಆಕರ್ಷಕವಾಗಿದೆ. ಶಂಕರ ತಲ್ಲೂರ ಅವರ 'ಆಯ್ಕೆ' ಕಥೆ ಓದಿದೆ. ತುಂಬಾ ಚೆನ್ನಾಗಿದೆ. ಶೀಲ ತನ್ನ ವೈಧವ್ಯದ ಅನುಭವದಲ್ಲೇ ಜೀವನದ ಗುರಿಯಿಟ್ಟುಕೊಂಡು - ನಿಜವಾದ ವಿದ್ಯಾರ್ಥಿನಿಯಾಗಿ ತನ್ನ ಜೀವನವನ್ನು ರೂಪಿಸಿಕೊಂಡಿದ್ದು - ವಿಧವೆಯರಿಗೊಂದು ಹೊಸ ಆದರ್ಶವಾಗಿ ದಾರಿದೀಪವಾಗುತ್ತಾಳೆ. ಹಸಿವು ಹಿಂಗಿಸಿದ ಕಾಮವನ್ನು ಅದುಮಿಟ್ಟುಕೊಂಡು ಚಾರಿತ್ರ್ಯವನ್ನು ಮೆರೆಯಿಸದೆ ಕರಗಿಸಿಕೊಂಡು ಕಳೆದ ಶೈಕ್ಷಣಿಕ ದಿನಮಾನಗಳು ಅವಳ ವ್ಯಕ್ತಿತ್ವದ ವಿಶೇಷ ಗುಣವೆನಿಸುತ್ತದೆ.

*ಜಮಖಂಡಿ* — *ಅರ್ಜುನ ಕೋರಟಕರ*

### ಇದು ದೇಶಪ್ರೇಮವೆ ?

ಮುಸ್ಲಿಂರನ್ನು ಎತ್ತಿಕಟ್ಟುವುದು, ಈ ರಾಷ್ಟ್ರದಲ್ಲಿ ವಿಭಜನೆಯ ವಿಷ ಬಿತ್ತುವುದು ಎಡಪಂಥೀಯರ ತಂತ್ರ ಆಗಿದೆ. ಜವರಯ್ಯ, ಶ್ರೀನಿವಾಸಮೂರ್ತಿ, ವೀರಭದ್ರಪ್ಪ ಮುಂತಾದವರ ತಪ್ಪು ಹಾಗೂ ಬೇಕಂತಲೇ ಬುದ್ಧಿ ಭೇದ ಉಂಟುಮಾಡುವ ಲೇಖನಗಳನ್ನು 'ಸಂಶೋಧನೆ' ಎಂಬ ನಾಮೆಯಲ್ಲಿ ಹಾಕಿ ಪ್ರಕಟಿಸಿ ಗೊಂದಲ ಎಬ್ಬಿಸುತ್ತೀರಿ. ಕನ್ನಡ-ತಮಿಳರಲ್ಲಿ, ಹಿಂದೂಗಳ ವಿವಿಧ ಜಾತಿ-ಪಂಗಡಗಳಲ್ಲಿ ದ್ವೇಷ ಹಚ್ಚಿ ಬೆಂಕಿ ಹರಡುವ ನಿಮ್ಮ ಕಾಯಕ ಯಶಸ್ವಿಯಾಗಗೊಡಕೂಡದು. ನಿಮ್ಮ ಬಾಯಿ ತಿಂಡಿ ತೀರಿಸಿಕೊಳ್ಳಲು ನೀವು ದೇಶಪ್ರೇಮಿಗಳನ್ನು ಯದ್ವಾತದ್ವಾ ಬೈದು ಸಂತೋಷಪಡಬಹುದು. ಆದರೆ ರಾಷ್ಟ್ರಕ್ಕಾಗಿ ಸ್ವಾರ್ಥತ್ಯಾಗದಿಂದ ದುಡಿಯುವವರು ಯಾರು ಎಂಬುದನ್ನು ಜನರು ತಿಳಿಯಲು ಸಮರ್ಥರಿದ್ದಾರೆ. ನೀವು ಪ್ರಕಟಿಸುವ ಕಥೆ, ಕವನ, ಲೇಖನಗಳಲ್ಲೂ ಇದೇ ಧೋರಣೆ ಇದೆ. ನೀವೇ ಆತ್ಮಾವಲೋಕನ ಮಾಡಿಕೊಳ್ಳುವುದು ವಿಹಿತ.

*ಬೆಳಗಾಂವಿ* — *ಪಿ. ಜಿ. ಪಾಟೀಲ*

'ಒಳ್ಳೆಯ ಓದು' ಪರಿಚಯಿಸಿದ ಸಾರಾ ಅಬೂಬಕರ್ ಪ್ರವಾಸ ಕಥನದ ಕುರಿತಾಗಿ ಬರೆದ ವಾಕ್ಯಗಳ ಮೇಲೆ ಕಣ್ಣಾಡಿಸಿದೆ. ''....ಐಷಾರಾಮದ ಜೀವನವನ್ನು ಸ್ವರ್ಗ ಸಮಾನ ಮಾತ್ರವಲ್ಲ, ಸ್ವರ್ಗವೇ ಎಂದು ಬಣ್ಣಿಸಿದ್ದಾರೆ' ಎನ್ನುವ ಮಾತು ಸತ್ಯವಾದರೆ ಅಂಥ ಪುಸ್ತಕ 'ಒಳ್ಳೆಯ ಓದು' ಹೇಗಾದೀತು ? ಹಾಗಾದರೆ ''ಐಷಾರಾಮದ ಆಳದಲ್ಲಿ'' ಸಿಗುವುದು ಸಾರಾರ ಅಭಿಪ್ರಾಯದಲ್ಲಿ ಸ್ವರ್ಗವೇ ? ಅಥವಾ ಸಾರಾರ ಮತ್ತು - ಯಾ ಇಂದಿರಾ ಕುಮಾರಿಯವರ 'ಸ್ವರ್ಗ' ಶಬ್ದ ಬೇರೆ ಬೇರೆಯೇ ?

*ಪಾಣಾಜೆ* — *ಶಂಪಾ ದೈತೋಟ*




ಜುಲೈ ೨೦೦೧ರ ಸಂಚಿಕೆಯಲ್ಲಿ ಪ್ರಕಟಗೊಂಡ ಪ್ರೊ॥ ಮ. ನ. ಜವರಯ್ಯ ಅವರ 'ಗಾಂಧಿ-ಅಂಬೇಡ್ಕರ್ ಭೇಟಿ ಪ್ರಸಂಗ' ಲೇಖನದಲ್ಲಿ ಗಾಂಧಿ-ಅಂಬೇಡ್ಕರರ ಮಾನವ ಸಂಬಂಧ ಹಾಗೂ ಜೀವನ ಪ್ರೀತಿಯನ್ನು ಗುರ್ತಿಸಿದ್ದಾರೆ. ಯಾವುದೇ ಚರಿತ್ರೆಕಾರರು ಅಥವಾ ಗಾಂಧಿ-ಅಂಬೇಡ್ಕರರ ಬಗೆಗಿನ ಸಂಶೋಧಕರು ಇಂತಹ ಅಂಶಗಳನ್ನು ಇಲ್ಲಿ ಗುರ್ತಿಸದೆ ಹೋದದ್ದು ವಿಷಾದನೀಯ.

ಪ್ರಸ್ತುತ ಘಟನೆಯ ಕುರಿತು ಎಸ್. ನಿಜಲಿಂಗಪ್ಪ ನವರು ತಮಗೆ ೧೯೯೨ರಲ್ಲಿ ನಿರೂಪಿಸಿದ್ದಾರೆ ಎಂಬ ಉಲ್ಲೇಖವನ್ನು ಲೇಖಕರು ಉದ್ಧರಿಸಿದ್ದಾರೆ; ಆದರೂ ಎಸ್. ನಿಜಲಿಂಗಪ್ಪನವರು ತಮ್ಮ ಜೀವಿತಾವಧಿಯಲ್ಲಿ ಯಾವುದೇ ವೇದಿಕೆಯಲ್ಲಾಗಲಿ ಅಥವಾ ಮಾಧ್ಯಮಗಳ ಮೂಲಕವಾಗಲಿ ಎಲ್ಲೂ ಈ ಅಂಶವನ್ನು ಪ್ರಚುರ ಪಡಿಸಿದಂತಿಲ್ಲ. ಗಾಂಧಿ-ಅಂಬೇಡ್ಕರರಾಗಲಿ, ಈ ಕುರಿತು ತಮ್ಮ ಹೇಳಿಕೆಯನ್ನು ಬಹಿರಂಗಪಡಿಸಿದ ಸಂದರ್ಭ, ಸಾಕ್ಷಿಗಳೂ ಗೋಚರಗೊಂಡಿಲ್ಲ. ಹಾಗೆಂದು ಈ ಸಂಗತಿಯನ್ನು ಅಲ್ಲಗಳೆಯುತ್ತಿಲ್ಲ. ನನ್ನಲ್ಲಿ ಹಾಗೂ ನನ್ನಂತಹ ಹಲವಾರು ಜನ ಓದುಗರಲ್ಲಿ ಇಂತಹ ಜಿಜ್ಞಾಸೆಗಳು ಮೂಡಿರಲು ಸಾಕು. ಕಾರಣ ಇದಕ್ಕೆ ಇನ್ನಷ್ಟು ಪೂರಕವಾದ ಆಧಾರಗಳು ಅವಶ್ಯ ಎಂಬುದೇ ನನ್ನ ಭಾವನೆ.

*ಪಡಗಾನೂರ, ಸಿಂದಗಿ ತಾಲ್ಲೂಕು* — *ಎ. ಎಂ. ಸಾಣಕರ*

> **ಸಂಕ್ರಮಣ ಸಾಹಿತ್ಯ ಸ್ಪರ್ಧೆ - ೨೦೦೧**
>
> ಸಂಕ್ರಮಣ ಪ್ರಕಾಶನವು ಏಕಾಂತ ನಾಟಕ, ಕಾವ್ಯ, ಸಣ್ಣ ಕಥೆ, ಹನಿಗವನ, ಲಲಿತ ಪ್ರಬಂಧ ಮತ್ತು ವೈಚಾರಿಕ ಪ್ರಬಂಧ - ಈ ಸಾಹಿತ್ಯ ಪ್ರಕಾರಗಳಲ್ಲಿ ಸ್ಪರ್ಧೆ ಏರ್ಪಡಿಸಿದೆ. ಪ್ರವೇಶಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ : ೧೫ ಅಕ್ಟೋಬರ್ ೨೦೦೧. ವಿವರಗಳಿಗಾಗಿ ಆಸಕ್ತರು ಸ್ವ - ವಿಳಾಸದ ಅಂಚೆ ಲಕೋಟೆ ಕಳಿಸಬೇಕು.
>
> **ವಿಳಾಸ :** *ಸಂಕ್ರಮಣ ಪ್ರಕಾಶನ, ೬ನೇ ಮೇನ್, ಬನಶಂಕರಿ, ೨ನೇ ಹಂತ, ಬೆಂಗಳೂರು-೫೬೦ ೦೭೦*

'ಹೊಸತು' ಪ್ರತಿ ತಿಂಗಳೂ ವಿಚಾರಪ್ರಚೋದಕವಾದ ಲೇಖನಗಳನ್ನು ಪ್ರಕಟಿಸುವುದರ ಮೂಲಕ ಓದುಗರನ್ನು ಚಿಂತನೆಗೆ ಹಚ್ಚುತ್ತಿರುವುದು ನಿಜಕ್ಕೂ ಸಂತೋಷದ ಸಂಗತಿ. ಆಗಸ್ಟ್ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ ನಿಟ್ಟೂರು ಶ್ರೀನಿವಾಸರಾವ್ ಕುರಿತ ಮುಖಪುಟ ಲೇಖನ, ಮೋಹನ ಕುಡ್ಲ ಅವರ 'ಆ ಒಂದು ಚಿತ್ರ', ಈ ತಿಂಗಳು, ಸಂಪಾದಕೀಯ ಮತ್ತು ಪಿ. ಮಹಮ್ಮದ್ ಅವರ ಶೃಂಗಸಭೆ ಕಾರ್ಟೂನ್ ನನ್ನ ಹೃದಯಕ್ಕೆ ತಟ್ಟಿದವು. ನಿಟ್ಟೂರರನ್ನು ಪೂರ್ತಿಯಾಗಿ ಪರಿಚಯಿಸುವ ಒಂದು ಪುಸ್ತಕವನ್ನೇ 'ನವಕರ್ನಾಟಕ' ಹೊರತರುವಂತಾಗಲಿ ಎಂದು ಹಾರೈಸುವೆ.

*ದೊಡ್ಡತೋಟ* — *ಜಿ. ಎಸ್. ಉಬರಡ್ಕ*

ಡಾ॥ ಬಿ. ಎನ್. ಸುಮಿತ್ರಾಬಾಯಿಯವರು ಬರೆದಿರುವ 'ಸಂಸ್ಕೃತಿ-ವಿಸ್ಮರಣೆ'ಯನ್ನು ಓದಿದಾಗ, ಫಾರಿನ್ನಿನ ಮೋಹ-ಆಮಿಷಗಳಲ್ಲಿ ತಮ್ಮನ್ನು ತಾವೇ ಒತ್ತೆಯಿಟ್ಟುಕೊಳ್ಳುತ್ತಿರುವ ಯಾವ ಯುವಕ – ಯುವತಿಯಾಗಲೀ, ಅವರನ್ನು ಈ ಗುಲಾಮಗಿರಿಗೆ 'ತಂತ್ರಜ್ಞಾನ ಜಾಗತೀಕರಣ''ದ ಹೆಸರಿನಲ್ಲಿ ಭಾರತದಿಂದ ಹೊರಗೆ ದಬ್ಬುತ್ತಿರುವ ಯಾವ ಮಾತಾಪಿತೃಗಳೇ ಆಗಲಿ, ಕಪಾಲಕ್ಕೆ ಹೊಡೆದಂತೆ ಎಚ್ಚೆತ್ತುಕೊಳ್ಳದೆ ವಿಧಿಯಿಲ್ಲ.

*ಬೆಂಗಳೂರು* — *ಡಿ. ಟಿ. ಲೋಹಿತ್ (ಕಲಾವಿದ)*

> **ಕೃಷಿ ಪತ್ರಿಕೋದ್ಯಮ ಪ್ರಶಸ್ತಿಗೆ ಆಹ್ವಾನ**
>
> ಆಸಕ್ತರು ಸೆಪ್ಟೆಂಬರ್ ೨೦೦೦ದಿಂದ ಆಗಸ್ಟ್ ೨೦೦೧ರ ನಡುವೆ ಪ್ರಕಟಗೊಂಡ ಕೃಷಿಕಪರ ಬರಹ (ಮೂಲಪ್ರತಿ)ವನ್ನು ಕಳುಹಿಸಿಕೊಡಲು ಕೋರಲಾಗಿದೆ. ಲೇಖನಗಳು ಯಾವುದೇ ಪತ್ರಿಕೆ ಅಥವಾ ನಿಯತಕಾಲಿಕದಲ್ಲಿ ಪ್ರಕಟಗೊಂಡಿರಬಹುದು. ಲೇಖನದ ಜೆರಾಕ್ಸ್ ಪ್ರತಿ ಬೇಡ. ಒಬ್ಬರು ಗರಿಷ್ಠ ಎರಡು ಲೇಖನಗಳನ್ನು ಕಳುಹಿಸಬಹುದು. ೪ ರೂ. ಸ್ಟಾಂಪ್ ಹಚ್ಚಿದ ಸ್ವವಿಳಾಸ ಬರೆದ ಲಕೋಟೆ ಅಗತ್ಯ. ಸೆಪ್ಟೆಂಬರ್ ೩೦ ಕೊನೆಯ ದಿನಾಂಕ.
>
> **ವಿಳಾಸ :** *ನಿರ್ದೇಶಕರು, ಪರ್ಯಾಯ ಕೃಷಿ ಮಾಧ್ಯಮ ಕೇಂದ್ರ, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ - ೫೮೦ ೦೦೮.*

*(ಸಂಪಾದಕೀಯ – ೫ ನೇ ಪುಟದಿಂದ)*

ಒಂದು ಸಾಧಾರಣ ಷೇರುಪೇಟೆಯ ಹಣಕಾಸು ಸಂಸ್ಥೆಯಾಗಿ ಪರಿವರ್ತಿತವಾಗಿದೆ. ಲೋಕಸಭೆಯ ಒಂದು ವಿಧೇಯಕದ ಮೂಲಕ ಸೃಷ್ಟಿಯಾದ ಈ ಸಂಸ್ಥೆ ತನ್ನ ಮೂಲೋದ್ದೇಶವನ್ನು ಲೋಕಸಭೆಯ ಒಪ್ಪಿಗೆಯಿಲ್ಲದೆ ಹೇಗೆ ತಾನೆ ಬದಲಾಯಿಸಿಕೊಳ್ಳ ಬಹುದು ? ಅದು ಹಾಗಿರಲಿ, ಇಂದು ಸಾಧ್ಯವಾದರೆ, ಇದನ್ನು ಪುನಃ 'ಟ್ರಸ್ಟ್' ವಿಶ್ವಸ್ಥ ಮಂಡಲಿಯಾಗುವ ಪ್ರಯತ್ನ ತಕ್ಷಣವೇ ಆಗಬೇಕು. ಇಲ್ಲವೇ ಆ ಪದವನ್ನು ಅದರಿಂದ ಕಿತ್ತುಕೊಳ್ಳಬೇಕು. ಈ ಸಂಸ್ಥೆಯ ಹಣದಿಂದ ನಾಲ್ಕುದಶಕಗಳ ಕಾಲ ಅಪಾರ ಪ್ರಯೋಜನ ಪಡೆದಿರುವ ಸರ್ಕಾರ, ಅದರ ಉಳಿತಾಯದಾರರಿಗೆಲ್ಲಾ ಅವರ ನ್ಯಾಯಬದ್ಧ ಹೂಡಿಕೆಯ ಎಲ್ಲಾ ಹಣವನ್ನೂ, ನ್ಯಾಯಯುತ ಬಡ್ಡಿ ಸಮೇತ ಹಿಂದಿರುಗಿಸುವ ಆಶ್ವಾಸನೆಗೆ ಮುಂದಾಗಬೇಕು. ಈಗಾಗಲೇ ಪ್ರಕಟವಾಗಿರುವ ೩೦೦೦ ಯೂನಿಟ್ಟುಗಳನ್ನು ಖರೀದಿ ಮಾಡುವ ಕ್ರಮ ಸರ್ವಥಾ ಸಾಧುವಲ್ಲ. ಸರ್ಕಾರದ ಆಶ್ವಾಸನೆಯಿಂದ ಮಾತ್ರ ಬರಲಿರುವ ಇನ್ನೂ ಹೆಚ್ಚು ಪ್ರಮಾಣದ ಆತಂಕವನ್ನು ತಪ್ಪಿಸಲು ಸಾಧ್ಯ. ವಿಶ್ವಾಸಪಾತ್ರರಾಗಿ ನಡೆದುಕೊಳ್ಳದೆ ಪೂರ್ತಿ ಕರ್ತವ್ಯಲೋಪ ನಡೆಸಿದ ಟ್ರಸ್ಟಿಗಳಿಗೆಲ್ಲಾ ಸಂಬಂಧಪಟ್ಟ ಕಾನೂನಿನನ್ವಯ ಶಿಕ್ಷೆಯಾಗಬೇಕು. ಅವರೆಲ್ಲರ ಸ್ಥಿರ-ಚರ ಆಸ್ತಿಯನ್ನು ಕಾನೂನಿನಲ್ಲಿ ಈಗಾಗಲೇ ಇರುವ ಅವಕಾಶವನ್ನು ಉಪಯೋಗಿಸಿ ಮುಟ್ಟುಗೋಲು ಹಾಕಿಕೊಳ್ಳಬೇಕು. ಮುಂದುವರಿದು, ಇತರ ಹಣಕಾಸು ಸಂಸ್ಥೆಗಳ ಬರಲಿರುವ ದುರಂತ ತಪ್ಪಿಸಲು ಈಗಿನಿಂದಲೇ ಕಾರ್ಯ ಆರಂಭವಾಗಬೇಕು. ಪೊಳ್ಳು ಆಧಾರದ ಮೇಲೆ ಸಾಲ ನೀಡಿರುವ ಅಧಿಕಾರಿಗಳನ್ನು ಶಿಕ್ಷಿಸಬೇಕು. ಯೂನಿಟ್ ಟ್ರಸ್ಟಿನ ಹೂಡಿಕೆಯನ್ನು ಮಾರುಕಟ್ಟೆಯ ಷೇರು ಪೇಟೆಯ ಏರುಪೇರಿನ ವೈಪರೀತ್ಯಕ್ಕೆ ಗಂಟುಹಾಕುವ ಹುನ್ನಾರವನ್ನು ಜನತೆ ಸಂಪೂರ್ಣವಾಗಿ ವಿರೋಧಿಸಬೇಕು. ಅದಕ್ಕೆ ಹೂಡಿಕೆಯ ಸಂಹಿತೆಯನ್ನು ಪರಿಷ್ಕರಿಸಬೇಕು. ಸಾಧಾರಣ ಜನರಲ್ಲದ ಶ್ರೀಮಂತರೂ, ಉದ್ಯಮಪತಿಗಳೂ, ಖಾಸಗೀ ಸಂಸ್ಥೆಗಳೂ, ಅಪಾರ ಹಣವನ್ನು ಯೂನಿಟ್‌ಗಳಲ್ಲಿ ತೊಡಗಿಸುವುದನ್ನು ತಡೆಯಬೇಕು. ಸರಕಾರ ಮತ್ತು ಅದರ ಇತರ ಸಂಸ್ಥೆಗಳು ತಮ್ಮ ಸಾಲದ ಅಗತ್ಯವನ್ನು ಪ್ರಪ್ರಥಮವಾಗಿ ಯೂನಿಟ್ ಟ್ರಸ್ಟ್ ಮತ್ತು ಅಂತಹ ಸಾರ್ವಜನಿಕ ಉಳಿತಾಯ ಸಂಸ್ಥೆಗಳಿಂದಲೇ ಪಡೆಯುವ ಪರಿಪಾಠವಾಗಬೇಕು. ಯೂನಿಟ್ ಟ್ರಸ್ಟ್‌ನಂಥ ಸಂಸ್ಥೆ, ದೇಶದ ಅತಿದೊಡ್ಡ ಉಳಿತಾಯ ಬ್ಯಾಂಕನ್ನು ನಡೆಸುವ ಅಂಚೆ ಇಲಾಖೆಯಂತೆ, ತನ್ನ ವಹಿವಾಟಿನ ಖರ್ಚನ್ನು ತೀರ ಮಿತಿಯಲ್ಲಿ ನಡೆಸಬೇಕು. ಪ್ರತಿ ಸಂದರ್ಭಕ್ಕೊಂದು ಜೆ.ಪಿ.ಸಿ. ನಾಟಕ ಕೈಬಿಟ್ಟು, ಇದಕ್ಕೆಂದೇ ಒಂದು ಶಾಶ್ವತ ಜಾಗೃತ ಆಯೋಗ ರಚಿಸಬೇಕು.

ಅಂಚೆ ಕಚೇರಿಯ ಉಳಿತಾಯ ಬ್ಯಾಂಕಿನ, ಭವಿಷ್ಯ ನಿಧಿಯ, ಪೆನ್ಷನ್ ಫಂಡಿನ ಹಣದ ಮೇಲೆ ಖಾಸಗೀ ಕ್ಷೇತ್ರದ ಮಾರಿಯ ಕಣ್ಣು ಬಿದ್ದಿದೆ. ಆ ಹಣವನ್ನು ವ್ಯಾಪಾರದಲ್ಲಿ ತೊಡಗಿಸುವುದು ಆರ್ಥಿಕ ಸುಧಾರೀಕರಣವೆಂದು ಒತ್ತಾಯಿಸುತ್ತಿದ್ದಾರೆ. ವಿಶ್ವ ಬ್ಯಾಂಕ್ ಮತ್ತು ವಿಶ್ವ ಹಣಕಾಸು ಸಂಸ್ಥೆಯ ಹುನ್ನಾರವು ಇದರ ಹಿಂದಿದೆ. ಕಾರ್ಮಿಕರೂ, ಜನತೆಯೂ ಇದನ್ನು ಸಂಪೂರ್ಣವಾಗಿ ವಿರೋಧಿಸಿ, ಅಗತ್ಯಬಿದ್ದರೆ ಹೋರಾಟಕ್ಕೆ ಇಳಿದು ರಕ್ಷಿಸಿಕೊಳ್ಳಬೇಕು.

ಸಾರ್ವಜನಿಕರ ಉಳಿತಾಯಕ್ಕೆ ರಕ್ಷಣೆ ನೀಡಲು ಮುಂದಾಗದ ಸರ್ಕಾರ ಉದ್ಯಮಪತಿಗಳಿಗೆ ಸಾಲ ಕೊಡುವ ಇಂಡಸ್ಟ್ರಿಯಲ್ ಫೈನಾನ್ಸ್ ಕಾರ್ಪೊರೇಷನ್‌ಗೆ ಇನ್ನಷ್ಟು ಬಂಡವಾಳ ನೀಡಲು ಮುಂದಾಗಿದೆ ಹಾಗೂ ಸಾಲ ನೀಡಲು ಪಡೆದ ಪೊಳ್ಳು ಆಸ್ತಿ ಆಧಾರಗಳನ್ನು ರೂಢಿಸಿ, ಬೆಳೆಸಿ, ಪುನರುಜ್ಜೀವನಗೊಳಿಸುವ ಸಲುವಾಗಿ ಅಸೆಟ್ ರೀಕನ್‌ಸ್ಟ್ರಕ್ಷನ್ ಕಾರ್ಪೊರೇಷನ್ ಎಂಬಂಥ ಪರ್ಯಾಯ ಸಂಸ್ಥೆಯನ್ನೇ ನಿರ್ಮಿಸಿ, ಅದು ಸಾರ್ವಜನಿಕ ಸಾಲ ಎತ್ತಲು ಅನುವಾಗುವಂತೆ ಸರ್ಕಾರದ ಗ್ಯಾರಂಟೀ ನೀಡಲೂ ಮುಂದಾಗುವುದರಲ್ಲಿದೆ. 'ಕರಸಮಾಧಾನ'ವೆಂಬ ಹೆಸರಿನಲ್ಲಿ ತೆರಿಗೆಗಳ್ಳರ ತೆರಿಗೆ ವಿನಾಯಿತಿ ಮಾಡಿದ ಕ್ರಮವನ್ನು ಈಗಷ್ಟೇ ಕೇಂದ್ರ ಸರ್ಕಾರದ ಕಂಟ್ರೋಲರ್ ಜನರಲ್ ಛೀಮಾರಿ ಹಾಕಿ ಅದರ ನಾಟಕವನ್ನು ಬಯಲಿಗೆ ಎಳೆದಿದ್ದಾರೆ. ಆಳುವವರಿಗೆ ಇದು ತಿಳಿದಿಲ್ಲವೆಂದಲ್ಲ, ಆದರೂ ಪ್ರಧಾನಿ ತಣ್ಣಗಿದ್ದಾರೆ !

ಸಾರ್ವಜನಿಕ ಕ್ಷೇತ್ರವನ್ನು ಶೋಷಿಸಿ, ರಕ್ತ ಹೀರಿ, ಆ ಮೂಲಕ ಖಾಸಗೀ ಕ್ಷೇತ್ರದ ಬೇಳೆ ಬೇಯಿಸಿಕೊಳ್ಳುವ ಆರ್ಥಿಕ ನೀತಿ ಆತ್ಮಘಾತುಕ ಮಾರ್ಗ, ಚಿನ್ನದ ಮೊಟ್ಟೆಯ ಕೋಳಿಯನ್ನು ಕತ್ತರಿಸಿದ ಆಸೆಬುರುಕುತನ. ಸಾರ್ವಜನಿಕ ಹಣಕಾಸು ಸಂಸ್ಥೆಗಳನ್ನು ಹಾಳುಮಾಡುವುದು, ಮೆದೆಗೆ ಬೆಂಕಿಹಾಕಿ ಪುರಿ ಆರಿಸಿಕೊಂಡಂತೆ !

**- ಕೆ. ಎಸ್. ಪಾರ್ಥಸಾರಥಿ**

## ಪ್ರತಿಕ್ರಿಯೆ

### ಫಲಜ್ಯೋತಿಷವು ವಿಜ್ಞಾನವೇ ?

''ಹೊಸತು'' ಜುಲೈ ೨೦೦೧ರ ಸಂಚಿಕೆಯಲ್ಲಿ ಪ್ರಕಟವಾದ ನನ್ನ ಲೇಖನಕ್ಕೆ ಶ್ರೀ ಎಚ್. ಜಿ. ನಾಗೇಶ್ (ನ್ಯಾಷನಲ್ ಸ್ಟೋರ್ಸ್, ಬೇಲೂರು-೫೭೩೧೧೫) ಪ್ರತಿಕ್ರಿಯಿಸುತ್ತಾ 'ಆಧುನಿಕ ವಿಜ್ಞಾನಕ್ಕೆ ಸಿಲುಕದ ಯಾವುದೇ ವಿಜ್ಞಾನವು ವಿಜ್ಞಾನವೇ ಅಲ್ಲವೆಂಬುದು ಎಷ್ಟು ಸಮಂಜಸ, ಇದು ಮೂರ್ಖತನದ ಪರಮಾವಧಿ ಅಲ್ಲವೇ ?... ಈ ಜ್ಯೋತಿರ್ವಿಜ್ಞಾನ ತಪ್ಪೆಂದು ಹೇಳಿಕೊಳ್ಳುತ್ತಿರುವ ಆಧುನಿಕ ವಿಜ್ಞಾನವು ಮತ್ತೊಂದು ರೀತಿಯಲ್ಲಿ ಜನಸಾಮಾನ್ಯರಿಗೆ ಜ್ಯೋತಿರ್ವಿಜ್ಞಾನದಿಂದ ಸಿಗಬಹುದಾದ ಪ್ರಯೋಜನದಿಂದ ವಂಚಿತರನ್ನಾಗಿ ಮಾಡುತ್ತಿದೆ,'' ಎಂದಿದ್ದಾರೆ.

ಇರುವುದೊಂದೇ ವಿಜ್ಞಾನ. ಇದು ಏನು ಎಂತು ಮುಂತಾದ ವಿವರಗಳು ನನ್ನ ಲೇಖನದಲ್ಲಿಯೇ ಇವೆ. ಫಲಜ್ಯೋತಿಷಕ್ಕೆ ನಿಸರ್ಗದಲ್ಲಿ ನೆಲೆ ಇಲ್ಲ, ಮಾನವನ ಅವೈಚಾರಿಕ ಭಯಗಳ ವಿಕೃತ ಶಿಶು ಅದು. ಫಲಜ್ಯೋತಿಷವು ವಿಜ್ಞಾನ ಅಲ್ಲ; ಅದೊಂದು ಅಧ್ಯಯನ ಯೋಗ್ಯ ವಿಜ್ಞಾನೇತರ ವಿಷಯವೂ ಅಲ್ಲ. ಮನೋವೈಫಲ್ಯಕ್ಕೆ ಮದ್ದು ಹುಚ್ಚರಾಸ್ಪತ್ರೆ. ಇದನ್ನು ಗಣಪಡಿಸಲು ಬೇಕಾದದ್ದು ವೈದ್ಯಕೀಯ ಶುಶ್ರೂಷೆ.

ಸ್ವಾಮಿ ವಿವೇಕಾನಂದರು ಗುಡುಗಿದ್ದಾರೆ: ''ಅನೇಕ ಮಂದಿಗೆ ದೇವರೆಂದರೆ ಹಣವೊಂದೇ. ದುರ್ಬಲ ವ್ಯಕ್ತಿಗಳು ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ತಾವು ನಿರ್ಗತಿಕರಾಗಿರುವೆವೆಂದು ತಿಳಿದಾಗ ಸಂಶಯಾಸ್ಪದ ವಿಧಾನಗಳಿಂದಾದರೂ ಹಣ ಮಾಡಲು ಹಿಂಜರಿಯುವುದಿಲ್ಲ. ಇಂಥವರು ಫಲಜ್ಯೋತಿಷ ಹಾಗೂ ಇದೇ ತೆರನಾದ ನಯವಂಚಕ ವಿಧಾನಗಳಿಗೆ ಶರಣಾಗುತ್ತಾರೆ. ನಕ್ಷತ್ರಗಳು ಬರಲಿ. ನಮಗೇಕೆ ಆ ಚಿಂತೆ ? ನಕ್ಷತ್ರವೊಂದು ನನ್ನ ಬದುಕನ್ನು ಕಲಕುವುದಾದರೆ ನಾನದಕ್ಕೆ ದುಗ್ಗಾಣಿ ಕಿಮ್ಮತ್ತೂ ಕೊಡಲಾರೆ. ಫಲಜ್ಯೋತೀಷ ಮತ್ತು ಇಂಥ ಎಲ್ಲ ನಿಗೂಢ ಅಮೂರ್ತ ವಿಷಯಗಳು ಸಾಧಾರಣವಾಗಿ ದುರ್ಬಲ ಮನಸ್ಸಿನ ವ್ಯಾಧಿ ಚಿಹ್ನೆಗಳು ಎಂಬ ಸಂಗತಿ ನಿಮ್ಮ ಗಮನಕ್ಕೆ ಬರದಿರದು. ಆದ್ದರಿಂದ ನಮ್ಮ ಮನಸ್ಸಿನಲ್ಲಿ ಇವು ವೃದ್ಧಿಸುತ್ತಿವೆ ಎಂಬ ಅರಿವು ಮೂಡಿದಾಗ ನಾವು ವೈದ್ಯರನ್ನು ನೋಡಬೇಕು, ಯೋಗ್ಯ ಆಹಾರ ಮತ್ತು ವಿಶ್ರಾಂತಿ ಪಡೆಯಬೇಕು.''

*ಮೈಸೂರು* *ಜಿ. ಟಿ. ನಾರಾಯಣರಾವ್*

**ಸಮಾಜ ವಿಜ್ಞಾನ - ಜ್ಯೋತಿಷ್ಯ : ಒಂದು ಚಿಂತನೆ**

ಸದ್ಯದ ಪರಿಸ್ಥಿತಿಯಲ್ಲಿ ಚರ್ಚೆಗೆ ಗ್ರಾಸವಾಗಿರುವ ಜ್ಯೋತಿಷ್ಯಶಾಸ್ತ್ರದ ಬಗ್ಗೆ ಹಲವಾರು ವದಂತಿಗಳಿವೆ: ಅದು ವಿಜ್ಞಾನ ವಿಷಯ ಹೌದೋ ಅಥವಾ ಅಲ್ಲವೋ ಎಂಬುದು. ಮಾನವಿಕಗಳಲ್ಲಿ ಅರ್ಥಶಾಸ್ತ್ರವಾಗಲಿ ಅಥವಾ ರಾಜ್ಯಶಾಸ್ತ್ರವಾಗಲಿ ವಿಷಯವನ್ನು ಪ್ರಾಯೋಗಿಕವಾಗಿ ನಿರೂಪಿಸಲಾರವು. ಎಲ್ಲ ಕಾಲಕ್ಕೂ ಪ್ರಸ್ತುತವೆನಿಸುವ ನಿಯಮವನ್ನು ಸೂತ್ರಗೊಳಿಸಲಾರವು. ಹಾಗಾಗಿಯೇ ಅವುಗಳನ್ನು ಸಮಾಜ ವಿಜ್ಞಾನದ ಗುಂಪಿಗೆ ಸೇರಿಸಲಾಗಿದೆ. ಆದರೆ ವಿಜ್ಞಾನವು ಪ್ರತಿಯೊಂದು ವಿಷಯವನ್ನು ಸಹ ನಿರೂಪಿಸಿ, ಅದಕ್ಕೆ ತನ್ನದೇ ಆದ ಸೂತ್ರವನ್ನು ಕಂಡುಕೊಂಡಿರುವಂತಹುದು. ಅದು ನಿಯಮವಾಗಿ ಪ್ರತಿಯೊಂದು ಸಂದರ್ಭದಲ್ಲೂ ಪ್ರಸ್ತುತತೆಯನ್ನು ಪಡೆದು ಕೊಂಡಿರುವುದು.

ಈಗ ಕೂಡಲೇ ಜ್ಯೋತಿಷ್ಯಶಾಸ್ತ್ರವನ್ನು ಒಂದು ವಿಜ್ಞಾನ ಎಂದು ಪರಿಗಣಿಸುವುದರಲ್ಲಿ ಅರ್ಥವಿಲ್ಲ. ವಿಜ್ಞಾನದ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಹಾಗೆ ಜ್ಯೋತಿಷ್ಯ ವನ್ನು ಸಹ ಸಾರ್ವಜನಿಕವಾಗಿ ಪ್ರಯೋಗಾತ್ಮಕವಾಗಿ (ಮನುಷ್ಯ ಅಥವಾ ಪ್ರಾಣಿಗಳ ಮೇಲಾಗಲಿ) ನಿರೂಪಿಸಲಿ. ಆಗ ಅದರ ಸತ್ಯಾಸತ್ಯತೆ ಅರಿವಾಗುತ್ತದೆ. ಹಿಂದೆ ಆದ ಯಾವುದೋ 'ಕಾಕತಾಳೀಯವನ್ನು' ಇಟ್ಟುಕೊಂಡು ಇದು ವಿಜ್ಞಾನವೇ ಎಂದು ಸಾರುವುದರಲ್ಲಿ ಅರ್ಥವಿಲ್ಲ. ಸಿ.ಎಸ್.ಐ.ಆರ್. ನಂತಹ ಕೇಂದ್ರೀಯ ಸಂಶೋಧನಾ ಸಂಸ್ಥೆಗಳು ಇಂತಹುದರಲ್ಲಿ ತಟಸ್ಥವಾಗಿರುವುದು ಎಲ್ಲರಲ್ಲೂ ಆಶ್ಚರ್ಯ ಮೂಡಿಸಿದೆ. ಇಲ್ಲದಿದ್ದರೆ ಜ್ಯೋತಿಷ್ಯ, ಹಸ್ತಸಾಮುದ್ರಿಕ, ಗಿಳಿಶಾಸ್ತ್ರ, ಶಕುನ ಇವೆಲ್ಲ ಕೆಸರಿಗೆ ಬಿದ್ದು ಪಕ್ಕದ ವಿಜ್ಞಾನವನ್ನು ಗಬ್ಬೆಬ್ಬಿಸುವುದು ಖಂಡಿತ.

*ಸಾಗರ* *ಎಸ್. ಎನ್. ಪ್ರಕಾಶ*

# ನಮ್ಮೊಳಗಿನ ನಾವು

ಭಾರತೀ ಕಾಸರಗೋಡು




**ಮಾ**ನಸ ಗಂಗೋತ್ರಿಯಲ್ಲಿ ಓದುತ್ತಿದ್ದಾಗಿನ ಸರಳ ಸುಂದರ ದಿನಗಳವು. ಸೌಂದರ್ಯ ಶಾಸ್ತ್ರವನ್ನು ಪಾಠ ಮಾಡುತ್ತಾ ಪ್ರಾಧ್ಯಾಪಕರು ಒಂದು ದಿನ ನಮ್ಮನ್ನೊಂದು ಪ್ರಶ್ನೆ ಕೇಳಿದರು -

''ಸುಖ ಎಂದರೇನು ?''

ತರಗತಿಯಲ್ಲಿ ಏಕಾಏಕಿ ತಾತ್ವಿಕ ಮೌನ ! ಬಹಳ ಗಹನವಾದ ಪ್ರಶ್ನೆ ಇದೆಂದೇ ನಮಗೆಲ್ಲ ತೋರಿತು. ಯಾಕೆಂದರೆ ಪ್ಲೆಶರ್‌ನ ಕಲ್ಪನೆ ಒಬ್ಬೊಬ್ಬರಲ್ಲಿ ಒಂದೊಂದು ಬಗೆ !... ನಿರೂಪಿಸುವುದಾದರೂ ಹೇಗೆ ? ಹದಿಹರೆಯವನ್ನು ದಾಟದಿದ್ದ ನಮ್ಮಂಥ ಕೆಲವರಿಗೆ ಮಾವಿನ ತುರಿ ಬೆರೆತ ಚುರುಮುರಿ ತಿನ್ನುವುದೇ ಪರಮ ಪ್ಲೆಶರ್ ! ಆದರೆ ಮುಖಾಮುಖಿ ಅದನ್ನು ಪ್ರಾಧ್ಯಾಪಕರಿಗೆ ಹೇಳುವ ಧೈರ್ಯವಿಲ್ಲದೆ ದಡ್ಡರಂತೆ ಕೂತಿದ್ದೆವು. ಜಟಿಲವೆಂದು ಕಂಡ ಒಗಟನ್ನು ಕಡೆಗೆ ಪ್ರಾಧ್ಯಾಪಕರೇ ಸರಳವಾಗಿ ಬಿಡಿಸಿಬಿಟ್ಟರು -

''ನೋವಿಲ್ಲದಿರುವುದೇ ಸುಖ.''

ಪ್ಲೆಶರ್‌ಗೆ ಇದಕ್ಕಿಂತ ಸಮರ್ಪಕವಾದ ಲಕ್ಷಣ ಇರಬಹುದೆಂದು ನನಗಂತೂ ಅನ್ನಿಸುವುದಿಲ್ಲ. ನೋವುಗಳಿಲ್ಲದ ನಿರಾಳವೇ ನಲಿವು. ಹೌದು, ಇಂಥ ಸರಳ ಸಂತೋಷದ ಹುಡುಕಾಟವೇ ನಮ್ಮೆಲ್ಲರ ದಿನನಿತ್ಯದ ಹೋರಾಟ.

ಖಿನ್ನತೆ ಬಾಧಿಸದ ಮನಸ್ಸು ಯಾವುದು ? ಜೀವನದ ಬೇರೆ ಬೇರೆ ಅವಸ್ಥೆಗಳಲ್ಲಿ ಬೇರೆ ಬೇರೆ ಸಂಕಟಗಳಿಗೆ ಒಳಗಾಗಿ ನಲುಗದ ಮನುಷ್ಯರು ಯಾರು ? ದುಮ್ಮಾನವೆಂಬುದು ಬಲುಭಾರ... ಹೊತ್ತು ತಿರುಗುವುದಂತೂ ಇನ್ನೂ ಪ್ರಯಾಸ ! ಹೀಗಾಗಿ ಅವುಗಳ ಬಿಡುಗಡೆಯ ಕಿರುದಾರಿಗಳಿಗಾಗಿಯೇ ನಾವು ಸದಾಕಾಲ ವಿವಶರಾಗಿ ಹುಡುಕಾಡುತ್ತಿರುತ್ತೇವೆ. ಯಾಕೆಂದರೆ ಭಾವನೆಗಳ ಆರೋಗ್ಯಕರ ವಿನಿಮಯದಲ್ಲಿ ಮನುಜಕುಲದ ಯೋಗಕ್ಷೇಮವಿದೆ. ಜತೆಜತೆಗೆ ನಮ್ಮ ಸಹವರ್ತಿಗಳ ಹೃದಯಗಳನ್ನು ಸಾಂತ್ವನಗೊಳಿಸುವಲ್ಲಿ, ಅವರ ಬುದ್ಧಿ-ಮನಸ್ಸುಗಳನ್ನು ತಿಳಿಗೊಳಿಸುವ ಪ್ರಯತ್ನಗಳಲ್ಲಿ ಕೂಡ ಹೆಚ್ಚಿನ ಸಾರ್ಥಕ್ಯವಿದೆ. ಎಲ್ಲ ಲಲಿತಕಲೆಗಳ ಮೂಲೋದ್ದೇಶವೂ ಇದೇ ತಾನೇ ?

ಮನುಷ್ಯನ ಮೊದಲ ಆಸ್ತಿ ಮನಶ್ಶಾಂತಿ. ಒಳಗೊಳಗೇ ಕಾಡಿ ಪೀಡಿಸುವ ದುಗುಡ ದೂರಾಗಬೇಕು. ನಿರ್ಮಲ ಹರ್ಷ ಚಿತ್ತವನ್ನಾವರಿಸಬೇಕು. ಇದು ಪ್ರತಿಯೊಬ್ಬರ ಅಂತರಂಗದ ತುಡಿತ. ನೆಮ್ಮದಿಯನ್ನು ಹುಡುಕಿಕೊಳ್ಳುವ ರೀತಿ ಅವರವರ ಮಾನಸಿಕ ವ್ಯವಸಾಯಕ್ಕೆ, ಸ್ವಭಾವ ಸಂಸ್ಕಾರಕ್ಕೆ, ಅನುಗುಣವಾಗಿರುತ್ತದೆ. ಸಾಹಿತ್ಯ, ಸಂಗೀತ, ಸಮಾಜಸೇವೆ, ಸಜ್ಜನ ಸಂಪರ್ಕ – ಹೀಗೆ ಅವರವರಿಗೆ ಪ್ರಿಯವಾದ ಮಾಧ್ಯಮಗಳಲ್ಲಿ ಸಮಾಧಾನವನ್ನು ಅರಸುವ ಕ್ರಿಯೆ ನಿರಂತರವಾಗಿ ಸಾಗಿದೆ. ಹಾಗೆ ನೋಡಿದರೆ ಒಳ್ಳೆಯವರೊಂದಿಗೆ ಸಹವಾಸ ಮತ್ತು ಮಾತುಕತೆ ಹೊಸ ಬೆಳಕಿಗೆ ಹತ್ತಿರದ ದಾರಿ. ಈಗಾಗಲೇ ಅನುಭವಗಳಲ್ಲಿ ಪಳಗಿ, ನೋವುಗಳಲ್ಲಿ ಮಾಗಿ ಅವರು ಕಂಡುಕೊಂಡಿರುವ ಸತ್ಯದರ್ಶನಗಳು ನಮಗೆ ರೆಡಿಮೇಡ್ ಫುಡ್ ! ಸರಿಯಾದ ಕಾಲದಲ್ಲಿ ಸರಿಯಾದ ಅಳತೆಗಳಲ್ಲಿ ಸೇವಿಸಿಬಿಟ್ಟರೆ ಸರಿ. ಕಳೆದುಹೋದ ಧೈರ್ಯವನ್ನು, ಉಡುಗಿಹೋದ ಪ್ರಾಣವನ್ನು ಮರಳಿ ಪಡೆದುಕೊಳ್ಳಬಹುದು.

ಎಷ್ಟೇ ಜೀವದಯೆ ಉಳ್ಳವರಾದರೂ, ಎಲೆ ಮರೆಯ ಹೂಗಳಂತೆ ಬಾಳಲು ಯತ್ನಿಸಿದರೂ, ಕ್ಲೇಶ ಯಾರಿಗೂ ತಪ್ಪಿದ್ದಲ್ಲ. ಕಷ್ಟ ಬಂದಾಗ ಮನಸ್ಸು ಕಂಗೆಡುತ್ತದೆ. ''ಇದೇ ಜೀವನಪೂರ್ತಿ ಶಾಶ್ವತವೋ... ನಾವೇನು ನಿತ್ಯ ದುಃಖಿಗಳೋ ?...'' ಎಂಬೆಲ್ಲ ಭ್ರಾಂತಿಗಳು ಮುಸುಕಿ ಧೈರ್ಯ ಮಸುಕಾಗುತ್ತದೆ. ಆದರೆ ಅಂಥ ಹತಾಶೆಗೆ ಅವಕಾಶವಿಲ್ಲ. ಯಾಕೆಂದರೆ ಪ್ರಪಂಚದಲ್ಲಿ ಯಾವುದೂ ಶಾಶ್ವತವಲ್ಲ. ಸೂರ್ಯ ಚಂದ್ರರೂ ಕೂಡ ! ನೆಳಲಿನ ನಂತರ ಬೆಳಕು; ನೋವನ್ನನುಸರಿಸಿ ನಲಿವು. ಕಾಳಿದಾಸ 'ಮೇಘದೂತ' ಕಾವ್ಯದ ಕಡೆಯಲ್ಲಿ ಹೇಳುವಂತೆ....

ಯಾರು ಬರಿಯ ಸುಖ ಬರಿಯ ದುಃಖ
ಪಟ್ಟವರು ಲೋಕದಲ್ಲಿ ?
ದೆಸೆಯು ಕೆಳಗೆ ಮೇಲಾಗಿ ತಿರುಗುವುದು
ಏಕಚಕ್ರದಲ್ಲಿ !
ಇಂಥ ಭರವಸೆ ಚಳಿಗಾಲದ ಎಳೆ ಬಿಸಿಲು...
ಹುಳಿಯೊಳಗಣ ಸಿಹಿ... ಸಪ್ಪೆ ಮುಖದಲ್ಲೊಂದು ನಗೆ ಮಿನುಗು !

''ಯಾಕೋ ಮನಶ್ಶಾಂತೀನೇ ಇಲ್ವಲ್ಲ!'' ಯಾರಾದರೂ ಹೀಗೆ ಪರದಾಡಿದರೆ ನಮ್ಮ ಹಿರಿಯರೊಬ್ಬರು ಕೀಟಲೆಯಾಗಿ ಹೇಳುತ್ತಿರುತ್ತಾರೆ : ''ಅದು ಯಾವ ಅಂಗಡೀಲಿ ಸಿಗುತ್ತೆ ಸ್ವಲ್ಪ ಹೇಳಿಬಿಡು. ಈಗಲೇ ಹೋಗಿ ಒಂದು ಮೂಟೆ ತಂದುಬಿಡ್ತೇನೆ.'' ಸಾಧ್ಯವಿಲ್ಲ. ಹಾಗೆ ಹೊರಗಿನಿಂದ ತಂದು ಪೂರೈಸುವ ವಸ್ತುವೇ ಅಲ್ಲ ಅದು. ಆಕಾಶದಲ್ಲಿ ತೇಲಿ ಪ್ರಪಂಚ ಪರ್ಯಟನೆ ಮಾಡಿಬಿಡಬಹುದು. ಮಡುವಿನಾಳದಲ್ಲಿ ಮುಳುಗಿ ಮೀಯಬಹುದು. ಆದರೆ ನಮ್ಮೊಳಗೇ ಅಡಗಿ ನಮಗೇ ಸಿಗದೆ ಸತಾಯಿಸುವ ಚಿತ್ತ ಸಮಾಧಾನವನ್ನು ಕಂಡುಕೊಳ್ಳುವುದು ಕಷ್ಟ. ಕಷ್ಟವೇನೋ ಹೌದು. ಆದರೆ ಅಸಾಧ್ಯವಲ್ಲ. ಇದೊಂದು ಕತೆ ಕೇಳಿ : ನನ್ನ ಗೆಳತಿಯೊಬ್ಬಳಿಗೆ ನಿತ್ಯ ದಿನಚರಿಯ ಏಕತಾನತೆ, ವೇಗದ ಬದುಕಿನ ಕಿರಿಕಿರಿ, ಬೇಸರ ತರಿಸಿತ್ತು. ಕ್ರಮೇಣ ಸಿಟ್ಟು, ಸೆಡವು, ಅಸಮಾಧಾನ ಹೆಚ್ಚಾದವು. ಆದರಾಕೆ ತನ್ನಿಂದ ಯಾರಿಗೂ ತೊಂದರೆಯಾಗಬಾರದೆಂಬ ಕಾಳಜಿಯನ್ನು ಉಸಿರಲ್ಲೇ ಹೊತ್ತವಳು. ಬೇರೆಯವರ ಸಂಕಷ್ಟಗಳನ್ನು ಕೂಡ ಕರುಣೆಯಿಂದ ವಿಮರ್ಶಿಸಿ, ತನ್ನಿಂದ ಸಾಧ್ಯವಾಗಬಹುದಾದಂಥ ಪರಿಹಾರಕ್ಕೆ ಸಕಾಲದಲ್ಲಿ ಸ್ಪಂದಿಸುವವಳು. ಅಂಥದ್ದರಲ್ಲಿ ಸ್ವತಃ ತನ್ನ ದೋಷಗಳೇ ಪರಿಸರಕ್ಕೆ ಮಾರಕವಾಗುವುದನ್ನು ಸಹಿಸಿಯಾಳೆ ? ಕೂಡಲೇ ಆಪ್ತ ವೈದ್ಯೆ ನಿರ್ಮಲಾರ ಬಳಿ ಹೋಗಿ ''ಇದಕ್ಕೇನು ಮದ್ದು ಡಾಕ್ಟರೇ ?'' ಎಂದು ಕೇಳಿದಳು. ಅವರು ಇವಳನ್ನು ಮೊದಲಿನಿಂದ ಬಲ್ಲವರಾದ್ದರಿಂದ ಇವಳ ಹಾವ-ಭಾವಗಳನ್ನು ಪ್ರೀತಿಯಿಂದ ಅವಲೋಕಿಸಿ, ಹೊಟ್ಟೆ ತುಂಬ ನಕ್ಕು, ''ಯಾವ ಮದ್ದೂ ಬೇಡ, ಶಕ್ತಿಮೀರಿ ಕೆಲಸ ಮಾಡು. ಪುಟ್ಟ ಮಕ್ಕಳೊಡನೆ ಹೆಚ್ಚು ಹೆಚ್ಚು

ಕಾಲ ಕಳಿ. ಬಂಡಿಗಟ್ಟಲೆ ಸಮಾಧಾನ ಬೇಡ ಅಂದರೂ ಸಿಗುತ್ತೆ !'' ಎಂದು ಪರಿಹಾಸ ಮಾಡಿ ಕಳಿಸಿಕೊಟ್ಟರು. ಅವರ ನಿಷ್ಕಳಂಕ ನಗುವೇ ಈಕೆಗೆ ಸಂಜೀವಿನಿಯಾಯ್ತು !

ಸಮಾಧಾನವೂ ತಾಳ್ಮೆಯೂ ಜತೆಗಾರರು. ಶರೀರವನ್ನು ದಿನಕ್ಕೊಮ್ಮೆ ತೊಳೆದರೆ ಸಾಕು. ಮನಸ್ಸನ್ನು ಮಾತ್ರ ತಾಳ್ಮೆಯ ಲೇಪನದಿಂದ ಪ್ರತಿಕ್ಷಣವೂ ಹೊಳಪುಗೊಳಿಸುತ್ತಲೇ ಇರಬೇಕು. ಇಲ್ಲದಿದ್ದರೆ ಕಿಲುಬುಗಟ್ಟುತ್ತದೆ.

ಸಹನೆಯ ಮಾತು ಬಂದಾಗಲೆಲ್ಲ ಥಟ್ಟನೆ ನೆನಪಾಗುವುದು ಬಹುಮುಖ ವ್ಯಕ್ತಿತ್ವದ ಎಚ್. ವಿ. ನಂಜುಂಡಯ್ಯನವರು. ಅವರ ಸ್ವಭಾವ ರಭಸಕ್ಕೆ ವಿರುದ್ಧವಾದದ್ದು. ಯಾವುದೇ ವಿಷಯದಲ್ಲೂ ಅವರಿಗೆ ಆತುರವಿರಲಿಲ್ಲ. ಎಲ್ಲೋ ಏನೋ ತಪ್ಪಾಗಿದೆಯೆಂದು ಯಾರಾದರೂ ಅವರಿಗೆ ಹೇಳಿದರೆ, ಶಾಂತವಾಗಿ ತಲೆದೂಗುತ್ತಾ ''ಆಗಲಿ, ಆಗಲಿ: ತಿದ್ದೋಣ'' ಎಂದು ಅಪ್ಪಣೆ ಕೊಡಿಸುವರು. ತಿದ್ದುವುದಕ್ಕೆ ಆಗುವುದಿಲ್ಲ ಅಂದರೆ ''ಆಗದಿದ್ದರೆ ಬೇಡ. ಮಿಂಚಿಹೋದದ್ದೇನು ?'' ಅನ್ನುವರು. ಮಿಂಚಿಯೂಹೋಯ್ತು ಅಂದರೆ ಕೂಡಲೇ ಎರಗುತ್ತಿತ್ತು ಮಿಂಚಿನಂಥ ಉತ್ತರ. ''ಇನ್ನು ಚಿಂತಿಸಿ ಪ್ರಯೋಜನವೇನು ? ಅನುಭವಿಸೋಣ !''

ಡಾ|| ವಿ. ದೊರೆಸ್ವಾಮಿ ಅಯ್ಯಂಗಾರ್ಯರು ಹೃದಯಸ್ಪರ್ಶಿ ಘಟನೆಯೊಂದನ್ನು ಆಗಾಗ ನೆನಪು ಮಾಡಿಕೊಳ್ಳುತ್ತಿದ್ದರು. ಅದು ಉಸ್ತಾದರೊಬ್ಬರಿಗೆ ಸಂಬಂಧಪಟ್ಟದ್ದು. ಪ್ರಶಾಂತ ಸ್ವಭಾವದ ರಾಗಗಳನ್ನು ಹಾಡುವುದರಲ್ಲಿ ಈ ಉಸ್ತಾದರು ಅವರಿಗೆ ಅವರೇ ಸಾಟಿ. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದರಲ್ಲಿಯೂ ಹಾಗೆಯೇ! ಅವರ ಒಂದೊಂದು ನಡೆ ನುಡಿಯೂ ಹದಗೊಂಡ ಶ್ರುತಿ... ಶ್ರುತಿಯಂತೆ ಸಂಗೀತ... ಸಂಗೀತದಂತೆ ಜೀವನ. ಒಂದು ಸಾರಿ ಗಾಯನ ಕಾರ್ಯಕ್ರಮವಾಗಿ ಅವರು ಬೇರೆ ಊರಿಗೆ ರೈಲಿನಲ್ಲಿ ಪ್ರಯಾಣಿಸುತ್ತಿದ್ದರು. ದಾರಿಯಲ್ಲಿ ಇದ್ದಕ್ಕಿದ್ದಂತೆ ಆಯಾಸ ತಲೆದೋರಿ, ಮಧ್ಯದಲ್ಲೇ ಇಳಿದುಬಿಟ್ಟರು. ನಿಲ್ದಾಣದ ಮೂಲೆಯೊಂದರಲ್ಲಿ ಮೆಲ್ಲಗೆ ಕಂಭಕ್ಕೊರಗಿ ಕೂತು ಶಿಷ್ಯರಿಗೆ ಹೇಳಿದರು: ''ನಾನು ಅಲ್ಲಾನ ಬಳಿ ಹೊರಟೆ... ನೀವಿಬ್ಬರೂ ನನ್ನ ಹತ್ತಿರ ಕೂತು ತಂಬೂರಿ ಹಾಕುತ್ತಿರಿ.'' ಶಿಷ್ಯರಿಗೆ ದುಃಖವಾದರೂ ಗುರುಗಳ ಆಜ್ಞೆಯಂತೆ ಎಡ-ಬಲಗಳಲ್ಲಿ ಕುಳಿತು ಮಧುರವಾಗಿ ಶ್ರುತಿ ಹಾಕತೊಡಗಿದರು. ಮುಕ್ತಿಗಾಗಿಯೇ ಸೃಷ್ಟಿಗೊಂಡಂತಿದ್ದ ಆ ಪ್ರಶಾಂತ ನಾದದಲೆಗಳಲ್ಲಿ ಒಂದಾಗಿ, ಮೇಲೇರಿ, ಆ ಹಾಡುಗಾರನ ಜೀವಹಕ್ಕಿ ಹಾರಿಹೋಯಿತು. ಯಾವುದೇ ವ್ಯಕ್ತಿ ಬಯಸಬಹುದಾದ ಚರಮ ಸಮಾಧಾನ ಇದು ! ಈ ಕತೆ ಹೇಳುತ್ತಿದ್ದ ದೊರೆಸ್ವಾಮಿ ಅಯ್ಯಂಗಾರ್ಯರು ಕೂಡ ಶರಣನ ಮರಣವನ್ನೇ ಹೊಂದಿದರು ಅನ್ನುವುದು ಗಮನಾರ್ಹ ಸಂಗತಿ.

ನಮ್ಮ ಮನೆಯ ಹತ್ತಿರ ಮಹಿಳೆಯೊಬ್ಬರಿದ್ದಾರೆ. ಕೆಲವು ವರ್ಷಗಳ ಹಿಂದೆ ಅವರ ಯಾವ ತಪ್ಪೂ ಇಲ್ಲದೆ ಅಪಘಾತಕ್ಕೀಡಾಗಿ ಬಲಗಾಲನ್ನು ಕಳೆದುಕೊಂಡರು. ಇದರಿಂದೇನೂ ಆಕೆ ಕಂಗೆಡಲಿಲ್ಲ. ಮಿಡ್ಲ್‌ಸ್ಕೂಲಿನಲ್ಲಿ ಟೀಚರ್ ಆಗಿದ್ದವರು ಎಂ.ಎ. ಮಾಡಿ ಮುಗಿಸಿ ಅದೇ ಸಂಸ್ಥೆಯಲ್ಲಿ ಲೆಕ್ಚರರ್ ಆಗಿದ್ದಾರೆ. ಮನೆಯಲ್ಲಿ, ಕಾಲೇಜಿನಲ್ಲಿ, ಕರ್ತವ್ಯಗಳನ್ನು ಸಮಾನ ದಕ್ಷತೆಯಿಂದ ನಿರ್ವಹಿಸಿಬಿಡುತ್ತಾರೆ. ಹಾಗೆ ನೋಡಿದರೆ ಅಂಗವಿಕಲರಾದ ನಂತರ ಆಕೆಯ ಜೀವನೋತ್ಸಾಹ ಹೆಚ್ಚಾಗಿದೆ. ಅಧ್ಯಯನದಲ್ಲಿ ಆಸಕ್ತಿ ಇರುವಂತೆ ಸಂಸಾರದ ಸಣ್ಣ ಪುಟ್ಟ ವಿಷಯಗಳಲ್ಲೂ ವಿಪರೀತ ಕಾಳಜಿ. ಹಬ್ಬ-ಹರಿದಿನಗಳಲ್ಲಿ ಆಕೆಯ ಸಂಭ್ರಮ ಹೇಳತೀರದು. ಅವರ ಅಡಿಗೆ ಮನೆ ಹಿಂದಿನ ದಿನದಿಂದಲೇ ಬಗೆಬಗೆಯ ಪರಿಮಳವನ್ನು ಸೂಸತೊಡಗುತ್ತದೆ. ಅಪರೂಪದ ಉಂಡೆ-ಚಕ್ಕುಲಿಗಳನ್ನು, ಅಪ್ಪ-ಅತಿರಸಗಳನ್ನು ತಯಾರಿಸುತ್ತಾರೆ. (ನನ್ನನ್ನೂ ಕರೆಯುತ್ತಾರೆ ಪಾಪ !) ಆಕೆಯ ಕಾರ್ಯದಕ್ಷತೆ ಸೋಜಿಗ ಹುಟ್ಟಿಸುವಂಥದ್ದು. ಮೊನ್ನೆ ಒಂದು ದಿನ ನನ್ನ ಹತ್ತಿರ ಹೇಳುತ್ತಿದ್ದರು - ''ಎಲ್ಲ ಆಯ್ತು ನೋಡಿ. ಪಿಎಚ್.ಡಿ. ಮಾಡಬೇಕೂಂತ ಒಂದೇ ಆಸೆ ನಂಗೆ ! ತಕ್ಕಷ್ಟು ಪ್ರಯತ್ನಾನೂ ಪಡ್ತಾ ಇದ್ದೀನಿ.... ನೋಡೋಣ, ಏನಾಗುತ್ತೋ !'' ಅವರ ಮಿನುಗು ಕಣ್ಣುಗಳಲ್ಲಿ ಭವಿಷ್ಯದ ಹೊಸ ಕನಸುಗಳು ಕುಣಿಯುತ್ತಿದ್ದವು.

ಇಂಥ ಆತ್ಮವಂತರನ್ನು ಕಂಡೇ ಆಲ್ಡಸ್ ಹಕ್ಸ್‌ಲೀ ಹೇಳಿರುವುದು :

'ನೀವು ಉತ್ತಮಗೊಳಿಸಬಹುದಾದ್ದು ವಿಶ್ವದಲ್ಲಿ ಒಂದೇ ಒಂದು ಮೂಲೆಯಿದೆ; ಅದೇಂದರೆ, ಸ್ವತಃ ನೀವೆ.'

ಭಾರತೀ ಕಾಸರಗೋಡು
೮೩, ೨ನೇ ಮಹಡಿ, ೫ನೇ 'ಬ' ಮುಖ್ಯರಸ್ತೆ, ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು - ೪೦

# ಬಗೆಹರಿಯಲೇಬೇಕಾದ ಭಾರತದ ಬೃಹತ್ ಸಮಸ್ಯೆಗಳು

**ಕ**ಳೆದ ಮೇ ೧೧ರಂದು ನಾವು ನೂರು ಕೋಟಿ. ತೀವ್ರಗತಿಯಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಯ ಬಗ್ಗೆ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರು ಗಂಭೀರ ಕಳವಳ ವ್ಯಕ್ತಪಡಿಸಿದ್ದಲ್ಲದೆ ಜನಸಂಖ್ಯಾ ವೃದ್ಧಿಯನ್ನು ತಡೆಗಟ್ಟುವ ಮಾರ್ಗೋಪಾಯಗಳನ್ನು ಕೈಗೊಳ್ಳಲು ರಾಷ್ಟ್ರೀಯ ಆಯೋಗದ ರಚನೆಯನ್ನು ಪ್ರಕಟಿಸಿದರು. ಲಂಗುಲಗಾಮಿಲ್ಲದೆ ಏರುತ್ತಿರುವ ಜನಸಂಖ್ಯೆಯು ನಮ್ಮ ಆರ್ಥಿಕ, ನೈಸರ್ಗಿಕ ಮತ್ತು ಇತರ ಸಂಪನ್ಮೂಲದ ಮೇಲೆ ಪರಿಣಾಮ ಬೀರುತ್ತಿದೆ. ಜನಸಂಖ್ಯೆಯನ್ನು ಸ್ಥಿರೀಕರಿಸುವ ಬಗ್ಗೆ ಆತ್ಮಾವಲೋಕನ ನಡೆಯಬೇಕಾಗಿದೆ. ಈ ನಿಟ್ಟಿನಲ್ಲಿ ರಾಷ್ಟ್ರೀಯ ಜನಸಂಖ್ಯಾ ನೀತಿಯ ಪರಾಮರ್ಶೆ, ನಿಗಾವಣೆ ಮತ್ತು ಅನುಷ್ಠಾನಕ್ಕಾಗಿ ರಾಷ್ಟ್ರೀಯ ಜನಸಂಖ್ಯಾ ಆಯೋಗವನ್ನು ರಚಿಸಲಾಗಿದೆ ಎಂದು ಪ್ರಧಾನಿ ಹೇಳಿದರು.

ನಿಜ, ಭಾರತದ ಬೃಹತ್ ಸಮಸ್ಯೆಗಳಲ್ಲಿ ಜನಸಂಖ್ಯಾ ಹೆಚ್ಚಳವೂ ಒಂದಾಗಿದೆ. ಹೆಚ್ಚುತ್ತಿರುವ ಜನಸಂಖ್ಯೆಯನ್ನು ನಮ್ಮ ನೆರೆಯ ರಾಷ್ಟ್ರವಾದ ಚೀನ ಯಶಸ್ವಿಯಾಗಿ ನಿಯಂತ್ರಿಸಿದೆ. ನಮಗೇಕೆ ಸಾಧ್ಯವಾಗುತ್ತಿಲ್ಲ ಎಂಬುದನ್ನು ನಮ್ಮ ರಾಜಕಾರಣಿಗಳು, ಆಡಳಿತಗಾರರು, ಬುದ್ಧಿ ಜೀವಿಗಳು ಯೋಚಿಸಬೇಕಾದ ವಿಷಯ. ಜನಸಂಖ್ಯಾ ವೃದ್ಧಿಯನ್ನು ನಿಯಂತ್ರಿಸಲಾಗದಿದ್ದರೆ ಜನಸಂಖ್ಯೆಯನ್ನು ಜನಸಂಪತ್ತನ್ನಾಗಿ ಪರಿವರ್ತಿಸಿಕೊಳ್ಳಲು ಸಾಧ್ಯವಿಲ್ಲವೆ ? ಇಲ್ಲಿರುವ ಅಪರಿಮಿತ, ಅಮೂಲ್ಯ ನೈಸರ್ಗಿಕ ಸಂಪತ್ತನ್ನು ದೇಶದ ಅಭಿವೃದ್ಧಿಗೆ ಬಳಸಲು ಸಾಧ್ಯವಾಗದೇಕೆ ? ಇದರಿಂದ ಎರಡು ವಿಧ ಪ್ರಯೋಜನವಾಗುತ್ತದೆ. ಒಂದು, ಬೃಹತ್ ಸಮಸ್ಯೆಯಾದ ನಿರುದ್ಯೋಗದ ನಿವಾರಣೆ. ಸಾವಿರಾರು ಕೈಗಳಿಗೆ ಕೆಲಸ. ಎರಡನೆಯದು ದೇಶದ ಅಭಿವೃದ್ಧಿ . ಮೂಲಭೂತ ಸೌಕರ್ಯಗಳ ಪೂರೈಕೆ.

ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ಕಂಪ್ಯೂಟರೀಕರಣ ಇತ್ಯಾದಿ ಕರಣಗಳಿಂದ ಇಂದು ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಲಕ್ಷ ಲಕ್ಷ ಶಿಕ್ಷಿತ ಅಶಿಕ್ಷಿತ ನಿರುದ್ಯೋಗಿಗಳು ದಿನದಿನವೂ ಅಧಿಕವಾಗುತ್ತಿದ್ದಾರೆ. ಉದ್ಯೋಗವಿಲ್ಲದ್ದರಿಂದ, ಮಡದಿ ಮಕ್ಕಳನ್ನು ನೀರಿಗೆಸೆದು ಪ್ರಾಣತೆತ್ತ ಹಲವಾರು ಕಾರ್ಮಿಕರ ಪ್ರಕರಣ ಪತ್ರಿಕೆಗಳಲ್ಲಿ ವರದಿಯಾಗಿದೆ. 'ರಾಜಾ ಕಾಲಸ್ಯ ಕಾರಣಂ.' ನಮ್ಮ ಬಂಧುಗಳ ಕಷ್ಟಕ್ಕೆ ನಾವು ನಮ್ಮ ರಾಜಕಾರಣಿಗಳನ್ನು ಆಡಳಿತಗಾರರನ್ನು ಸಲಹೆಗಾರ ಬುದ್ಧಿಜೀವಿಗಳೆಂದು ಹೇಳಲಾಗುವವರನ್ನು ದೂಷಿಸದೆ ಅನ್ಯಮಾರ್ಗವಿಲ್ಲ. ದೇಶದ ಸಂಪತ್ತು ಕೆಲವು ವ್ಯಕ್ತಿಗಳಲ್ಲಿ, ಅಂದರೆ ರಾಜಕೀಯ ನಾಯಕರಲ್ಲಿ (ಮಾಜಿ ಸಹಿತ) ಉನ್ನತ ಅಧಿಕಾರಿಗಳಲ್ಲಿ ಬೃಹತ್ ವ್ಯಾಪಾರಿ ಹಾಗೂ ಉದ್ದಿಮೆದಾರರಲ್ಲಿ, ದಳ್ಳಾಳಿಗಳಲ್ಲಿ ಸಂಗ್ರಹವಾಗುತ್ತಿದೆ. ರಾಜಕಾರಣಿಗಳು (ಅಪವಾದ ಇರಬಹುದು), ಉದ್ದಿಮೆದಾರರು ಇತರರು ವಿದೇಶಿ ಬ್ಯಾಂಕುಗಳಲ್ಲಿ ಗುಪ್ತವಾಗಿಟ್ಟ ಠೇವಣಿಗಳನ್ನು ವಾಪಸ್ ಇಂಡಿಯಾಕ್ಕೆ ತಂದರೆ ನಮ್ಮ ವಿದೇಶಿ ಸಾಲಗಳನ್ನೆಲ್ಲ ತೀರಿಸಬಹುದು ಎಂದು ಹೇಳಲಾಗಿದ್ದು, ಇದರಲ್ಲಿ ಸತ್ಯ, ಅಸತ್ಯ ಎಷ್ಟೆಂಬುದನ್ನು ಪತ್ತೆ ಮಾಡಬೇಕಾಗಿದೆ. ಸರ್ಕಾರಕ್ಕೆ ಧೈರ್ಯವಿದೆಯೆ ?

ಜನಸಂಖ್ಯಾ ವೃದ್ಧಿ, ಬಡತನ, ನಿರುದ್ಯೋಗ, ನಿರಕ್ಷರತೆ ಮತ್ತು ಭ್ರಷ್ಟಾಚಾರ (ವಿಶೇಷವಾಗಿ ಸರ್ಕಾರಿ ನೌಕರರು ಮತ್ತು ರಾಜಕಾರಣಿಗಳು) ಭಾರತದ ಪ್ರಮುಖ ಸಮಸ್ಯೆಗಳು. ಇವುಗಳು ಬಗೆಹರಿದರೆ ಮಾತ್ರ ಭಾರತ ಪ್ರಗತಿ ಹೊಂದಬಹುದು. ಅಲ್ಲದೇ ಈ ಶತಮಾನ ದಲ್ಲಿಯೇ ಪ್ರಪಂಚದಲ್ಲಿ ಭಾರತ ಒಂದು ಬಲಿಷ್ಠ (ಆರ್ಥಿಕವಾಗಿ) ರಾಷ್ಟ್ರವಾಗಬಲ್ಲದು ಎಂಬುದರಲ್ಲಿ ಸಂಶಯವಿಲ್ಲ.

ಭ್ರಷ್ಟಾಚಾರ ಅಧಿಕವಾಗಲು ನಮ್ಮ ಚುನಾವಣಾ ಪದ್ಧತಿಯೂ ಕಾರಣ ಎಂದು ಹೇಳಲಾಗುತ್ತದೆ. ಇಂದು ಹಣವಿದ್ದವರಿಗೆ ಮಾತ್ರ ರಾಜಕೀಯ ಪಕ್ಷದ ಟಿಕೆಟ್ ಹಾಗೂ ಚುನಾವಣೆಯಲ್ಲಿ ಯಶಸ್ಸು ದೊರೆಯಲು ಸಾಧ್ಯ. ಬಡ ಬೋರೇಗೌಡ ಶಾಸಕ ಅಥವಾ ಸಂಸತ್ ಸದಸ್ಯನಾಗಲು ಸಾಧ್ಯವಿಲ್ಲ. ಅದು ದಷ್ಟಪುಷ್ಟವಾಗಿ ಬೆಳೆದ ದೇವೇಗೌಡನಿಗೆ ಮಾತ್ರ ಸಾಧ್ಯ. ಉದ್ದಿಮೆದಾರರಿಂದ, ಹೋಟೇಲ್ ಮಾಲೀಕರಿಂದ ಹೆಂಡದ ದೊರೆಗಳಿಂದ ಕೋಟಿ ಕೋಟಿ ಧನಸಹಾಯ ಪಡೆದು ಅಧಿಕಾರಕ್ಕೆ ಬಂದ ರಾಜಕೀಯ ಪಕ್ಷವು ಅಥವಾ ರಾಜಕಾರಣಿಗಳು ತಮ್ಮ 'ಧಣಿ'ಗಳಿಗೆ ಅವರ ವ್ಯವಹಾರದಲ್ಲಿ ನೆರವಾಗುವುದು ಸಹಜ.




ನಿನ್ನಲ್ಲಿರುವಷ್ಟು 'ಕೊಬ್ಬಿನ ಅಂಶ' ಈ ಹಾಲಿನಲ್ಲೂ ಇದ್ದಿದ್ದರೆ ಕೊಂಡು-ಕೊಳ್ಳಬಹುದಿತ್ತು !

ಭಾರತವು ಕೃಷಿ ಪ್ರಧಾನ ರಾಷ್ಟ್ರವಾದರೂ ಇಲ್ಲಿ ಚಿಕ್ಕ ಕೃಷಿಕರಿಗೆ ಪ್ರೋತ್ಸಾಹವಿಲ್ಲ, ಸರ್ಕಾರದ ಸವಲತ್ತುಗಳೆಲ್ಲ ದೊಡ್ಡ ದೊಡ್ಡ ಕೃಷಿಕರ ಪಾಲಾಗುತ್ತವೆ. ಕೃಷಿಯಲ್ಲಿ ಪ್ರಗತಿಯಾದಾಗ, ಕೃಷಿಕರಿಗೆ, ಅವರು ಬೆಳೆದ ಬೆಳೆಗೆ ಯೋಗ್ಯ ಬೆಲೆ ದೊರೆತಾಗ, ಚಿಕ್ಕ ಕೃಷಿಕರು ಋಣಮುಕ್ತರಾದಾಗ, ಕೃಷಿಕರು ನೆಮ್ಮದಿಯ ಜೀವನ ಬದುಕಿದಾಗ ಮಾತ್ರ ಭಾರತದ ಪ್ರಗತಿ ಸಾಧ್ಯ. ಸಾವಿರ ರೂ. ಸಾಲ ತೀರಿಸದ ಚಿಕ್ಕ ಕೃಷಿಕನ ಮನೆ, ದನ, ಪಾತ್ರೆ ಜಪ್ತಾಗುತ್ತದೆ. ಆದರೆ ಕೋಟಿ ಕೋಟಿ ರೂಪಾಯಿ ಸಾಲ ತೀರಿಸದ, ಲಕ್ಷಗಟ್ಟಲೆ ವಿದ್ಯುತ್ ಬಿಲ್ ಬಾಕಿ ಇಟ್ಟುಕೊಂಡ ಉದ್ದಿಮೆದಾರರು, ರಾಜಕಾರಣಿಗಳು, ನೆಮ್ಮದಿಯಿಂದ ಇರುತ್ತಾರೆ. ಸರ್ಕಾರದ ಇಚ್ಛಾಶಕ್ತಿಯ ಕೊರತೆಯೇ ಇದಕ್ಕೆ ಕಾರಣ ಎಂದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲವಷ್ಟೇ !

ಭಾರತದಲ್ಲಿ ಪ್ರತಿಯೊಂದು ರಂಗದಲ್ಲೂ ದ್ವೈತವನ್ನು ಕಾಣಬಹುದು ಎಂದರೆ ಅಚ್ಚರಿ ಉಂಟಾಯಿತೇ ? ಯಾವುದೇ ಧರ್ಮದ ಕುರಿತು ಮಾತನಾಡುತ್ತಿಲ್ಲ. ರಾಜಕಾರಣಿಗಳಿಗೆ, ಧನವಂತರಿಗೆ ಒಂದು ಕಾನೂನಾದರೆ ಶ್ರೀಸಾಮಾನ್ಯನಿಗೆ ಇನ್ನೊಂದು ಕಾನೂನು. ಗಾಂಧೀಜಿಯವರು ನುಡಿದು ನಡೆದ ಸತ್ಯ, ಅಹಿಂಸೆ, ಸರಳಜೀವನ ಇವೆಲ್ಲವುಗಳನ್ನೂ ಪಾಲಿಸುವ ರಾಜಕಾರಣಿಗಳು ಲಕ್ಷಕ್ಕೆ ಒಬ್ಬರು ದೊರೆಯುವುದು ಸಂಶಯ. ದೇಶದ ಸಂಪತ್ತನ್ನು ಮನಬಂದಂತೆ ವೆಚ್ಚ ಮಾಡಿ ಐಸಿರಿಯ ಆರಾಮ ಜೀವನ ನಡೆಸುವ ವರ್ಗ ಒಂದೆಡೆಯಾದರೆ, ಒಂದು ಊಟಕ್ಕೂ ಗತಿ ಇಲ್ಲದ, ವಾಸಿಸಲು ಸೂರಿಲ್ಲದ ಕೋಟಿ ಕೋಟಿ ಬಹುಸಂಖ್ಯಾತರ ವರ್ಗ ಇನ್ನೊಂದೆಡೆ. ಇದು ನಿಜವಾದ ಭಾರತದ ಚಿತ್ರ.. ಎಂಥ ನಾಚಿಕೆಗೇಡು ! ಕೋಟಿ ರೂಪಾಯಿ ನುಂಗಿದ ರಾಜಕಾರಣಿ ಹಲವಾರು ವರ್ಷಗಳವರೆಗೆ ನ್ಯಾಯಾಲಯದಲ್ಲಿ ಪ್ರಕರಣ ಮುಂದುವರಿಸಿ ಶಿಕ್ಷೆಯಿಂದ ತಪ್ಪಿಸಿಕೊಳ್ಳುತ್ತಾನೆ. ಇದೆಂಥ ನ್ಯಾಯ ! ಎಂಥ ನ್ಯಾಯಾಂಗ ! ಎಂಥ ಪ್ರಜಾಪ್ರಭುತ್ವ ! ಇಂಥ ಪ್ರಜಾಪ್ರಭುತ್ವದ ಅಗತ್ಯವಿತ್ತೆ ? ಅಥವಾ ಪ್ರಜಾ ಪ್ರಭುತ್ವದ ದೋಷವಿರಲಾರದು. ಕಪಟ ನಾಯಕರಿಗೆ ಬುದ್ಧಿ ಹೇಳುವವರು ಯಾರು ? ರಾಜಕಾರಣಿಗಳೇ, ಶೀಘ್ರವಾಗಿ ಎಚ್ಚರಗೊಳ್ಳಿ. ಕಾಲ ಕಾಯದು.

ಸದಾನಂದ ಹೆಗಡೆಕಟ್ಟೆ
ಕೋಡಂಗಲ್ಲು, ಮೂಡಬಿದ್ರಿ - ೫೭೪ ೧೯೭
ದಕ್ಷಿಣ ಕನ್ನಡ

# ಬಹು ಸಾಂಸ್ಕೃತಿಕತೆಯ ದೃಷ್ಟಿಯಲ್ಲಿ...

ಇತ್ತೀಚೆಗೆ ಬಹು ಸಾಂಸ್ಕೃತಿಕತೆಯನ್ನು ಕುರಿತಂತೆ ತುಂಬಾ ಚರ್ಚೆಯಾಗುತ್ತಿದೆ. ಭಾರತದಲ್ಲಿ ಮಾತ್ರವಲ್ಲ ಎಲ್ಲೆಡೆಯಲ್ಲೂ ಈ ಬಗ್ಗೆ ಮಾತು ಕೇಳಿಬರುತ್ತಿದೆ. ಆದರೆ ಹಾಗೆಂದರೇನು ಅಂತ ಯಾರಾದರೂ ಕೇಳಿದರೆ ಉತ್ತರಿಸುವುದು ಅಷ್ಟು ಸುಲಭವಲ್ಲ. ಹಾಗಾಗಿ ಅಲ್ಲಿಂದಲೇ ನಮ್ಮ ಚರ್ಚೆ ಪ್ರಾರಂಭವಾಗಬೇಕಾಗುತ್ತದೆ.

ಬಹು ಸಾಂಸ್ಕೃತಿಕತೆ ಎಂಬುದು ಒಂದಿಷ್ಟು ನಿರ್ದಿಷ್ಟ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವಂತಹ ಒಂದು ರಾಜಕೀಯ ಸಿದ್ಧಾಂತವಲ್ಲ. ಅದನ್ನು ಒಂದು ತಾತ್ವಿಕ ದರ್ಶನವೆನ್ನಲೂ ಸಾಧ್ಯವಿಲ್ಲ. ಅದು, ಮಾನವನ ಬದುಕನ್ನು ನೋಡುವ ಒಂದು ದೃಷ್ಟಿಕೋನ ಎನ್ನಬಹುದು.

ಮಾನವ, ಸಾಂಸ್ಕೃತಿಕವಾಗಿ ರೂಪಗೊಂಡ ಜಗತ್ತೊಂದರಲ್ಲಿ ಬೆಳೆಯುತ್ತಾನೆ. ಅವನ ವ್ಯಕ್ತಿತ್ವ ರೂಪ ಪಡೆಯುವುದೇ ಅಂತಹ ಸಾಂಸ್ಕೃತಿಕ ಪರಿಸರದಲ್ಲಿ. ಜಗತ್ತನ್ನು ನೋಡಲು ಅವನಿಗೆ ಸಾಧ್ಯವಾಗುವುದು ಕೂಡ ಆ ಸಾಂಸ್ಕೃತಿಕತೆಯ ಚೌಕಟ್ಟಿನಲ್ಲೇ. ಅದನ್ನು ಮೀರಿಕೊಂಡು ಬೆಳೆಯುವುದು ಅವನಿಗೆ ಸಾಧ್ಯವಿಲ್ಲ ಎಂದಲ್ಲ. ಸ್ವಲ್ಪಮಟ್ಟಿಗೆ ಅವನು ಅದನ್ನು ಮೀರಿಕೊಳ್ಳಬಲ್ಲ. ಆದರೆ ಅದನ್ನು ಸಂಪೂರ್ಣವಾಗಿ ಮೀರಿಕೊಳ್ಳುವುದು ಸಾಧ್ಯವಿಲ್ಲ.

ಪ್ರತಿಯೊಂದು ಸಂಸ್ಕೃತಿಯೂ ಒಳ್ಳೆಯ ಬದುಕನ್ನು ತನ್ನದೇ ಆದ ರೀತಿಯಲ್ಲಿ ಗ್ರಹಿಸಿಕೊಳ್ಳುತ್ತದೆ. ಆದರೆ ಯಾವ ಸಂಸ್ಕೃತಿಯೂ ಮಾನವನ ಸಾಮರ್ಥ್ಯವನ್ನಾಗಲಿ ಅಥವಾ ಅವನ ಭಾವನೆಗಳನ್ನಾಗಲಿ ಪೂರ್ತಿ ಅರ್ಥಮಾಡಿಕೊಂಡಿವೆ ಎಂದು ಹೇಳಲಿಕ್ಕಾಗುವುದಿಲ್ಲ. ಅವಕ್ಕೆ ದಕ್ಕಿರುವುದು ಒಂದು ಭಾಗ ಮಾತ್ರ. ಯಾವುದೇ ಸಂಸ್ಕೃತಿಯೂ ತನ್ನಷ್ಟಕ್ಕೆ ಪೂರ್ಣವಲ್ಲ, ಮತ್ತೊಂದಕ್ಕಿಂತ ಶ್ರೇಷ್ಠವೂ ಅಲ್ಲ. ಹಾಗಾಗಿ ಯಾವುದೇ ಮನುಷ್ಯನಿಗೆ ತನ್ನ ವ್ಯಕ್ತಿತ್ವವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವುದಕ್ಕೆ, ತನ್ನ ಬೌದ್ಧಿಕ ಹಾಗೂ ನೈತಿಕ ಹರವನ್ನು ಹೆಚ್ಚಿಸಿಕೊಳ್ಳುವುದಕ್ಕೆ, ಜೀವಂತವಾಗಿ ಉಳಿಯುವುದಕ್ಕೆ, ಹೀಗೆ ಹತ್ತು ಹಲವಾರು ಕಾರಣಗಳಿಗಾಗಿ ಅವನಿಗೆ ಇತರ ಸಾಂಸ್ಕೃತಿಕತೆಯ ನೆರವು ಬೇಕಾಗುತ್ತದೆ. ಮನುಷ್ಯನಿಗೆ ಅವನ ಸಂಸ್ಕೃತಿಯ ಒಳಗೇ ಒಳ್ಳೆಯ ಬದುಕನ್ನು ನಡೆಸುವುದು ಸಾಧ್ಯವಿಲ್ಲ ಎಂದಲ್ಲ, ಬೇರೆ ಸಂಸ್ಕೃತಿಯ ನೆರವು ದೊರೆತರೆ ಅವನ ಬದುಕು ಇನ್ನಷ್ಟು ಶ್ರೀಮಂತವಾಗಬಹುದು. ಇಂದಿನ ಜಗತ್ತಿನಲ್ಲಿ ಯಾರೇ ಆಗಲಿ ತನ್ನ ಸಂಸ್ಕೃತಿಯ ಸುತ್ತಾ ಗೋಡೆಕಟ್ಟಿಕೊಂಡು ಬದುಕುವುದು ಸಾಧ್ಯವಿಲ್ಲ.

ಪ್ರತಿಯೊಂದು ಸಂಸ್ಕೃತಿಯೂ ಬಹು ಸಾಂಸ್ಕೃತಿಕತೆಯ ಸಂಸ್ಕೃತಿಯೇ ಆಗಿದೆ. ಪ್ರತಿ ಸಂಸ್ಕೃತಿಯ ಒಳಗೂ ಹಲವಾರು ಸಂಸ್ಕೃತಿಗಳಿರುತ್ತವೆ. ಅದು ತನ್ನೊಳಗಿನ ವಿವಿಧ ಪರಂಪರೆಗಳೊಂದಿಗೆ ಸಂವಾದಿಸುತ್ತಲೇ ಇರುತ್ತದೆ. ಹಾಗಾಗಿ, ಪ್ರತಿಯೊಂದು ಸಂಸ್ಕೃತಿಯಲ್ಲೂ ಇನ್ನೊಂದು ಸಂಸ್ಕೃತಿಯ ಒಂದಿಷ್ಟು ಅಂಶಗಳಾದರೂ ಸೇರಿಕೊಂಡಿರುತ್ತದೆ. ಆ ಅರ್ಥದಲ್ಲಿ ತನ್ನೊಳಗಿನ ಈ ವಿಭಿನ್ನ ಪರಂಪರೆಗಳೊಂದಿಗೆ ಬದುಕುವುದು ಸರಾಗವಾದಾಗಷ್ಟೇ, ಒಂದು ಸಂಸ್ಕೃತಿಗೆ ತನ್ನ ಹೊರಗಿನ ಸಂಸ್ಕೃತಿಯೊಂದಿಗೆ ಸರಾಗವಾಗಿ ಇರುವುದು ಸಾಧ್ಯವಾಗಬೇಕಾಗುತ್ತದೆ. ಸಂಸ್ಕೃತಿಗಳ ನಡುವೆ ಸಂವಾದ ಸಾಧ್ಯವಾಗಬೇಕಾದರೆ, ಪ್ರತಿ ಸಂಸ್ಕೃತಿಯೂ ತನ್ನನ್ನು ಉಳಿದ ಸಂಸ್ಕೃತಿಗೆ ತೆರೆದುಕೊಳ್ಳಬೇಕು. ಇತರ ಸಂಸ್ಕೃತಿಗಳಿಂದ ಕಲಿಯುವುದಕ್ಕೆ ತಯಾರಾಗಬೇಕು.

ನಾವು ಬಹು-ಸಾಂಸ್ಕೃತಿಕತೆಯನ್ನು ಈ ಅರ್ಥದಲ್ಲಿ ಗ್ರಹಿಸಿಕೊಳ್ಳಬೇಕು. ಬಹು ಸಾಂಸ್ಕೃತಿಕತೆ ಎನ್ನುವುದು ಒಂದರ್ಥದಲ್ಲಿ 'ಕೋಸಂಬರಿ ಬಟ್ಟಲು' ಇದ್ದಂತೆ. ಅದರಲ್ಲಿ ಸೇರುವ ಪದಾರ್ಥಗಳೆಲ್ಲಾ ತನ್ನತನವನ್ನು ಉಳಿಸಿಕೊಂಡು, ಒಟ್ಟು ರುಚಿಗೆ ತನ್ನ ಕೊಡುಗೆಯನ್ನು ನೀಡುತ್ತವೆ. ಅದು ತನ್ನಲ್ಲಿ ಹಾಕುವ ಪದಾರ್ಥಗಳನ್ನೆಲ್ಲಾ ಕರಗಿಸಿಬಿಡುವ 'ಸಾಂಬಾರು ಪಾತ್ರೆಯಲ್ಲ.' ಈ ಮಾತು ಪ್ರತಿಯೊಂದು ಸಂಸ್ಕೃತಿಗೂ ಅನ್ವಯವಾಗುತ್ತದೆ. ಪ್ರತಿಯೊಂದು ಸಂಸ್ಕೃತಿಯೂ ಆಂತರಿಕವಾಗಿ ಬಹು ಸಂಸ್ಕೃತಿಯ ಸಂಗಮವಾಗಿರುವುದರಿಂದ ಹಾಗೂ ವೈವಿಧ್ಯಪೂರ್ಣವಾಗಿರುವುದರಿಂದ ಒಂದು ಸಂಸ್ಕೃತಿಯನ್ನು ಏಕೀಕರಣಗೊಳಿಸುವ ಪ್ರಯತ್ನವೂ ಅರ್ಥಹೀನವೆನಿಸುತ್ತದೆ.

ಬಹು-ಸಾಂಸ್ಕೃತಿಕತೆಯ ಸಮಾಜದಲ್ಲಿ ಪ್ರಜೆಗೆ ತನ್ನ ಸಂಸ್ಕೃತಿಯನ್ನು ಕುರಿತಂತೆ ಸಂಪೂರ್ಣ ಸ್ವಾತಂತ್ರ್ಯವಿರುತ್ತದೆ. ಇಲ್ಲಿ ಅವನಿಗೆ ಹೆಚ್ಚಿನ ಆಯ್ಕೆಯು ಸಾಧ್ಯವಾಗುತ್ತದೆ. ಅದು ಅವನಲ್ಲಿ ಸ್ವ-ವಿಮರ್ಶೆಯ, ಸ್ವ-ನಿರ್ಧಾರದ, ಕಲ್ಪನೆಯ ಶಕ್ತಿಯನ್ನು ಬೆಳೆಸುತ್ತದೆ. ಅವನ ಒಳಿತಿಗಾಗಿ, ಅವನ ಬೆಳವಣಿಗೆಗಾಗಿ ಪ್ರಯತ್ನಿಸುತ್ತದೆ. ಇಲ್ಲಿ ಒಬ್ಬ ತನ್ನ ಪರಂಪರೆಗೆ ಅತುಕೊಂಡು ಬದುಕಲು ನಿರ್ಧರಿಸಿದರೆ ಅದಕ್ಕೂ ಅವನಿಗೆ ಸ್ವಾತಂತ್ರ್ಯವಿದೆ.

ಭಾರತದ ಮಟ್ಟಿಗೆ ಹೇಳುವುದಾದರೆ, ಬಹುಶಃ ಗಾಂಧಿಯೊಬ್ಬರೇ ಈ ನಿಟ್ಟಿನಲ್ಲಿ ಯೋಚಿಸಿದವರು. ವಿವೇಕಾನಂದರು ಈ ಬಗ್ಗೆ ಯೋಚಿಸಿದ್ದಾರೆ ನಿಜ. ಆದರೆ ಅವರು ವೇದಾಂತದ ದೃಷ್ಟಿಯಲ್ಲೇ ಉಳಿದ ಧರ್ಮಗಳನ್ನು ನೋಡಿದ್ದಾರೆ. ಹಿಂದೂ ಧರ್ಮವನ್ನೇ ಶ್ರೇಷ್ಠ ಎಂದು ಭಾವಿಸುತ್ತಾರೆ. ನಮಗೆ ನಮ್ಮ ಸಂಸ್ಕೃತಿಯ ಬಗ್ಗೆ ಅಭಿಮಾನ ಇರೋದು ತಪ್ಪಲ್ಲ. ಆದರೆ ಅದೇ ಶ್ರೇಷ್ಠ ಎನ್ನುವುದು ಸರಿಯಲ್ಲ. ಹಾಗಾಗಿ ಬಹು ಸಾಂಸ್ಕೃತಿಕ ಸಮಾಜಕ್ಕೆ ತೀರಾ ಸೂಕ್ತವಾಗುವುದು 'ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂಬ ಮಾತೇ ಹೊರತು, 'ಸಾರೇ ಜಹಾಂಸೆ ಅಚ್ಛಾ ಹಿಂದೂಸಿತಾ ಹಮಾರ' ಎಂಬ ಘೋಷಣೆ ಅಲ್ಲ. ಗಾಂಧಿ ಈ ಬಗ್ಗೆ ತುಂಬಾ ಸ್ಪಷ್ಟವಾಗಿದ್ದಾರೆ. ಅವರಿಗೆ ಎಲ್ಲಾ ಧರ್ಮವನ್ನು ಗೌರವದಿಂದ ಕಾಣುವುದು ಸಾಧ್ಯವಿತ್ತು. ''ಜೀಸಸ್ ಪರಿಪೂರ್ಣ ಧರ್ಮವೊಂದರ ವ್ಯಾಖ್ಯೆ ನೀಡಿದ್ದಾನೆ'' ಎಂದು ಹೇಳಿದ್ದಾರೆ. ಇದೇ ರೀತಿ ಇಸ್ಲಾಂ ಧರ್ಮ ಭಾರತದ ರಾಷ್ಟ್ರೀಯ ಸಂಸ್ಕೃತಿಗೆ ನೀಡಿರುವ ಕೊಡುಗೆಯ ಬಗ್ಗೆಗೂ ಅಪಾರ ಮೆಚ್ಚುಗೆಯ ಮಾತನಾಡಿದ್ದಾರೆ. ಅವರು ತಮ್ಮನ್ನು ನೋಡಲು ಬಂದವರಿಗೆ, ''ನಾನು ಒಬ್ಬ ಹಿಂದು, ಒಬ್ಬ ಮುಸ್ಲಿಂ, ಒಬ್ಬ ಸಿಖ್.... ಹಾಗೆಯೇ ನೀವೂ ಕೂಡ'', ಎನ್ನುವಾಗ ನಿಲುವು ಸ್ಪಷ್ಟವಾಗುತ್ತದೆ. ಗಾಂಧಿಯದು ಬರಿಯ ಮಾತಲ್ಲ, ಅವರು ಆಡಿದಂತೆ ನಡೆದುಕೊಳ್ಳುವವರು. ಈ ಅರ್ಥದಲ್ಲಿ ಇಂದು ನಮಗೆ ಗಾಂಧಿ ಪ್ರಸ್ತುತರಾಗುತ್ತಾರೆ.

ಆದರೆ ಎಲ್ಲಾ ಸಂಸ್ಕೃತಿಯ ಜನ ತಮ್ಮ ಸಂಸ್ಕೃತಿಯ, ಧರ್ಮದ, ಹಿಂದೆ ಹೋದರೆ, ನಾವು ಒಂದು ದೇಶವಾಗಿ, ಸಮಾಜವಾಗಿ ಇರೋದು ಹೇಗೆ ? ನಿಜ. ಇಂತಹ ಪ್ರಶ್ನೆ ಬರೋದು ಸ್ವಾಭಾವಿಕ. ಒಂದು ಬಹು-ಸಾಂಸ್ಕೃತಿಕತೆಯ ಸಮಾಜ ಉಳಿಯಬೇಕಾದರೆ, ಸ್ಥಿರವಾಗಬೇಕಾದರೆ, ಅದರ ಎಲ್ಲಾ ಸದಸ್ಯರನ್ನು ಒಟ್ಟಾಗಿಡುವ ಯಾವುದಾದರೂ ಒಂದು ಸಮಾನ ಅಂಶವಿರಬೇಕು. ಅವರೆಲ್ಲಾ ಒಂದು ರಾಜಕೀಯ ಸಮುದಾಯಕ್ಕೆ ಬದ್ಧರಾಗಿರಬೇಕು. ಇದನ್ನು ಬೇಕಾದರೆ ದೇಶಪ್ರೇಮ ಎನ್ನಬಹುದು. ಇದೇ ಅವರನ್ನು ಒಟ್ಟಿಗೆ ಇಡುವುದು. ಒಂದು ರಾಜಕೀಯ ಸಮುದಾಯಕ್ಕೆ ಬದ್ಧರಾಗಿರಬೇಕು ಎಂಬ ಪರಿಕಲ್ಪನೆ ತೀರಾ ಸಂಕೀರ್ಣವಾದದ್ದು. ಅದನ್ನು ತಪ್ಪಾಗಿ ಗ್ರಹಿಸುವ ಸಾಧ್ಯತೆಯೇ ಹೆಚ್ಚು. ಎಲ್ಲ ಸಂಸ್ಕೃತಿಯ ಜನರಿಗೂ ಚರಿತ್ರೆಯನ್ನು ಕುರಿತಂತಾಗಲಿ, ಸರ್ಕಾರದ ಸ್ವರೂಪದ ಬಗ್ಗೆಯಾಗಲಿ ಅವರದ್ದೇ ಆದ ನಿಲುವು ಇರಬಹುದು. ಪ್ರಧಾನ ಸಂಸ್ಕೃತಿಯ ಬಗ್ಗೆಯೂ ಅವರಿಗೆ ಭಿನ್ನಾಭಿಪ್ರಾಯ ಇರುವುದು ಸಾಧ್ಯ. ಅವರ ಸಂಸ್ಕೃತಿಯ ಬಗೆಗಿನ ತೀವ್ರತೆಯೂ ಸಮುದಾಯದಿಂದ ಸಮುದಾಯಕ್ಕೆ ಬದಲಾಗಬಹುದು. ತಮ್ಮ ಸಾಂಸ್ಕೃತಿಕ ಅಸ್ತಿತ್ವಕ್ಕೆ ಧಕ್ಕೆ ಆಗುತ್ತದೆ ಅನಿಸಿದರೆ, ಅವರು ಸರ್ಕಾರದ ಸ್ವರೂಪ, ನೀತಿ ಹಾಗೂ ಮೌಲ್ಯಗಳನ್ನು ಕುರಿತು ಬಲವಾಗಿ ವಿರೋಧಿಸಬಹುದು. ಆದರೆ ಅವರ ರಾಜಕೀಯ ಸಮುದಾಯವನ್ನು ಕುರಿತು, ಅದರ ಸದಸ್ಯರ ಒಳಿತನ್ನು ಕುರಿತ ಅವರ ಬದ್ಧತೆ (ಬೇಕಾದರೆ ಅದನ್ನು ದೇಶಪ್ರೇಮ ಎಂದು ಕರೆಯಿರಿ) ಅಚಲವಾಗಿರಬೇಕು. ಅವರು ಟೀಕೆ ಮಾಡಿದರು ಎಂದಾಕ್ಷಣ ಅವರ ಮೂಲಭೂತ ಬದ್ಧತೆಯ ಬಗ್ಗೆ ಅನುಮಾನ ತೋರಬೇಕಾಗಿಲ್ಲ. ದೇಶಪ್ರೇಮ ಎನ್ನುವುದು ಸಂಪ್ರದಾಯಸ್ಥರ ಸ್ವತ್ತೇನೂ ಅಲ್ಲ. ಸಮಾಜವಾದಿಗಳು, ಕಮ್ಯುನಿಸ್ಟರು, ವಿಚಾರವಾದಿಗಳು, ಬೇರೆ ಬೇರೆ ಕೋಮಿಗೆ ಸೇರಿದವರು ಉಳಿದವರಷ್ಟೇ ಅಥವಾ ಅವರಿಗಿಂತ ಹೆಚ್ಚು ದೇಶಪ್ರೇಮಿಗಳಾಗಿರಬಹುದು.

ಇಲ್ಲಿ ಇನ್ನೊಂದು ಅಂಶವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಒಬ್ಬ ಪ್ರಜೆ ಒಂದು ರಾಜಕೀಯ ಸಮುದಾಯಕ್ಕೆ ಬದ್ಧನಾಗಿರಬೇಕಾದರೆ, ಇಡೀ ರಾಜಕೀಯ ಸಮುದಾಯವೂ ಅವನ/ಅವಳ ಆಸಕ್ತಿಗೆ ಬದ್ಧವಾಗಿರಬೇಕು. ಅವನನ್ನು ತನ್ನ ಭಾಗವಾಗಿ ಒಪ್ಪಿಕೊಳ್ಳಬೇಕು. ಅವರನ್ನು ಸಮಾನರಾಗಿ ಕಾಣಬೇಕು. ಅವರ ಮೌಲ್ಯವನ್ನು ಗೌರವಿಸಬೇಕು. ಇದು ಅದರ ರಚನೆಯಲ್ಲಿ, ನೀತಿಯಲ್ಲಿ, ನಡೆವಳಿಕೆಯಲ್ಲಿ ವ್ಯಕ್ತವಾಗಬೇಕು. ಅವರ ಬೆಳವಣಿಗೆಗೆ ಸಹಾಯ ಮಾಡಬೇಕು. ಅವರೂ ಬೆಳೆದು, ದೇಶದ

**ಟಿ. ಎಸ್. ವೇಣುಗೋಪಾಲ್**

ಸಮುದಾಯದ ಜೀವನಗಳಿಗೆಯೂ ಪಾಲುಗೊಳ್ಳುವಂತಾಗಬೇಕು. ಬೇರೆ ಬೇರೆ ಸಂಸ್ಕೃತಿಗಳ ಅವಶ್ಯಕತೆಯೂ ಬೇರೆ ಬೇರೆ ಇರುತ್ತದೆ. ಹಾಗಾಗಿ ಅವರ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು, ಅಲ್ಪಸಂಖ್ಯಾತರ ಸಂಸ್ಥೆಗಳನ್ನು ಗೌರವಿಸಬೇಕಾಗುತ್ತದೆ.

ಕೆಲವೊಮ್ಮೆ ಅವರಿಗೆ ದೇಶದ ಪ್ರಜೆಯ ಎಲ್ಲಾ ಹಕ್ಕುಗಳು ಸಿಗಬಹುದು. ಆದರೂ ಅವರಿಗೆ ತಾವು ಪರಕೀಯರು ಎಂಬ ಭಾವನೆ ಕಾಡಬಹುದು. ಉದಾಹರಣೆಗೆ, ಅಮೆರಿಕದಲ್ಲಿ ಆಫ್ರಿಕನ್ನರಿಗನ್ನಿಸಿದಂತೆ, ಬ್ರಿಟನ್ನಿನಲ್ಲಿ ಏಷ್ಯನ್ನರಿಗೆ – ಕ್ಯಾರಿಬಿಯನ್ನರಿಗೆ ಅನ್ನಿಸುವಂತೆ, ಭಾರತದಲ್ಲಿ ಮುಸ್ಲಿಮರಿಗೆ ಅನ್ನಿಸುವಂತೆ. ಇದನ್ನು ಅರ್ಥಮಾಡಿಕೊಳ್ಳುವುದು ಸ್ವಲ್ಪ ಕಷ್ಟ. ಆದರೆ ಈ ಭಾವನೆ ಬಂದುಬಿಟ್ಟರೆ, ಒಂದು ಸಮಾನ ಸಮುದಾಯದ ಬದ್ಧತೆಗೆ ತೊಂದರೆ ಮಾಡುತ್ತದೆ. ಇದಕ್ಕೆ, ಉಳಿದವರು • ಆ ಸಂಸ್ಕೃತಿಯನ್ನು ಕಾಣುವ ರೀತಿ ಹಾಗೂ ಅದರ ಸದಸ್ಯರನ್ನು ನಡೆಸಿಕೊಳ್ಳುವ ರೀತಿ, ಅವರ ಬಗ್ಗೆ ಮಾತಾಡಿಕೊಳ್ಳುವ ರೀತಿ ಇವೆಲ್ಲಾ ಕೂಡ ಕಾರಣವಾಗುತ್ತದೆ. ಅವರಿಗೆ ಉಳಿದವರು ತಮ್ಮನ್ನು ಅಪನಂಬಿಕೆಯಿಂದ ಕಾಣುತ್ತಾರೆ ಅಥವಾ ಲೇವಡಿ ಮಾಡುತ್ತಾರೆ ಎಂಬ ಗಾಬರಿಯೇ ಉಳಿದವರೊಟ್ಟಿಗೆ ಅವರನ್ನು ಸೇರದಂತೆ ಮಾಡುತ್ತದೆ, ತಮ್ಮ ಸಂಸ್ಕೃತಿಯ ಚೌಕಟ್ಟಿಗೇ ಅತುಕೊಳ್ಳುವಂತೆ ಮಾಡುತ್ತದೆ.

**ಈ ರೀತಿಯಾಗದಂತೆ ಹೇಗೆ ನೋಡಿಕೊಳ್ಳುವುದು ?**

ಪ್ರಧಾನ ಸಂಸ್ಕೃತಿಯನ್ನು ತನ್ನ ನಿಲುವನ್ನು ಬದಲಿಸಿಕೊಳ್ಳುವಂತೆ ಬೌದ್ಧಿಕ ವಾದಗಳಿಂದ ಹಾಗೂ ನೈತಿಕ ಮನವಿಯಿಂದ ಅವರ ಮನವೊಲಿಸಬೇಕೆಂದು ಕೆಲವರು ಹೇಳುತ್ತಾರೆ. ಆದರೆ ಈ ರೀತಿಯ ಮಾರ್ಗಕ್ಕೆ ಅದರದ್ದೇ ಆದ ಮಿತಿಗಳಿವೆ. ಯಾಕೆಂದರೆ ತಪ್ಪು ಗ್ರಹಿಕೆಗೆ ಸಾಂಸ್ಕೃತಿಕ ಹಾಗೂ ಭೌತಿಕ ಕಾರಣಗಳಿರುತ್ತವೆ. ಉದಾಹರಣೆಗೆ, ಅಮೆರಿಕದಲ್ಲಿ ಕರಿಯರನ್ನು ಕೀಳಾಗಿ ಕಾಣುವುದಕ್ಕೆ ಜನಾಂಗೀಯ ಸಂಸ್ಕೃತಿಯ ಪ್ರಭಾವ ಒಂದು ಕಾರಣ. ಅದೇ ರೀತಿಯಲ್ಲಿ ಈ ವೈಷಮ್ಯವನ್ನು ಉಳಿಸಿಕೊಂಡು ಹೋಗುವಲ್ಲಿ ರಾಜಕೀಯ ಹಿತಾಸಕ್ತಿಯೂ ಕೆಲಸ ಮಾಡುತ್ತಿದೆ. ಇತ್ತೀಚಿನ ದಿನಗಳಲ್ಲಿ ಉದ್ಯೋಗಾವಕಾಶಗಳು ತೀರಾ ಕಡಿಮೆಯಾಗಿ ಇರುವ ಕೆಲವೇ ಕೆಲಸಗಳಿಗಾಗಿ ಹೋರಾಟ ನಡೆಯುತ್ತಿದೆ. ಇರುವ ಕೆಲವೇ ಅವಕಾಶಗಳು ತಮಗೆ ದೊರಕಬೇಕೆನ್ನುವ ಬಯಕೆಯಿಂದ ಜಾತಿ ಧರ್ಮಗಳ ಹೆಸರಲ್ಲಿ ಒಂದಾಗುತ್ತಿರುವ ಪ್ರಕ್ರಿಯೆಯನ್ನು ನೋಡುತ್ತಿದ್ದೇವೆ.

ಹಾಗಾಗಿ ಅಪಕಲ್ಪನೆ ತೆಗೆಯುವುದು ಅಷ್ಟು ಸುಲಭವಲ್ಲ. ಹಲವಾರು ರೀತಿಯ ಪ್ರಯತ್ನ ನಡೆಯಬೇಕು. ಇದರಲ್ಲಿ ಪ್ರಧಾನ ಸಂಸ್ಕೃತಿಯ ಪಾತ್ರ ಮುಖ್ಯ. ತನ್ನನ್ನು ಅದು ತೀವ್ರವಾದ ವಿಮರ್ಶೆಗೆ ಒಡ್ಡಿಕೊಳ್ಳಬೇಕು. ಜೊತೆಗೆ ಆರ್ಥಿಕ ರಾಜಕೀಯ ಅಧಿಕಾರದಲ್ಲಿ ಕಂಡುಬರುತ್ತಿರುವ ಅಸಮಾನತೆಯನ್ನು ಆಮೂಲಾಗ್ರವಾಗಿ ಬದಲಿಸಬೇಕಾಗುತ್ತದೆ. ಆದರೆ ಈ ರೀತಿಯ ಬದಲಾವಣೆಯನ್ನು ಪ್ರಧಾನ ಗುಂಪುಗಳು ಅಷ್ಟೊಂದು ಸಲೀಸಾಗಿ ಒಪ್ಪಿಕೊಂಡುಬಿಡುವುದಿಲ್ಲ. ಇದನ್ನು ರಾಜಕೀಯವಾಗಿ ಎದುರಿಸಬೇಕಾಗುತ್ತದೆ. ತಮ್ಮನ್ನು ಕಡೆಗಣಿಸಲಾಗುತ್ತಿದೆ ಎಂಬ ಭಾವನೆ ಬಂದು ಅಲ್ಪಸಂಖ್ಯಾತರು ಸಂಘಟಿತರಾಗಿ, ರಾಜಕೀಯ ಅಧಿಕಾರಕ್ಕಾಗಿ ಒತ್ತಾಯ ನಡೆಸಿರುವುದನ್ನು ಕೆಲವೆಡೆಗಳಲ್ಲಿ ಕಾಣಬಹುದು. ಇದಕ್ಕಾಗಿ ಕೆಲವೊಮ್ಮೆ ಹಿಂಸೆಯೂ ನಡೆದುಬಿಡಬಹುದು. ಬಹುಸಾಂಸ್ಕೃತಿಕತೆಯ ಸಮಾಜ ಇದನ್ನು ನಿರೀಕ್ಷಿಸಬೇಕು. ಅಂತಹ ಬೇಡಿಕೆಗಳು ಆದಷ್ಟೂ ಬಾರದಂತೆ ನಡೆದುಕೊಳ್ಳಬೇಕು.

ಬಹು ಸಾಂಸ್ಕೃತಿಕತೆಯ ಸಮಾಜ ನಮಗೆ ಹೊಸದು. ಅದರ ರಾಜಕೀಯ ಸೈದ್ಧಾಂತಿಕ ಸಮಸ್ಯೆಗಳನ್ನು ನಾವು ಚರಿತ್ರೆಯಲ್ಲಿ ಕಾಣುವುದಿಲ್ಲ. ಈವರೆಗಿನ ನಮ್ಮ ಅನುಭವವೆಲ್ಲ ಒಂದೇ ರೀತಿಯ ಸಂಸ್ಕೃತಿಯನ್ನು ಒಳಗೊಂಡ ರಾಷ್ಟ್ರಗಳ ಅನುಭವ. ಹಾಗಾಗಿ ಸಾಂಸ್ಕೃತಿಕವಾಗಿ ಬೇರೆ ಬೇರೆಯಾದ ಸಂಸ್ಕೃತಿಗಳು ಒಂದೇ ದೇಶದ ಚೌಕಟ್ಟಿನಲ್ಲಿ ಐಕ್ಯತೆಯನ್ನು ಸಾಧಿಸುವ ದಾರಿಯನ್ನು ನಾವೇ ಹುಡುಕಿಕೊಳ್ಳಬೇಕಾಗಿದೆ. ಪ್ರಜೆಗಳಲ್ಲಿ ಸಾಂಸ್ಕೃತಿಕತೆಯ ಭಿನ್ನತೆಯನ್ನು ಒಪ್ಪಿಕೊಂಡೇ ಒಂದು ರಾಜಕೀಯ ಅಸ್ತಿತ್ವವನ್ನು ಗೌರವಿಸುವ ಮನೋಭಾವವನ್ನು ಬೆಳೆಸಬೇಕಾಗಿದೆ.

ನಮ್ಮ ಸಂವಿಧಾನವನ್ನು ರೂಪಿಸಿದವರ ವಿಶಾಲ ದೃಷ್ಟಿಯಿಂದಾಗಿ ವೈವಿಧ್ಯಗಳ ಮಧ್ಯೆ ಒಂದಾಗಿ ಈವರೆಗೂ ಬದುಕಲು ಸಾಧ್ಯವಾಗಿದೆ. ಆದರೆ ಸಂವಿಧಾನವನ್ನು ರೂಪಿಸಿದ ಕಾಲಕ್ಕೂ ಈಗಿಗೂ ರಾಜಕೀಯ ಸಂದರ್ಭದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ನಮ್ಮ ಸಂವಿಧಾನವು ಈಗಿರುವುದಕ್ಕಿಂತ ಹೆಚ್ಚಿನ ಆರ್ಥಿಕ ಬೆಳವಣಿಗೆ ದರವನ್ನು ನಿರೀಕ್ಷಿಸಿತ್ತು ಹಾಗೂ ಸಂಪನ್ಮೂಲಗಳು ವಿವಿಧ ಸಮುದಾಯಗಳ ನಡುವೆ ಇನ್ನೂ ಹೆಚ್ಚು ಸಮಾನವಾಗಿ ಹಂಚಿಕೆಯಾಗಬೇಕೆಂದು ನಿರೀಕ್ಷಿಸಿತ್ತು. ಅದು ಸಾಂಸ್ಕೃತಿಕವಾಗಿ ತಟಸ್ಥ ಪ್ರಭುತ್ವವನ್ನು ಕಲ್ಪಿಸಿಕೊಂಡಿತ್ತು. ಹೀಗೇ ಇನ್ನೂ ಏನೇನೋ ನಿರೀಕ್ಷಿಸಿತ್ತು. ಆದರೆ ಅವುಗಳಲ್ಲಿ ಹೆಚ್ಚಿನದು ಯಾವುದೂ ಆಗಿಲ್ಲ.

ಈಗ, ಸಮಸ್ಯೆಯನ್ನು ಬಿಡಿಸುವುದಿರಲಿ, ಸಮಸ್ಯೆಯ ಅಗಾಧತೆಯನ್ನು ಗ್ರಹಿಸುವ ಪ್ರಯತ್ನ ನಡೆದಿರುವ ಸೂಚನೆಯೂ ನಮಗೆ ಕಾಣಿಸುತ್ತಿಲ್ಲ. ಕೊನೆಯ ಪಕ್ಷ ಈಗಲಾದರೂ ರಾಜಕೀಯ ಐಕ್ಯತೆಯನ್ನು ಸಾಧ್ಯವಾಗಿಸುವ ತೀರಾ ಸೂಕ್ಷ್ಮವಾದ, ಹೆಚ್ಚು ವಾಸ್ತವಿಕವಾದ ಮಾರ್ಗವನ್ನು ಕಂಡುಕೊಳ್ಳಬೇಕಾಗಿದೆ.


ಟಿ. ಎಸ್. ವೇಣುಗೋಪಾಲ್

ಸಿ ಎಚ್ : ೭೩, ೭ನೇ ಮುಖ್ಯರಸ್ತೆ, ಸರಸ್ವತಿಪುರಂ

ಮೈಸೂರು - ೯


## ವಿನೋದ ಗಣಿತ

**ಆಗಸ್ಟ್ ತಿಂಗಳ ಪ್ರಶ್ನೆಗೆ ಉತ್ತರ**

ಉತ್ತರ : ೧, ೩, ೯ ಮತ್ತು ೨೭ ಇರುವ ಸಂಖ್ಯಾ ಸಮೂಹವು ಉತ್ತರವನ್ನು ಒದಗಿಸಲಾರದು.

ಉದಾಹರಣೆ : ಯಾವುದಾದರೂ ಮೂರು ಧನಪೂರ್ಣಾಂಕಗಳನ್ನು ತೆಗೆದುಕೊಳ್ಳಿ. ಅವುಗಳನ್ನು ಕ್ರಮವಾಗಿ ಯ,ಮ,ತ ಎಂದು ಕರೆಯೋಣ. ಪ್ರಶ್ನೆಯ ನಿಬಂಧನೆಗಳಿಗನುಗುಣವಾಗಿ ರಚಿಸಿದ ಯಾವುದೇ ಸಂಖ್ಯೆ 'A'ಯ ಸ್ವರೂಪವನ್ನು $A = x + y + z$ ಎಂದು ಬರೆಯಬಹುದು. ಇಲ್ಲಿ : $x$ನ ಬೆಲೆಯು 'ಯ' ಆಗಿರಬಹುದು (A ಪಡೆಯಲು 'ಯ' ಸಂಖ್ಯೆಯನ್ನು ಕೂಡಿದಾಗ ಹೀಗಾಗುತ್ತದೆ) ಅಥವಾ 'X' ಬೆಲೆಯು '–ಯ' ಆಗಿರಬಹುದು (A ಪಡೆಯಲು 'ಯ' ಸಂಖ್ಯೆಯನ್ನು ಕಳೆದಾಗ ಹೀಗಾಗುತ್ತದೆ). ಅಲ್ಲದೆ 'ಯ' ಸಂಖ್ಯೆಯು Aಅನ್ನು ಪಡೆಯಲು ಯಾವುದೇ ರೂಪದಲ್ಲಿ ಉಪಯೋಗವಾಗದಿರುವಾಗ $x$ನ ಬೆಲೆಯನ್ನು ಸೊನ್ನೆ ಎಂದುಕೊಳ್ಳಬಹುದು. ಇದೇ ರೀತಿ $y$–ಗೆ : ಮ, –ಮ ೧ ಮತ್ತು $z$ –ಗೆ : ತ, –ತ, ೦; ಮುಂತಾದ ವಿವಿಧ ಬೆಲೆಗಳನ್ನು ಕೊಡಬಹುದು. ಹೀಗಾಗಿ ನಾವು ಪಡೆಯಬಹುದಾದ ವಿಭಿನ್ನ Aಗಳೆಷ್ಟು? ಹೆಚ್ಚೆಂದರೆ ೩ X ೩ X ೩ ಅಂದರೆ ೨೭. ಅಂದರೆ ೧ರಿಂದ ೪೦ರ ಎಲ್ಲ ಸಂಖ್ಯೆಗಳನ್ನೂ ಪಡೆಯಲು ಸಾಧ್ಯವಿಲ್ಲ.

**ಕೆಳಗಿನ ಪ್ರಶ್ನೆಗಳನ್ನು ಗಮನಿಸಿ :**

೧ ಗ್ರಾಂ, ೨ ಗ್ರಾಂ. ಇತ್ಯಾದಿ ೧೦೦ ಗ್ರಾಂ. ತೂಕವಿರುವ ೧೦೦ ಚಿನ್ನದ ಗಟ್ಟಿಗಳಿವೆ. ತಕ್ಕಡಿಯ ಸಹಾಯದಿಂದ ತೂಕದ ಬಟ್ಟುಗಳನ್ನುಪಯೋಗಿಸಿ ಈ ಗಟ್ಟಿಗಳನ್ನು ತೂಗಬೇಕು. ಇದನ್ನು ಕೆಳಗೆ ಕಂಡಂತೆ ನಿರ್ವಹಿಸಬಹುದು.

೧. ತೂಗಬೇಕಾದ ಗಟ್ಟಿಯನ್ನು 'ಎಡ' ತಟ್ಟೆಯಲ್ಲಿಡಬೇಕು.

೨. ತೂಗುವ ಒಂದು ಬಗೆಯಲ್ಲಿ ಬಟ್ಟುಗಳನ್ನು 'ಬಲ' ತಟ್ಟೆಯಲ್ಲಿ ಮಾತ್ರ ಇಡಬಹುದು.

೩. ತೂಗುವ ಇನ್ನೊಂದು ಬಗೆಯಲ್ಲಿ 'ಬಟ್ಟು'ಗಳನ್ನು ಎರಡೂ ತಟ್ಟೆಗಳಲ್ಲಿಡಲು ಅನುಮತಿಯಿದೆ.

ಪ್ರಶ್ನೆ : (ಅ) ೧ ಮತ್ತು ೨ನೇ ನಿಯಮಗಳಿಗನುಸಾರವಾಗಿ ಗಟ್ಟಿಗಳನ್ನು ತೂಗಲು ಕನಿಷ್ಠ ಸಂಖ್ಯೆಯ ತೂಕದ ಬಟ್ಟುಗಳು ಎಷ್ಟು ಮತ್ತು ಅವುಗಳ ತೂಕ (ಗ್ರಾಂ.ನಲ್ಲಿ) ಎಂತಿರಬೇಕು ?

(ಆ)ಪ್ರಶ್ನೆ (ಅ)ನಲ್ಲಿರುವಂತೆಯೇ ; ಆದರೆ ನಿಯಮಗಳು (೧) ಮತ್ತು (೩).

(ಅ)ಗೆ ಉತ್ತರವನ್ನು 'ಆಗಸ್ಟ್' ಸಂಚಿಕೆಯಲ್ಲಿರುವ ಉತ್ತರದಿಂದ ಕಂಡುಕೊಳ್ಳಬಹುದು.

(ಆ)ಗೆ ಉತ್ತರವನ್ನು ಈ ಲೇಖನದ ಆರಂಭದಲ್ಲಿ ಆಗಸ್ಟ್ ತಿಂಗಳ ಪ್ರಶ್ನೆಗೆ ಕೊಟ್ಟಿರುವ ಉತ್ತರದ ವಿಶ್ಲೇಷಣೆ ಮಾಡಿ ಅಲ್ಲಿಯ 'ತಂತ್ರ'ವನ್ನು ಇನ್ನೂ ವ್ಯಾಪಕ ಸ್ತರದಲ್ಲಿ ಉಪಯೋಗಿಸಿ ಪಡೆಯಬಹುದು.

**ಈ ತಿಂಗಳ ಪ್ರಶ್ನೆ**

ಒಂದು ರಾಷ್ಟ್ರದಲ್ಲಿ ೫೦ ವಿವಿಧ ರಾಜಕೀಯ ಪಕ್ಷಗಳಿವೆ. ಅವುಗಳಲ್ಲಿ ಮೊದಲನೆ ಪಕ್ಷದ ಸದಸ್ಯತ್ವ ಕೇವಲ ೧. ಎರಡನೇ ಪಕ್ಷದ ಸದಸ್ಯತ್ವ ಕೇವಲ ೨. ಇದೇ ರೀತಿ ಮೂರನೇ ಪಕ್ಷದ ಸದಸ್ಯತ್ವ ೩ ಇತ್ಯಾದಿ. ಎಂದಿನಂತೆ ಈ ಪಕ್ಷಗಳ ರಾಜಕಾರಣದಲ್ಲಿ ಮೌಲ್ಯಾಧಾರಿತ ವ್ಯತ್ಯಾಸಗಳೇನೂ ಇಲ್ಲ. ಹೀಗಾಗಿ ಯಾವುದೇ ಎರಡು ಪಕ್ಷ ವಿಲೀನಗೊಂಡಾಗ ಆ ಪಕ್ಷಗಳಲ್ಲಿನ ಒಂದು ಪಕ್ಷದ 'ಅಧ್ಯಕ್ಷ' ಮೌಲ್ಯಾಧಾರಿತ ನೆಲೆಯಲ್ಲಿ ರಾಜಕೀಯ ಸನ್ಯಾಸ ತೆಗೆದುಕೊಂಡು ಎಲ್ಲ ಪಕ್ಷಗಳಿಂದ ದೂರ ಉಳಿಯುತ್ತಾನೆ. ಆರಂಭದಲ್ಲಿ ಹೇಳಿದಂತಹ ೫೦ ಪಕ್ಷಗಳಲ್ಲಿನ ವಿವಿಧ ಪಕ್ಷಗಳು ಎರಡೆರಡರಂತೆ ವಿಲೀನಗೊಂಡು ಕೆಲಕಾಲದ ನಂತರ ಒಂದೇ ಪಕ್ಷವು ಉಳಿದುಕೊಳ್ಳುತ್ತದೆ. ಆ ಪಕ್ಷದ ಸದಸ್ಯತ್ವ ಎಷ್ಟು ? •

# ಕೃಷ್ಣಾ ನೀರಿನ ಬಳಕೆ

***ಕೃಷ್ಣಾ ನದಿ ನೀರಿನ ಬಗೆಗಿನ ವಿವಾದವು ಬಗೆಹರಿಯುವ ಬದಲು ಇನ್ನೂ ಹೆಚ್ಚುಹೆಚ್ಚಾಗಿ ತೊಡಕಿನ ಗಂಟಾಗುತ್ತಿದೆ. ಈ ಸಂದರ್ಭದಲ್ಲಿ ಕರ್ನಾಟಕದ ಮಾಜಿ ಮುಖ್ಯಮಂತ್ರಿ, ಶ್ರೀ ವೀರೇಂದ್ರ ಪಾಟೀಲರು ಈಗ್ಗೆ ಆರು ವರ್ಷಗಳ ಹಿಂದೆ (೧೯-೮-೧೯೯೪) ಕನ್ನಡ ಶಕ್ತಿ ಕೇಂದ್ರದ ಡಾ|| ಎಂ. ಚಿದಾನಂದ ಮೂರ್ತಿಯವರಿಗೆ ಪತ್ರಮುಖೇನ ತಿಳಿಸಿದ್ದ ಅಭಿಪ್ರಾಯಗಳನ್ನು ಗಮನಿಸುವುದು ಅನುಕೂಲಕರವೆನಿಸುತ್ತದೆ. ಆರು ವರ್ಷಗಳಲ್ಲಿ ನಾವೆಷ್ಟು ಮುಂದೆ ಹೋಗಿದ್ದೇವೆಂಬ ಪ್ರಶ್ನೆಯನ್ನು ಕೇಳಿಕೊಳ್ಳುವ ಅಗತ್ಯವಿದೆ.***

**ಕೃ**ಷ್ಣಾ ಅಂತರ ರಾಜ್ಯ ನದಿ. ಮಹಾರಾಷ್ಟ್ರದಲ್ಲಿ ಹುಟ್ಟಿ ಕರ್ನಾಟಕ ಆಂಧ್ರದಲ್ಲಿ ಹರಿದು ಬಂಗಾಳಕೊಲ್ಲಿಯನ್ನು ಸೇರುವ ನದಿ.

ಅಂತರ ರಾಜ್ಯ ನದೀ ನೀರಿನ ಉಪಯೋಗದ ಬಗ್ಗೆ ಬಹಳ ಹಿಂದೆ ಸಂಸತ್ತು ಮಾಡಿದ ಒಂದೇ ಒಂದು ಶಾಸನವಿದೆ. ೧೯೫೬ರ ಸುಮಾರಿನಲ್ಲಿ ಸಂಸತ್ತು ಮಾಡಿದ ಈ ಶಾಸನ ಅಂತರ ರಾಜ್ಯ ಜಲ ವಿವಾದಗಳಿಗೆ ಸಂಬಂಧಿಸಿದ್ದು.

ಈ ಶಾಸನದ ಪ್ರಕಾರ ನ್ಯಾಯಮಂಡಲಿಗೆ ನೀರನ್ನು ಹಂಚಲು ಎಲ್ಲಾ ಅಧಿಕಾರವಿದೆ. ಭಾರತ ಸರ್ಕಾರವು ನ್ಯಾಯಮಂಡಲಿ ರಚನೆ ಮತ್ತು ಅದರ ತೀರ್ಪಿನ ಅನುಷ್ಠಾನದ ವಿಚಾರ ಬಂದಾಗ ಮಾತ್ರ ರಂಗಕ್ಕೆ ಬರುತ್ತದೆ. ಭಾರತ ಸರ್ಕಾರಕ್ಕೂ ನದಿ ನೀರಿನ ಹಂಚಿಕೆಗೂ ಸಂಬಂಧವಿಲ್ಲ.

ನ್ಯಾಯಮಂಡಲಿಗಳು ನೀರಿನ ವಿವಾದಗಳನ್ನು ಬಗೆಹರಿಸಲು ತುಂಬಾ ಸಮಯವನ್ನು ತೆಗೆದುಕೊಳ್ಳುತ್ತವೆ. ಮಂಡಲಿಯ ತೀರ್ಮಾನಕ್ಕೆ ಎಲ್ಲಾ ಪಕ್ಷಗಳೂ ಬದ್ಧ.

ನಾನು ಮೊದಲಿನಿಂದಲೂ ೨೦೦೦ ವರ್ಷದ ಒಳಗೆ ಕೃಷ್ಣಾ ನದೀ ನೀರಿನಲ್ಲಿ ತನ್ನ ಪಾಲನ್ನು ಕರ್ನಾಟಕ ಉಪಯೋಗಿಸಿಕೊಳ್ಳಲು ಸಾಧ್ಯವಿಲ್ಲ ಎಂದು ಹೇಳುತ್ತಾ ಬಂದಿದ್ದೇನೆ. ಅಧಿಕಾರದಲ್ಲಿರುವವರು ಜನರನ್ನು ಕತ್ತಲೆಯಲ್ಲಿಟ್ಟು ಸುಳ್ಳು ಭರವಸೆಗಳನ್ನು ನೀಡುತ್ತಿದ್ದಾರೆ. ನನ್ನ ದೃಷ್ಟಿಯಲ್ಲಿ ಬಚಾವತ್ ಮಂಡಲಿಯ ನಿರ್ಧಾರವನ್ನು ಒಂದು ತೀರ್ಮಾನವೆಂದು ಪರಿಗಣಿಸಲಾಗುವುದಿಲ್ಲ. ಏಕೆಂದರೆ ಅದು ಕೃಷ್ಣಾ ನದಿ ಮತ್ತು ಉಪನದಿಗಳಲ್ಲಿನ ನೀರಿನ ಪೂರ್ಣ ಹಾಗೂ ಕಡೆಯ ಹಂಚಿಕೆ ಮಾಡಿಲ್ಲ.

ಬಚಾವತ್ ಮಂಡಲಿ ಸಂಬಂಧಪಟ್ಟ ರಾಜ್ಯಗಳನ್ನು ಕೆಲವು ಭಾಗ ನೀರನ್ನು ೨೦೦೦ ವರ್ಷದವರೆಗೆ ಉಪಯೋಗಿಸಿಕೊಳ್ಳಲು ಮಾತ್ರ ತಿಳಿಸಿದೆ.

ಉಳಿದ ಉಪಯೋಗಿಸಲ್ಪಡದ ನೀರನ್ನು ರಾಜ್ಯಗಳು ೨೦೦೦ ವರ್ಷದ ಬಳಿಕ ಒಟ್ಟಿಗೆ ಕುಳಿತು ಸೌಹಾರ್ದಯುತವಾಗಿ ಹಂಚಿಕೊಳ್ಳಬಹುದು. ಇದು ಸಾಧ್ಯವಾಗದಿದ್ದರೆ ಜಲಮಂಡಲಿಯ ರಚನೆಯಾಗಬಹುದು. ಇಂತಹ ಮಂಡಲಿ ಕೃಷ್ಣಾ ನದಿ, ಉಪನದಿಗಳು ಮತ್ತು ಕೃಷ್ಣಾ ಜಲಾನಯನ ಪ್ರದೇಶದ ಒಟ್ಟು ನೀರನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ.

ರಾಜ್ಯ ಸರ್ಕಾರವಾಗಲಿ, ಕೇಂದ್ರ ಸರ್ಕಾರವಾಗಲಿ ಕೃಷ್ಣಾ ನದಿ ನೀರಿನ ಉಪಯೋಗದ ಬಗ್ಗೆ ಆಸಕ್ತಿಯನ್ನು ತೋರಿಸಿಲ್ಲ. ಕೃಷ್ಣಾ ಜಲಯೋಜನೆಗೆ ಹೆಚ್ಚಿನ ಸಂಪನ್ಮೂಲ ವಿನಿಯೋಗವೊಂದರಿಂದ ಮಾತ್ರ ೨೦೦೦ದ ಒಳಗೆ ಸಾಧ್ಯವಾದಷ್ಟು ನೀರನ್ನು ಉಪಯೋಗಿಸಿಕೊಳ್ಳಬಹುದು.

ಅಭಿವೃದ್ಧಿಯೇತರ ಕಾರ್ಯಗಳಿಗೆ ಕಡಿವಾಣ ಹಾಕಿ ಅದರ ಹಣವನ್ನು ಕೃಷ್ಣಾ ನದಿ ಯೋಜನೆಗಳಿಗೆ ನೀಡಬಹುದು. ಅದರಿಂದ ಸಾಕಷ್ಟು ಹಣ ಸಿಗದಿದ್ದರೆ ಕೇಂದ್ರ ಸರ್ಕಾರ ಹಾಗೂ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳನ್ನು ನೆರವು ಕೇಳಬಹುದು. ಬ್ಯಾಂಕ್‌ಗಳು - ಖಾಸಗಿ ಹಣಕಾಸು ಸಂಸ್ಥೆಗಳಿಂದ ಕೂಡ ಹಣದ ನೆರವು ಪಡೆಯಬಹುದು. ರಾಜಕೀಯ ಇಚ್ಛಾ ಶಕ್ತಿ - ಮನಸ್ಸು ಇದ್ದಲ್ಲಿ ಇದಕ್ಕೆ ಸರ್ವ ಪ್ರಯತ್ನ ಮಾಡಬಹುದು. ಆದರೆ ೨೦೦೦ ವರ್ಷದ ಒಳಗೆ ಕೃಷ್ಣಾ ನದಿಯ ನೀರನ್ನು, ಒಂದು ಹನಿ ನೀರನ್ನೂ (ನಮಗೆ ಬಂದಿರುವ ಪಾಲಿನಲ್ಲಿ) ಬಿಡದೇ ಉಪಯೋಗಿಸುತ್ತೇವೆ ಎಂಬ ಪೊಳ್ಳು ಭರವಸೆ ನೀಡಿ ಕೃಷ್ಣಾ ಕಣಿವೆಯ ಜನರಿಗೆ ಮೋಸ ಮಾಡಬೇಡಿ ಎಂದು ಹೇಳಬಯಸುತ್ತೇನೆ.



ಕೃಷ್ಣಾ ಮೇಲ್ದಂಡೆ ಯೋಜನೆ ಕೃಷ್ಣಾ ಜಲಯೋಜನೆಗಳಲ್ಲಿ ಮುಖ್ಯವಾದದ್ದು. ಅದು ದೊಡ್ಡ ಯೋಜನೆಯಾದುದರಿಂದ ಹಲವು ಹಂತಗಳಲ್ಲಿ ಅದನ್ನು ರೂಪಿಸಲಾಯಿತು. ೧೯೬೪ರಲ್ಲಿ ದಿ|| ಲಾಲ್ ಬಹದ್ದೂರ್ ಶಾಸ್ತ್ರಿಯವರು ಶಂಕುಸ್ಥಾಪನೆ ಮಾಡಿದ ಮೊದಲನೇ ಹಂತದಲ್ಲಿ ಕೇವಲ ಮೂರನೇ ಒಂದು ಭಾಗ ಮಾತ್ರ ಕಾರ್ಯಗತವಾಗಿದೆ. ಶಂಕುಸ್ಥಾಪನೆ ಮಾಡಿ ೩೦ ವರ್ಷಗಳು ಕಳೆದರೂ ಕೆಲಸ ನಡೆಯದಿರುವುದರಿಂದ ಆ ಭಾಗದ ಜನರಲ್ಲಿ ಈ ಯೋಜನೆ ಪೂರ್ಣಗೊಳ್ಳುವ ಬಗ್ಗೆ ಅನುಮಾನವಿದೆ. ಎಲ್ಲಾ ಸರ್ಕಾರಗಳೂ ಕಾಲಕಾಲಕ್ಕೆ ನೀಡುತ್ತಿರುವ "ವಿರೋಚಿತ ಹೇಳಿಕೆ"ಗಳಿಗೂ ಕಾರ್ಯಕ್ಕೂ ಇರುವ ಅಂತರಗಳಿಂದ ಅಲ್ಲಿಯ ಜನ ಈ ಬಗ್ಗೆ ವಿಶ್ವಾಸವನ್ನು ಕಳೆದುಕೊಂಡಿದ್ದಾರೆ.

ಕೃಷ್ಣಾ ಮೇಲ್ದಂಡೆ ಯೋಜನೆ ಕೃಷ್ಣಾ ನದಿಯ ದೊಡ್ಡ ಯೋಜನೆಯಾದರೂ ಅದು ಗುಲ್ಬರ್ಗಾ ಜಿಲ್ಲೆಯ ಸುರಪುರ, ಶಹಾಪುರ ಮತ್ತು ಜೇವರ್ಗಿ ಈ ಮೂರು ತಾಲೋಕ್‌ಗಳ ಕೆಲಭಾಗಕ್ಕೆ ಮಾತ್ರ ನೀರುಣಿಸುತ್ತದೆ – ಇದರಿಂದ ಇಡೀ ಗುಲ್ಬರ್ಗಾ ಜಿಲ್ಲೆಗೆ ನೀರಾವರಿ ಸಿಗುತ್ತದೆ ಎನ್ನುವ ಭಾವನೆ ಇದ್ದರೆ ಅದು ತಪ್ಪು. ಕೃಷ್ಣಾ ಮೇಲ್ದಂಡೆ ಯೋಜನೆಯ ಬಲನಾಲೆ ರಾಯಚೂರು ಜಿಲ್ಲೆಯ ಮೂರು ತಾಲೋಕುಗಳ ಕೆಲಭಾಗಕ್ಕೆ ನೀರುಣಿಸುತ್ತದೆ.

ಕೃಷ್ಣಾ ಜಲಾನಯನ ಯೋಜನೆಗಳ ವ್ಯಾಪ್ತಿ ಒಳಗೆ ಕರ್ನಾಟಕ ಕೆಲವು ಮಧ್ಯಮ ನೀರಾವರಿಗಳನ್ನು ಪ್ರಾರಂಭಿಸಿತ್ತು. ಗುಲ್ಬರ್ಗಾ ಜಿಲ್ಲೆಯಲ್ಲಿ ಬೆಣ್ಣೆ ತೊರೆ, ಮುಲ್ಲಾಮಾರಿ, ಅಮರ್ಜ ಇತ್ಯಾದಿ. ೧೯೭೦ರಲ್ಲೇ ಈ ಯೋಜನೆಗಳು ಪ್ರಾರಂಭವಾದರೂ ಇಂದಿನವರೆಗೆ ನೀರು ಹಿಡಿದಿಡಲು ಸಾಧ್ಯವಾಗಿಲ್ಲ. ಈ ಯೋಜನೆಗಳ ಕಾರ್ಯ ಕಳಪೆ ಹಾಗೂ ಅಪೂರ್ಣವಾಗಿದೆ. ಇವು ಎಂದಿಗೆ ಮುಗಿಯುತ್ತವೋ ಅಥವಾ ಮುಗಿಯುವುದೇ ಇಲ್ಲವೋ ತಿಳಿದಿಲ್ಲ.

ನಾನು ಕರ್ನಾಟಕ ಸರ್ಕಾರವನ್ನು ಕೇಳಬಯಸುತ್ತೇನೆ: ನೀರಿನ ಉಪಯೋಗ ಹಾಗೂ ನೀರಿನ ಬದ್ಧತೆ ಅಂದರೆ ಏನು ?

ಕೇವಲ ಜಲಾಶಯ ಕಟ್ಟಿ ನೀರು ಹಿಡಿದಿಟ್ಟರೆ ಅದೇ ಉಪಯೋಗ ಎನ್ನುವುದಾದರೆ ೨೦೦೦ ವರ್ಷದೊಳಗೆ ಈ ನೀರಿನ ಉಪಯೋಗ ಸಾಧ್ಯವೇ ಎಂಬ ಬಗ್ಗೆ ಅವರು ಸ್ಪಷ್ಟಪಡಿಸಬೇಕು. ೨೦೦೦ ವರ್ಷದೊಳಗೆ ನಮ್ಮ ಪಾಲಿಗೆ ಬಂದ ನೀರನ್ನು ಉಪಯೋಗಿಸದಿದ್ದರೆ ಏನಾಗುತ್ತದೆ ? ಈ ನೀರು ನಮ್ಮ ರಾಜ್ಯಕ್ಕೆ ಉಳಿದಿರುತ್ತದೆಯೋ ಅಥವಾ ಸರ್ವೇಸಾಮಾನ್ಯ ಹಂಚಿಕೆಗೆ ಬರುತ್ತದೆಯೋ ಎಂಬ ಬಗ್ಗೆ ರಾಜ್ಯ ಸರ್ಕಾರ ಸ್ಪಷ್ಟೀಕರಣ ಮಾಡಬೇಕು. ಈ ಅಂಶವನ್ನು ಸರ್ಕಾರ ಕೂಲಂಕಷವಾಗಿ ವಿಚಾರ ಮಾಡಿ ವಿಧಾನಸಭೆ ಹಾಗೂ ಜನತೆಯ ಮುಂದೆ ಸ್ಪಷ್ಟವಾಗಿ ಹೇಳಬೇಕು.

ಕೃಷ್ಣಾ ನದಿ ಜಲಾನಯನ ಯೋಜನೆಗಳು - ಕೃಷ್ಣಾ ಮೇಲ್ದಂಡೆ ಯೋಜನೆ, ಅಲ್ಲಿ ನಡೆಯುತ್ತಿರುವ ಕೆಲಸದ ಮಂದಗತಿ, ನಮ್ಮ ಜಲ ಹಾಗೂ ಅಲ್ಲಿನ ಜನತೆಯ ಬಗ್ಗೆ ಸರ್ಕಾರಕ್ಕೆ (ಸರ್ಕಾರಗಳಿಗೆ), ರಾಜಕೀಯ ನಾಯಕರುಗಳಿಗೆ ಇರುವ ಅನಾಸಕ್ತಿ - ಅನಾದರಣೆಗಳಿಗೆ ಒಂದು ನಿದರ್ಶನ.

ಕೃಷ್ಣಾ ಜಲಾನಯನ ಪ್ರದೇಶದ ಜನತೆಯ ನೀರಿನ ಅಗತ್ಯವನ್ನು ನಾವು ಸಾಧ್ಯವಾದಮಟ್ಟಿಗೆ ಪೂರೈಸಲು ಪ್ರಾಮಾಣಿಕವಾಗಿ ಪ್ರಯತ್ನಿಸದಿದ್ದರೆ ಆ ಜನತೆಯ ಕಣ್ಣೀರ ಶಾಪ ನಮಗೆ ತಟ್ಟುತ್ತದೆ. ಕೃಷ್ಣೆ ಹಾಗೂ ಜನತೆ ನಮ್ಮನ್ನು ಕ್ಷಮಿಸುವುದಿಲ್ಲ.

ವೀರೇಂದ್ರ ಪಾಟೀಲ



*ಜನ್ಮಭೂಮಿಯು ಸ್ವರ್ಗವಾದರೆ, ಇದೇ ಜನ್ಮಭೂಮಿಯೆಂಬ ನಿಯಮ ಇರಲಿಕ್ಕಿಲ್ಲ, ಅಲ್ಲವೆ ?.........*

# ಒಬ್ಬ ದೇಶ ಪ್ರೇಮಿಯ ಒಲವು

ಹೌದು ! ಪಾಕಿಸ್ತಾನ ನನ್ನ ತಾಯ್ನಾಡು. ಪೇಶಾವರ ನನ್ನ ಹುಟ್ಟೂರು. ಐವತ್ತು ವರ್ಷಗಳ ಹಿಂದೆ 'ಕಾರಣ' ನಿಮಿತ್ತ ಈ ದೇಶಕ್ಕೆ ಕಾಲಿಟ್ಟೆ. ಇದೀಗ ಆ ನನ್ನ ದೇಶದ ಜನರು ತತ್ತರಿಸುತ್ತಿದ್ದಾರೆ. ಅಲ್ಲಿನ ಅಲ್ಪಸಂಖ್ಯಾತ ಹಿಂದೂ ಜನರ ಬದುಕು ಅತಂತ್ರ ಸ್ಥಿತಿಯಲ್ಲಿದೆ. ಪ್ರಾಣಭಯದಿಂದ ಕಂಪಿಸುವ ಅವರಿಗೆ ಇದೀಗ ಸಾಂತ್ವನ ಹೇಳುವ ಒಬ್ಬನೇ ಒಬ್ಬ ನಾಯಕ ಅಲ್ಲಿಲ್ಲ. ಹಾಗಾಗಿ ನಾನೊಮ್ಮೆ ಅಲ್ಲಿಗೆ ಹೋಗಬೇಕು. ಅವರಿಗೆ ಸಾಂತ್ವನ ಹೇಳಬೇಕು. ಅವರ ಮನಸ್ಸಿಗೆ ಸಮಾಧಾನವನ್ನುಂಟುಮಾಡಬೇಕು. ಅವರ ಬದುಕು ನನ್ನಂತೆಯೇ ಆಗಬೇಕು.

ಶಿವರಾಮ್ ಯಾದವ್‌ಗೆ ಬಿದ್ದದ್ದು ಕನಸಲ್ಲ. ಮತ್ತೊಮ್ಮೆ ಎಡ ಮತ್ತು ಬಲ ದಿಕ್ಕಿಗೆ ಕಣ್ಣೋಡಿಸಿದರು. ನಿದ್ದೆ ಹೋದ ಹೆಂಡತಿಯ ಆ ಬಿಳಿಮುಖ ಬೆಳದಿಂಗಳ ಆ ಶುಭ್ರ ರಾತ್ರಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಶಿವರಾಮ್ ಯಾದವ್ ಮತ್ತೊಮ್ಮೆ ಕೆಮ್ಮಿದರು. ಹಾಗೇ ಎದ್ದು ಕೂತರು. ದೀಪ ಬೆಳಗಿಸಿ ಗಡಿಯಾರ ನೋಡಿದರು. ಸೂರ್ಯ ಅರೆ ನಿದ್ರೆಯಲ್ಲಿದ್ದ.

'ಏನು, ನನಗೆ ಬಿದ್ದದ್ದು ಕನಸೇ ?' – ಶಿವರಾಮ್ ಯಾದವ್ ತನ್ನಲ್ಲೇ ಪ್ರಶ್ನಿಸಿ ಯಾಚನೆಯ ನೋಟ ಬೀರಿದರು. ಮಗ ಹಾಯಾಗಿ ನಿದ್ದೆ ಹೋಗಿದ್ದ. ಆತನನ್ನು ಅಥವಾ ಆಕೆಯನ್ನು ಎಬ್ಬಿಸಲೇ, ಎಂದು ಶಿವರಾಮ್ ಯಾದವ್ ಒಮ್ಮೆ ತನ್ನಲ್ಲಿ ಪ್ರಶ್ನಿಸಿದರೂ ಮರುಕ್ಷಣದಲ್ಲಿ ಎಬ್ಬಿಸುವುದು ಬೇಡ ಎನಿಸಿತು ಅವರಿಗೆ.

'ಇಲ್ಲ, ನಿಮಗೆ ಬಿದ್ದದ್ದು ಕನಸಲ್ಲ. ನೀವು ಮಾಡಬೇಕಾದ ಕೆಲಸ ಕೂಡಾ ಅದುವೇ ಆಗಿದೆ. ನಿಮಗೆ ಇಷ್ಟೆಲ್ಲಾ ಶಕ್ತಿ, ನಾಯಕತ್ವದ ಗುಣ ಇರುವಾಗ ನಾವು ಈ ಕಡೆ ಬಂದದ್ದೇ ತಪ್ಪಾಯಿತು. ನಾವು ಅಲ್ಲೆ, ಅದೇ ಆ ಪಾಕಿಸ್ತಾನದಲ್ಲಿದ್ದು ಸೇವೆ ಮಾಡಬೇಕಾಗಿತ್ತು. ಅಲ್ಲಿನ ಹಿಂದೂ ಬಾಂಧವರ ಕಣ್ಣೀರು ಒರೆಸಬೇಕಾಗಿತ್ತು. ನಾವು ಇಲ್ಲಿಗೆ ಬಂದದ್ದಾದರೂ ಯಾತಕ್ಕೆ ? ಇಲ್ಲಿನ ಅಲ್ಪಸಂಖ್ಯಾತ ಮುಸ್ಲಿಮರ ನಡುವೆ ಬಹುಸಂಖ್ಯಾತ ಹಿಂದೂಗಳಿಗೆ ಇರುವ ಭಯವಾದರೂ ಏನು ? ಹಾಗಾಗಿ ನೀವು ದಯವಿಟ್ಟು ಒಮ್ಮೆ ನಮ್ಮ ಆ ತಾಯ್ನಾಡಿಗೆ ಹೋಗಿ ಬನ್ನಿ. ನಮಗೆ ಜನ್ಮ ಕೊಟ್ಟ ನಾಡದು. ಹೇಗೆ ಮರೆಯಲು ಸಾಧ್ಯ ಆ ದೇಶವನ್ನು' ಎನ್ನುತ್ತಾ ಹೆಂಡತಿ ಗಂಗಾಲಕ್ಷ್ಮಿ ತನ್ನ ಕೈ ಹಿಡಿದು ಹೇಳಿದಂತಾಯಿತು.

ಶಿವರಾಮ್ ಯಾದವ್ ಒಮ್ಮೆ ತಣ್ಣಗೆ ಕಂಪನಕ್ಕೊಳಗಾದರು. ಅವರಿಗೆ ಮನಸ್ಸಲ್ಲಿ ನೂರಾರು ಅವ್ಯಕ್ತ ಭಯ. ಆದರೆ ಆತ್ಮಸಂತೃಪ್ತಿಯ ಹೊನಲಲ್ಲಿ ತೇಲಿದಂತಾಯಿತು. ಭಯ-ಸಂತೃಪ್ತಿಯ ನಡುವೆ ಗಲಿಬಿಲಿಗೊಂಡ ಶಿವರಾಮ್ ಯಾದವ್ ಕತ್ತನ್ನು ಎಡಕ್ಕೆ ತಿರುಗಿಸಿದಾಗ ಹೆಂಡತಿ ಗಂಗಾಲಕ್ಷ್ಮಿ ಎದ್ದು ಕೂತರಲ್ಲದೆ ಆಶ್ಚರ್ಯ ಚಿಹ್ನೆಯೊಂದಿಗೆ ಗಂಡನ ಮುಖ ನೋಡಿದರು.

''ಏನು ? ಈ ನಡುರಾತ್ರಿಯಲ್ಲಿ ಅದ್ಯಾವ ಚಿಂತೆ ಮಾಡುತ್ತಿದ್ದೀರಿ ?''

''ನೀನು ಈಗ ಹೇಳಿದೆಯಲ್ಲ, ಹಾಗೇ ನಾನು ಮಾಡಲಾ ?''

''ಏನು, ನಾನು ಏನು ಹೇಳಿದೆ ?''

''ಅರೆ.. ಈಗತಾನೇ ನೀ ಹೇಳಿದ್ದನ್ನು ಮರೆತುಬಿಟ್ಟೆಯಾ ?''

''ಇಲ್ಲ... ನಿಮಗೆ ಯಾವುದೋ ಒಂದು ಕನಸು ಬಿತ್ತು. ನೀವು ಆ ಗುಂಗಿನಲ್ಲಿ ಮಾತನಾಡುತ್ತಿದ್ದೀರಿ. ಇರಲಿ ಬಿಡಿ, ನಮಗ್ಯಾಕೆ ಆ ಚಿಂತೆ ?''

''ಲಕ್ಷ್ಮೀ.... ಅದು ಕನಸಲ್ಲ, ಚಿಂತೆಯೂ ಅಲ್ಲ. ನೋಡು ಲಕ್ಷ್ಮಿ, ನಾವು ಇಲ್ಲಿಗೆ ಯಾಕೆ ಬಂದೆವು ಗೊತ್ತಾ ? ಹಿಂದೂಗಳ ಮೇಲಿನ ಅಪಾರ ಪ್ರೀತಿ, ಮಮತೆಯಿಂದ ಅಲ್ಲವಾ ? ಹಾಗೆ ಬಂದ ನಾವು ಇಲ್ಲಿನ ಹಿಂದೂಗಳ ರಕ್ಷಣೆಗಾಗಿ ಹಗಲಿರುಳು ಶ್ರಮಿಸಿದೆವು. ಆದರೆ ಅದೇ ನಮ್ಮ ತಾಯ್ನಾಡಿನಲ್ಲಿ ಹುಟ್ಟಿ ಬೆಳೆದ ಅದೆಷ್ಟೋ ಹಿಂದೂಗಳು ಈಗಲೂ ನೆಲೆಸಿದ್ದಾರೆ. ಅವರ ಬದುಕು ಅತಂತ್ರ ಸ್ಥಿತಿಯಲ್ಲಿದೆ. ಇಲ್ಲಿನ ಹಿಂದೂಗಳ ರಕ್ಷಣೆಗಿಂತಲೂ ನಮಗೆ ಅಲ್ಲಿನ ಹಿಂದೂಗಳ ರಕ್ಷಣೆ ಮತ್ತು ಅವರ ಭವಿಷ್ಯ ಮುಖ್ಯ. ಯಾಕೆ ಗೊತ್ತಾ ? ಅವರು ಅಲ್ಲಿ ನರಳುತ್ತಿದ್ದಾರೆ. ಅವರಿಗೆ ಸಾಂತ್ವನ ಹೇಳಬೇಕು. ಅವರ ಬದುಕಿಗೆ ನೆಮ್ಮದಿ ಕೊಡಬೇಕು. ಅದು ಬಿಟ್ಟು ನಾವು ಈಗ ಇಲ್ಲಿನ



ಹಂಝು ಮಲಾರ್

ಬಹುಸಂಖ್ಯಾತ ಹಿಂದೂಗಳ ಜತೆ ನಿರ್ಭಯವಾಗಿ ಬದುಕುತ್ತಿದ್ದೇವೆ. ಹಾಗಾಗಿ ನಮ್ಮನ್ನು ಆ ಜನ ಕ್ಷಮಿಸಿಯಾರೇ ? ಪಾಪ, ಅವರೀಗ ತಮ್ಮ ಅಸ್ತಿತ್ವಕ್ಕಾಗಿ ಪರದಾಡುತ್ತಿದ್ದಾರೆ. ಅವರ ನೆತ್ತಿಯ ಮೇಲೆ ತೂಗುಗತ್ತಿ ನೇತಾಡುತ್ತಿದೆ. ಇಲ್ಲಿನ ಅಲ್ಪಸಂಖ್ಯಾತ ಮುಸ್ಲಿಮರು, ಅಲ್ಲಿನ ಅಲ್ಪಸಂಖ್ಯಾತ ಹಿಂದೂಗಳು ಪಡುವ ಪಾಡು ಒಂದೇ ಎಂದು ನನಗೀಗ ಅರ್ಥವಾಗುತ್ತಿದೆ. ಈ ರಾತ್ರಿಯಷ್ಟೇ ನನ್ನ ಕಣ್ಣು ತೆರೆಯಿತು. ನಾನು ತಪ್ಪು ಮಾಡಿಬಿಟ್ಟೆ. ನಾನು ಹಿಂದೂ ನಿಜ. ಆದರೆ ನನಗೆ ಜನ್ಮ ಕೊಟ್ಟ ನಾಡು ಮುಖ್ಯ. ಹಾಗಾಗಿ ನಾನು ಈಗಲಾದರೂ ನನ್ನ ದೇಶದ ಪರಿಸರ, ಜನರು ಇತ್ಯಾದಿ ಎಲ್ಲವನ್ನೂ ಪ್ರೀತಿಸಬೇಕು. ನನ್ನ ಒಲವು ಕ್ಷಣಿಕವಾಗಿರಬಾರದು ಎಂದು ಶಿವರಾಮ್ ಯಾದವ್ ತನ್ನ ಹೆಂಡತಿಯ ಮುಂದೆ ಮಾತನಾಡುತ್ತಾ ಸಾಗಿದರು. ಮುಖದಲ್ಲಿ ಬೆವರಿಳಿಯುತ್ತಿತ್ತು. 'ಏನು, ನನ್ನ ನಿರ್ಧಾರ ಸರಿ ಅಲ್ಲವೇ ?' ಎಂದು ಮತ್ತೊಮ್ಮೆ ಹೆಂಡತಿಯೊಡನೆ ಕೇಳುತ್ತಾ 'ಒಂದು ಗ್ಲಾಸ್ ನೀರು ತಂದುಕೊಡುವೆಯಾ ?' ಎಂದೂ ಕೇಳಿದರು.

ಗಂಗಾಲಕ್ಷ್ಮಿ ಆ ರಾತ್ರಿ ಹಾಸಿಗೆಯಿಂದ ಎದ್ದು ಗಂಡನಿಗೆ ಒಂದು ಗ್ಲಾಸ್ ನೀರು ತಂದುಕೊಟ್ಟರು. ೭೦ ವರ್ಷ ಪ್ರಾಯದ ಶಿವರಾಮ್ ಯಾದವ್‌ರ ಮನಸ್ಸು ಮತ್ತು ದೇಹ ಇದೀಗ ಆ ದೇಶ ತಲುಪಲು ತುದಿಗಾಲಲ್ಲಿ ನಿಂತಂತಿತ್ತು. ಗಂಗಾಲಕ್ಷ್ಮಿ ಗಂಡನನ್ನು ಸಮಾಧಾನಪಡಿಸತೊಡಗಿದರು.

ರಾತ್ರಿಯ ಬೆಂಕಿಯ ಕ್ಷಣಗಳು ಬೆಳಗಾಗುತ್ತಲೇ ಮತ್ತಷ್ಟು ಪ್ರಖರವಾಯಿತು. ಶಿವರಾಮ್ ಯಾದವ್‌ರ ಮನಸ್ಸು ಇನ್ನಷ್ಟು ಗಟ್ಟಿಯಾಯಿತು. 'ಹೌದು, ನಾನು ಹೋಗಲೇಬೇಕು' ಎಂದು ನಿರ್ಧರಿಸುತ್ತಲೇ ಮೇಲೆ ಎದ್ದುನಿಂತರು.

ಸದಾಶಿವ 'ಪವಿತ್ರ ದೇಶ' ಎಂಬ ಸಂಘಟನೆ ಮುಖಂಡರು. ಅವರ ಅಪ್ಪಣೆ ಇಲ್ಲದೆ ಒಂದೇ ಒಂದು ಇಂಚು ಗೆರೆ ಕೂಡ ಎಳೆಯುವಂತಿಲ್ಲ. ಯಾವ ಕೆಲಸ ಆಗಬೇಕಾದರೂ ಅದು ಅವರ ನಿರ್ಧಾರದಂತೆ ಆಗಬೇಕು. ಅವರಿಗೆ ಎದುರು ಮಾತನಾಡುವಂತಿಲ್ಲ. ಶಿವರಾಮ್ ಯಾದವ್ 'ಪಾಕಿಸ್ತಾನ'ಕ್ಕೆ ಹೋಗಲು ನಿರ್ಧರಿಸಿದ್ದು ಅವರ ಕಿವಿಗೆ ಬಿತ್ತು. ಅವರು ಒಮ್ಮೆ ಮೈಕೊಡವಿ ಎದ್ದು ಕೂತರು. 'ಏನು, ಅವ ಆ ದೇಶಕ್ಕೆ ಹೋಗುತ್ತಾನೆಯೇ ? ಯಾಕೆ, ಇಲ್ಲಿ ಅವನಿಗೆ ಅಂಥದ್ದು ಏನಾಯಿತು ?' ಎಂದು ತನ್ನಲ್ಲೇ ಪ್ರಶ್ನಿಸಿ ಸಿಡಿಮಿಡಿಗೊಂಡರು. ಕೈಯಲ್ಲಿದ್ದ ಪತ್ರಿಕೆ ಅವರಿಗೆ ಅರಿವಿಲ್ಲದಂತೆ ಕೆಳಗೆ ಬಿತ್ತು. ಕುಡಿಯಲು ಮೇಜಿನ ಮೇಲೆ ಇಟ್ಟ ಚಾ ಅಲ್ಲೇ ತಣ್ಣಗಾಯಿತು.

'ಪವಿತ್ರ ದೇಶ' ಎಂಬ ಸಂಘಟನೆಯ ಎರಡನೇ ಹಂತದ ನಾಯಕರಾಗಿದ್ದ ಶಿವರಾಮ್ ಯಾದವ್ ಅವರು ಸದಾಶಿವರ ಎದುರುಹೋಗಿ ನಿಂತರು. ತನ್ನ ಮನದಿಂಗಿತ ಅವರ ಗಮನಕ್ಕೆ ಬಂದುದು ಮತ್ತು ಅದಕ್ಕೆ ಅವರು ಆಗಲೇ ಅಸಮಾಧಾನ ಸೂಚಿಸಿದ್ದು ಅವರಿಗೆ ಗೊತ್ತಾಗಿತ್ತು. ಆದರೂ ಸಂಪ್ರದಾಯದಂತೆ ಅವರ ಎದುರು ಹೋಗಿ ನಿಂತರು.

'ನಾನೊಮ್ಮೆ ನನ್ನ ದೇಶಕ್ಕೆ ಹೋಗಿ ಬರಬೇಕಾಗಿದೆ.'

'ಯಾಕೆ ?'

'ಆ ದೇಶದ ಜನರ ನೆನಪಾಗುತ್ತಿದೆ. ಅವರ ಬದುಕು ಅತಂತ್ರದಲ್ಲಿದೆ ಎಂಬ ಸುದ್ದಿ ಇದೆ. ಹಾಗಾಗಿ ಒಮ್ಮೆ ಹೋಗಿ ಅವರಿಗೆ ಸಾಂತ್ವನ ಹೇಳಬೇಕು ?'

'ಹಾಗಾದರೆ, ನಿನಗೆ ಈ ದೇಶ ಕೇಡು ಮಾಡಿದೆ ಎಂದು ನಾನು ತಿಳಿದುಕೊಳ್ಳಲೇ ?'

'ಇಲ್ಲ, ನನಗೆ ಈ ದೇಶ ಕೇಡು ಮಾಡಿಲ್ಲ. ಆದರೆ ನನ್ನ ಊರ ಜನರನ್ನು ಒಮ್ಮೆ ನೋಡಬೇಕು. ದೇಶ ವಿಭಜನೆಯ ಸಂದರ್ಭದಲ್ಲಿ ಅವರು ಅಲ್ಲೇ ತಳವೂರಿದರು. ನಾನು ಹಿರಿಯರ ಒತ್ತಾಸೆಯಂತೆ ಇಲ್ಲಿಗೆ ಬಂದೆ. ಅದೂ ಹಿಂದೂಗಳ ಸೇವೆಗಾಗಿ. ಆದರೆ ಇಲ್ಲಿನ ಹಿಂದೂಗಳ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವಾಗ ಅಲ್ಲಿನ ಹಿಂದೂಗಳ ಕಣ್ಣೀರು ಒರೆಸುವವರು ಯಾರೂ ಇಲ್ಲವಲ್ಲ. ಇದೀಗ ಆ ಕೊರಗು ನನ್ನನ್ನು ಕಾಡುತ್ತಿದೆ. ಅದಕ್ಕೆ ನಾನಲ್ಲಿಗೆ ಒಮ್ಮೆ ಹೋಗಿಬರುತ್ತೇನೆ. ಅವರು ಒಂದು ಕ್ಷಣ ಪ್ರೀತಿಯಿಂದ ನಗುವುದನ್ನು ನೋಡಬೇಕಾಗಿದೆ.

'ಅಂದರೆ ನೀನು ಪಾಕಿಸ್ತಾನವನ್ನು ಪ್ರೀತಿಸುತ್ತೀ ಅಂತಾಯಿತು ?'

'ಹೌದು. ಅದು ನನಗೆ ಜನ್ಮ ಕೊಟ್ಟ ರಾಷ್ಟ್ರ. ಹಾಗಾಗಿ ನಾನು ಆ ರಾಷ್ಟ್ರವನ್ನು ಪ್ರೀತಿಸುವುದರಲ್ಲಿ ತಪ್ಪೇನಿದೆ ? ಐವತ್ತು ವರ್ಷಗಳ ಕಾಲ ಈ ದೇಶದಲ್ಲಿ ನಾನು ಸಾಧ್ಯವಾದಷ್ಟು ಸೇವೆ ಸಲ್ಲಿಸಿದೆ. ನನಗೆ ಇಲ್ಲಿಯ ಬದುಕು ತೃಪ್ತಿ ಕೊಟ್ಟಿದೆ. ಅನ್ನ ಕೊಟ್ಟ ಋಣಕ್ಕಾಗಿ ನಾನು ಅದನ್ನು ಹೇಳಲೇಬೇಕಾಗಿದೆ. ಆದರೆ ಕೇವಲ ನಾನು ಮಾತ್ರ ಇಲ್ಲಿ ಸಂತೃಪ್ತಿಯ ಬದುಕು ಸಾಗಿಸಿದರೆ ಸಾಕಾ ? ಅವರೂ ಬದುಕಬೇಡವೇ ?' ಎನ್ನುತ್ತಾ ಶಿವರಾಮ್ ಯಾದವ್ ಅವುಡುಗಚ್ಚಿ ಮುಖಕ್ಕೆ ಕೈಯಾಡಿಸಿದರು.

ಸದಾಶಿವರು ಬಲವಾಗಿ ಸೀನಿದರು. ಹಾಗೇ ಮತ್ತೊಮ್ಮೆ ಕುರ್ಚಿಗೆ ಒರಗಿ ಕೂತರಲ್ಲದೆ 'ನೀನು ಆ ರಾಷ್ಟ್ರಕ್ಕೆ ಮತ್ತೆ ಕಾಲಿಡುವುದು ನನಗೆ ಇಷ್ಟವಿಲ್ಲ. ಯಾಕೆಂದರೆ ಅದು ನಮ್ಮ ಶತ್ರು ರಾಷ್ಟ್ರ' ಎಂದು ಹೇಳಿದರು.

'ಸರಿ, ಪಾಕಿಸ್ತಾನ ಶತ್ರು ರಾಷ್ಟ್ರ. ಹಾಗೆಂದು ಅಲ್ಲಿನ ಹಿಂದೂ ಬಾಂಧವರೂ ಶತ್ರುಗಳೆಂದು ನೀವು ಪರಿಗಣಿಸುತ್ತೀರೋ ?' ಎಂದು ಶಿವರಾಮ್ ಯಾದವ್ ಪ್ರಶ್ನಿಸಿದಾಗ, 'ಅವರು' ಮೌನವಾದರು. ಐದು ನಿಮಿಷಗಳ ಕಾಲ ಅಲ್ಲಿ ಮೌನ ಆವರಿಸಿತ್ತು. ಶಿವರಾಮ್ ಯಾದವ್ ನಿಂತೇ ಇದ್ದರು. ಸದಾಶಿವರು ಗಲ್ಲಕ್ಕೆ ಕೈ ಇಟ್ಟು ಕೂತಿದ್ದರು. ಅದು 'ಅಸಮಾಧಾನದ ಲಕ್ಷಣ' ಎಂದು ಬಗೆದು ಶಿವರಾಮ್ ಯಾದವ್ ನೇರ ಅಲ್ಲಿಂದ ಹೊರ ಹೆಜ್ಜೆ ಇಟ್ಟರು.

* * *

ಸರಿಸುಮಾರು ೫೦ ವರ್ಷಗಳ ಹಿಂದೆ, ಭಾರತ ಮತ್ತು ಪಾಕಿಸ್ತಾನ ವಿಭಜನೆಗೊಳ್ಳುವಾಗ ಹಿಂದೂ ಮತ್ತು ಮುಸ್ಲಿಮರು ತಮಗಿಷ್ಟವಾದ ರಾಷ್ಟ್ರದಲ್ಲಿ ನೆಲೆಯೂರಲು ಮುಂದಾದ ಸಂದರ್ಭದಲ್ಲಿ ಶಿವರಾಮ್ ಯಾದವ್ ಅವರು ಹಿರಿಯರ ಒತ್ತಾಸೆ ಮೇರೆಗೆ ಪಾಕಿಸ್ತಾನದಿಂದ ಭಾರತಕ್ಕೆ ಕಾಲಿಟ್ಟಿದ್ದರು. ಆವಾಗ ಅವರಿಗೆ ಬರೋಬರಿ ೨೦ ವರ್ಷ. ಸ್ಫುಟಿಯುವ ಬಿಸಿರಕ್ತದ ದೇಹ ಅದು. ಕ್ರಾಂತಿ ಎಂಬುದನ್ನು ಶಿವರಾಮ್ ಯಾದವ್ ಹುಟ್ಟಿನಿಂದಲೇ ಕಲಿತು ಕೊಂಡಿದ್ದರು. ಬಾಲ್ಯದಲ್ಲೇ ಸೂಕ್ಷ್ಮಮತಿಯನ್ನು ಮೈಗೂಡಿಸಿಕೊಂಡಿದ್ದ ಶಿವರಾಮ್ ಯಾದವ್‌ರ ಚುರುಕಾದ ಬುದ್ಧಿ ಕಂಡ ಅವರ ಹೆತ್ತವರು ಮಗ ಇಲ್ಲಿರುವುದಕ್ಕಿಂತ ಭಾರತದಲ್ಲೇ ಇರುವುದು ಲೇಸು. ಇಲ್ಲದಿದ್ದರೆ ಈ ಬುದ್ಧಿವಂತ ಮಗನನ್ನು ನಾವು ಎಳೆಯ ಹರೆಯದಲ್ಲೇ ಕಳಕೊಳ್ಳಬೇಕಾದೀತು ಎಂದು ಭಾವಿಸುತ್ತಲೇ ಅವರನ್ನು ಭಾರತಕ್ಕೆ ಕಳುಹಿಸಿಕೊಟ್ಟಿದ್ದರು. ಬುದ್ಧಿ ತುಂಬುವ ಮೊದಲೇ ಹಿರಿಯರ ಒತ್ತಾಸೆಯನ್ನು ಸಂಪೂರ್ಣವಾಗಿ ಅರಿತುಕೊಳ್ಳಲು ಅಸಮರ್ಥರಾಗಿದ್ದ ಶಿವರಾಮ್ ಯಾದವ್ ಕೊನೆಗೂ ಭಾರತ ತಲುಪಿದ್ದರು.

* * *

ಶಿವರಾಮ್ ಯಾದವ್.

ಆಗಿನ್ನೂ ಬಿಸಿ ರಕ್ತದ ಯುವಕ. ದೇಶ ವಿಭಜನೆಯ ಸಂದರ್ಭದಲ್ಲಿ ಉಂಟಾಗಿದ್ದ ಕೋಮುಭಾವನೆಯಿಂದಾಗಿ ಹಿಂದೂ ಮುಸ್ಲಿಮರು ಪರಸ್ಪರ ದ್ವೇಷಾಸೂಯೆಯಿಂದ ಕೆಕ್ಕರಿಸಿ ನೋಡುತ್ತಿದ್ದರು. ಎರಡೂ ಸಮಯದಾಯದ ನಡುವೆ ಪರಸ್ಪರ ನಂಬಿಕೆ ದೂರವಾಗಿತ್ತು. ಹಿರಿಯರ ಒತ್ತಾಯದ ಮೇರೆಗೆ ಭಾರತಕ್ಕೆ ಕಾಲಿಟ್ಟ ಕೂಡಲೇ 'ಪವಿತ್ರ ದೇಶ' ಎಂಬ ಸಂಘಟನೆಯ ಸಾಮಾನ್ಯ ಸದಸ್ಯರಾಗಿ ಸೇರ್ಪಡೆಗೊಂಡ ಶಿವರಾಮ್ ಯಾದವ್ ನಂತರ ಹಂತಹಂತವಾಗಿ ವಿವಿಧ ಜವಾಬ್ದಾರಿಗಳನ್ನು ವಹಿಸಿ ಮೇಲೇರುತ್ತಾ ಜನಾನುರಾಗಿಯಾಗಿದ್ದರು. ಆದರೆ ಇತ್ತೀಚೆಗೆ ಅವರಿಗೆ ಸಂಘಟನೆಯಲ್ಲಿ, ಸೇವೆಯಲ್ಲಿ ಆಸಕ್ತಿ ಕುಂದಿತ್ತು. ದೇಶಸೇವೆ ಮತ್ತು ಪ್ರೇಮದ ಹೆಸರಲ್ಲಿ ನಡೆಯುತ್ತಿದ್ದ ಕೆಲವೊಂದು ಅಹಿತಕರ ಘಟನೆ ಅವರ ಮನಸ್ಸಿಗೆ ತೀರಾ ನೋವನ್ನುಂಟುಮಾಡಿತ್ತು. ಐವತ್ತು ವರ್ಷಗಳ ಕಾಲ ಭಾರತದ ಮಣ್ಣಿನ ವಾಸನೆ ಪಡೆದ ಅವರಿಗೆ ಅದೊಂದು ರಾತ್ರಿ ತನ್ನ ತಾಯ್ನಾಡಿನ ನೆನಪಾಯಿತು.

ಹೌದು. ನನ್ನದು ಪಾಕಿಸ್ತಾನ. ಅಲ್ಲೂ ಹಿಂದುಗಳಿದ್ದಾರೆ. ಅವರ ಪಾಡು ಈಗ ಹೇಗಿದೆ ? ಅವರ ಬದುಕು ನೆಮ್ಮದಿಯಿಂದ ಕೂಡಿರಬಹುದೇ ? ನಾನು ಬಾಲ್ಯದಲ್ಲಿ ಕಳೆದ ಮನೆ, ನೆರೆಯ ಮಕ್ಕಳ ಜತೆ ಆಡಿದ ಹಿತ್ತಲ ಮರದ ಗೆಲ್ಲು, ಮಳೆಗಾಲದಲ್ಲಿ ಹರಿದುಬರುತ್ತಲೇ ಕಸಕಡ್ಡಿಗಳನ್ನು ತನ್ನ ಬಗಲಿಗೆ ಹಾಕಿಕೊಳ್ಳುವ ಮನೆ ಮುಂಭಾಗದ ತೋಡು, ಅಲ್ಲಿನ ಜನ, ಪರಿಸರ ಇತ್ಯಾದಿಯ ಒಂದೊಂದು ಹೊರ ಮತ್ತು ಒಳಮೈಯು ಶಿವರಾಮ್ ಯಾದವ್ ಅವರ ಮನಸ್ಸನ್ನು ಐವತ್ತು ವರ್ಷಗಳ ಹಿಂದಕ್ಕೆ ಓಡಿಸಿತು.

ನಾನು ಪಾಕಿಸ್ತಾನಕ್ಕೆ ಒಮ್ಮೆ ಹೋಗಿಬರುತ್ತೇನೆ. ನನ್ನ ಬಾಂಧವರ ಜತೆ ಒಂದು ಕ್ಷಣ ಮಾತನಾಡಿ ಬರುವೆ. ಅವರ ಕಷ್ಟ ಸುಖ ಆಲಿಸುವೆ. ಅವರನ್ನೊಮ್ಮೆ ಕಣ್ಣಾರೆ ಕಾಣುವೆ ಎಂದು ಹೇಳುವಾಗ ಈ ನಾಯಕ ಯಾಕೆ ಅದನ್ನು ತಡೆಯುತ್ತಾರೆ ಎಂದು ಶಿವರಾಮ್ ಯಾದವ್ ಕೂತಲ್ಲೇ ಪ್ರಶ್ನಿಸುತ್ತಾರೆ. ಅವರಿಗೆ ಅದು ಉತ್ತರ ಸಿಗದ ಪ್ರಶ್ನೆಯಾಗಿತ್ತು. ಕೂತು ಆಲೋಚಿಸುತ್ತಲೇ ಇರುವಾಗ ಕುಡಿಯಲು ಹೆಂಡತಿ ತಂದಿಟ್ಟಿದ್ದ ಚಾ ತಣ್ಣಗಾದದ್ದನ್ನು ನೋಡಿ, ನಾಳೆ ಮನುಷ್ಯನ ಪಾಡೂ ಇದೇ ರೀತಿಯಲ್ಲ. ಇದ್ದಕ್ಕಿದ್ದ ಹಾಗೆ ಮಾಯವಾಗುವುದು ಎನ್ನುತ್ತಾ ಶಿವರಾಮ್ ಯಾದವ್ ಮತ್ತೆ ಆಲೋಚನೆಯಲ್ಲೇ ಮುಳುಗಿದರು.

ಶಿವರಾಮ್ ಯಾದವ್ ತನ್ನ ತಾಯ್ನಾಡಾದ ಪಾಕಿಸ್ತಾನಕ್ಕೆ ಹೋಗಿಬರಲು ತವಕಿಸುತ್ತಿರುವ ಸುದ್ದಿ ಪರಿಸರದಾದ್ಯಂತ ಸುದ್ದಿಯಾಯಿತು. 'ಏನು ಅವರು ಅಲ್ಲಿಗೆ ಹೋಗುವುದೇ ? ಯಾಕೆ ಇಲ್ಲಿ ಏನಾಯಿತು ? ಹ್ಞಾಂ. ಅವರ ಜನ್ಮ ನಾಡು ಪಾಕಿಸ್ತಾನವೇ ? ಇಲ್ಲ, ಇದರ ಹಿಂದೆ ಯಾವುದೋ ಸಂಚು ಇದೆ. ಇಲ್ಲದಿದ್ದರೆ ಇದ್ದಕ್ಕಿದ್ದ ಹಾಗೆ ಅವರು ಈ ರೀತಿ ತವಕಿಸುವುದು ಎಂದರೆ ? ಅದೂ ಇಂಥ ವಿಷಮ ಪರಿಸ್ಥಿತಿಯಲ್ಲಿ,' ಹೀಗೆ ನಾನಾ ಕಡೆಯಿಂದ ನಾನಾ ಮಾತುಗಳು ಕೇಳಿಬಂದವು.

ಶಿವರಾಮ್ ಯಾದವ್ ಅದನ್ನು ಕೇಳಿಯೂ ಕೇಳದಂತೆ ಮಾಡಿದರು. ಆದರೂ ತನ್ನ ಮನೆಯ ಪಡಸಾಲೆಯಲ್ಲಿ ಕೂತು ಚಿಂತಾಮಗ್ನರಾದರು. ಎಳೆಂಟು ಬಾರಿ ಕಫವನ್ನು ಹೊರಗೆಡಹಿದರೂ ಅವರ ಮನಸ್ಸಲ್ಲಿ ಇದೀಗ ಅದ್ಯಾವುದೋ ಅವ್ಯಕ್ತ ಭಯ ಶುರುವಾಯಿತು. ಗಂಡನ ಮನದಿಂಗಿತವನ್ನು ಹೆಂಡತಿ ಗಂಗಾಲಕ್ಷ್ಮಿ ಚೆನ್ನಾಗಿ ಅರಿತುಕೊಂಡಿದ್ದರು. ಹಾಗಾಗಿ ಅವರು ಒಂದೆರಡು ಬಾರಿ ಗಂಡನ ಮನಸ್ಸಿಗೆ ಸಮಾಧಾನ ಹೇಳಲು ಮುಂದಾಗಿದ್ದಾರೆ.

''ಲಕ್ಕು ಸುರಿದಾಗ ಸಂಭವಿಸುವ ಸ್ಥಿತಿಯೇ ಲಕ್ಸುರಿ. 'ಲಕ್' ಎನ್ನುವುದು 'ಲಕ್ಷ್ಮಿ'ಯ ಧಾತು. ಆದುದರಿಂದ ಅದನ್ನು ಆಂಗ್ಲಪದವೆಂದು ಭಾವಿಸಬಾರದು'' ಎಂದು ಒಬ್ಬ ಮಹಾನುಭಾವ ತರ್ಕಿಸುತ್ತಿದ್ದುದನ್ನು ಕೇಳಿ ನಾನು ಬೆರಗಾದೆ.

ಆ ತರ್ಕದ ಸತ್ಯಾಸತ್ಯತೆಯನ್ನು ಚರ್ಚಿಸುವ ಉದ್ದೇಶ ನನಗಿಲ್ಲ. ನಮಗೆಲ್ಲಾ ಗೊತ್ತಿದ್ದಂತೆ ಅದು ನಮ್ಮ ಶಬ್ದ ಭಂಡಾರದಲ್ಲಿ ಸೇರಿಕೊಂಡಿದ್ದು ಆಂಗ್ಲ ಪದವಾಗಿ. ಅದರ ಅರ್ಥ ಭೋಗವಸ್ತು ಎಂದು. ಅತ್ಯಗತ್ಯವಲ್ಲದ ವಸ್ತು ಎನ್ನುವ ಅರ್ಥವೂ ಅದರಲ್ಲಿ ಸೇರಿಕೊಂಡಿದೆ. ದುಬಾರಿ ಎನ್ನುವ ಅರ್ಥವೂ ಸೇರಿಕೊಂಡಿದೆ.

ಹೀಗಾಗಿ ಈ ಹಿಂದೆ 'ಲಕ್ಸುರಿ' ಜನಪ್ರಿಯವಾಗಿರಲಿಲ್ಲ. ಸರಳ, ನಿರಾಡಂಬರ ಜೀವನಕ್ಕೆ ಒತ್ತುಕೊಡುತ್ತಿದ್ದ ನಾವು ಅದರಿಂದ ದೂರವಿರಲು ಪ್ರಯತ್ನಿಸುತ್ತಿದ್ದೆವು. ಜನಸಾಮಾನ್ಯರಿಂದ ಭಿನ್ನವಾದ, ಭೇದಭಾವ ಕಲ್ಪಿಸುವ, ಡೌಲು ಬೇಡ ಎನ್ನುತ್ತಿತ್ತು ನಮ್ಮ ಸಮಾಜ. ಭೋಗ ಹೆಚ್ಚಾದರೆ ರೋಗವೂ ಹೆಚ್ಚಾಗುತ್ತೆ ಎಂಬ ಭೀತಿಯೂ ಇತ್ತು. ಹಾಗಾಗಿ ಒಂದು ಕಾಲದಲ್ಲಿ ಮಿಕ್ಸಿ, ವಾಷಿಂಗ್ ಮೆಷಿನ್, ಗ್ಯಾಸ್ ಮುಂತಾದ ಸೌಲಭ್ಯದ ಸರಕು ನಮ್ಮ ಮಾರುಕಟ್ಟೆಯಲ್ಲಿ ತಳ ಊರಲು ಬಹಳ ಅವಸ್ಥೆಪಟ್ಟವು. ಒಂದು ಕಾಲದ 'ಲಕ್ಸುರಿ' ಇನ್ನೊಂದು ಕಾಲದ 'ನೆಸೆಸಿಟಿ' ಹೇಗಾಗುತ್ತದೆ ಎನ್ನುವುದನ್ನು ನಮ್ಮ ಕಣ್ಣ ಮುಂದೆಯೇ ನಾವು ನೋಡುತ್ತಿದ್ದೇವೆ.

'ಲಕ್ಸುರಿ'ಯನ್ನು ನಾವು ಈಗ ಹೀನವಾಗಿ ಕಾಣುತ್ತಿಲ್ಲ. ಅದಿಲ್ಲದಿದ್ದರೆ ಇತರರ ದೃಷ್ಟಿಯಲ್ಲಿ ನಾವೇ ಹೀನವಾಗುವ ಪ್ರಸಂಗ ಈಗ ಬಂದಿದೆ. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವು ಮುಡಿದುಕೊಳ್ಳಬೇಕಾಗಿದೆ. ಇದ್ದವರು ಕೂಡ ಏನೂ ಇಲ್ಲದವರ ಹಾಗಿದ್ದ ಕಾಲ ಹೋಗಿ, ಈಗ ಏನೂ ಇಲ್ಲದವನು ಎಲ್ಲಾ ಇದ್ದವನ ಹಾಗೆ ಮೆರೆಯುವ ಕಾಲ




# ಲಕ್ಸುರಿ

ಬಂದಿದೆ. ಆನೆಯನ್ನು ನೋಡಿ ಕಪ್ಪೆ ಉಬ್ಬುತ್ತಾ ಹೋದಂತೆ ನಾವು ಉಬ್ಬುತ್ತಾ ಹೋಗುತ್ತಿದ್ದೇವೆ. ಒಂದು ದಿನ ಅದು ಸ್ಫೋಟವಾಗಲೇಬೇಕು. ಅದಕ್ಕೆ ಇಂದಿನ ಉದಾರೀಕರಣ ನೀತಿ ಹಾಸಿಗೆ ಹಾಸುತ್ತಿದೆ !

ನೋಡಿ, ಇವತ್ತು ಸರ್ಕಾರಿ ಶಾಲೆಗೆ ಹೋಗುವವರಿಲ್ಲ, ಸರ್ಕಾರಿ ಆಸ್ಪತ್ರೆಗೆ ಸೇರುವವರಿಲ್ಲ, ಸರ್ಕಾರಿ ಬಸ್ಸು ಹತ್ತುವವರಿಲ್ಲ, ಬೇಡಿಕೆ ಕಡಿಮೆಯಾದಂತೆ ಅವುಗಳ ಗುಣಮಟ್ಟವೂ ಕುಸಿಯುತ್ತಿದೆ. ಬೇರೆ ಗತಿಯಿಲ್ಲದವನು ಅವುಗಳನ್ನು ಪ್ರಶ್ನಿಸುವಂತಿಲ್ಲ. ಇಲ್ಲದೆ ಕೆಡುವುದು ಒಂದು ಬಗೆ, ಇದ್ದೂ ಕೆಡುವುದು ಇನ್ನೊಂದು ಬಗೆ. ರಗಳೆಯೇ ಬೇಡ ಎಂದು ಈಗಿನ ಸರ್ಕಾರ ಎಲ್ಲಾ ಖಾಸಗೀ ಮಾಡಿ ತನ್ನ ಜವಾಬ್ದಾರಿಯನ್ನು ಕೊಡವಿಕೊಳ್ಳುವ ಹುನ್ನಾರದಲ್ಲಿದೆ. ಹಣ ವಿದ್ದವರು ಮಾತ್ರ ಬದುಕುವ ಕಾಲ ಬರುತ್ತಿದೆ. ಬದುಕಲೇ ಬೇಕು ಎನ್ನುವವರು ಹೇಗಾದರೂ ಹಣ ಸಂಪಾದಿಸಲೇಬೇಕು ಎಂಬ ಗುರಿ ಇಟ್ಟುಕೊಳ್ಳಬೇಕಾಗಿದೆ. 'ಲಕ್ಸುರಿ'ಯ 'ಸೈಡ್ ಇಫೆಕ್ಟ್' ಏನೆಂದರೆ ಲಂಚ, ಮೋಸ, ದಗಲ್‌ಬಾಜಿ.

ಲಕ್ಸುರಿಯಿಂದ ಉಂಟಾಗಿರುವ ಇನ್ನೊಂದು ಪರಿಣಾಮವೇನೆಂದರೆ ವ್ಯವಹಾರದಲ್ಲಿ ಚೌಕಾಶಿ ಕಡಿಮೆಯಾಗುತ್ತಿರುವುದು. ದೊಡ್ಡ ದೊಡ್ಡ ದರ್ಬಾರಿ ಅಂಗಡಿಗಳು, ಜಾಹೀರಾತುಗಳು, ಮುದ್ರಿಸಿದ್ದೇ ಬೆಲೆ. ಕೊಡು, ಕೊಳ್ಳು ಕಿರಿಕಿರಿ ಇಲ್ಲ. ಒಟ್ಟಿಗೆ ಕೊಳ್ಳಲು ಹಣವಿಲ್ಲ ಎಂದರೆ ಕಂತಲ್ಲಿ ಕೊಳ್ಳಬಹುದು. ಲಕ್ಸುರಿ ಬಂದದ್ದೇ ಬಂದದ್ದು, ಸಾಲವಿಲ್ಲದ ನಾಗರಿಕನೇ ಇಲ್ಲ ಎನ್ನುವಂತಾಗಿದೆ ! ಬಂದದ್ದರಲ್ಲಿ ಮುಗಿಸಿ ನಾಳೆಗೆ ಎಂದು ತೆಗೆದಿಡುವ ಜಾಣ್ಮೆ ಈಗ ಇಲ್ಲದಾಗಿದೆ. ''ನಾಳೆ ಯಾರು ಕಂಡಿದ್ದಾರೆ ? ಇವತ್ತು ಮಜಾ ಮಾಡುವವನೇ ಜಾಣ'' ಎನ್ನುವವರೇ ಬಹಳ ಮಂದಿ. ಪಾಷ್ ಹೋಟೇಲಿನಲ್ಲಿ ಪಾರ್ಟಿ. ಸಂಸಾರ ಸಮೇತ, ಬರ್ತ್‌ಡೇ, ಮ್ಯಾರೇಜ್ ಆನಿವರ್ಸರಿ - ಈ ಬಗೆಯ ಪಾಶ್ಚಾತ್ಯ ಆಡಂಬರಗಳು ಹೆಚ್ಚುತ್ತಿವೆ. ಹುಲಿ ಬಣ್ಣಕ್ಕೆ ನರಿಗಳು ಮೈಸುಟ್ಟುಕೊಳ್ಳುತ್ತಿವೆ. ಜನ ಮರುಳೋ, ಜಾತ್ರೆ ಮರುಳೊ ?

ನಮ್ಮ ರಾಜಕೀಯವನ್ನು ತೆಗೆದುಕೊಳ್ಳಿ. ನಿಚ್ಚಳ ಬಹುಮತವಿಲ್ಲದೆ ಮೇಲಿಂದ ಮೇಲೆ ಚುನಾವಣೆಗಳು. ಪ್ರತಿಯೊಂದು ಚುನಾವಣೆಗೂ ಕೋಟಿಗಟ್ಟಲೆ ಖರ್ಚು. ಪ್ರತಿಯೊಂದು ಸರ್ಕಾರ ಸ್ಥಾಪಿತವಾದಾಗಲೂ ತಲೆಗಿಂತ ಮುಂಡಾಸು ದೊಡ್ಡದೆನಿಸುವ ಮಂತ್ರಿ ಮಂಡಳ. ಇದೆಲ್ಲಾ ನೋಡಿದಾಗ ನಮ್ಮ ಈಗಿನ ಮಾದರಿಯ ಪ್ರಜಾಪ್ರಭುತ್ವವೇ ಒಂದು ಲಕ್ಸುರಿ ಎಂದು ನಿಮಗೆ ಅನಿಸುವುದಿಲ್ಲವೇ ?

ಈ ಬಗೆಯ 'ಲಕ್ ಸುರಿ'ದದ್ದು ಸಾಕಲ್ಲವೇ !?


ಹಾಲಾಡಿ ಮಾರುತಿರಾವ್
೩/೪. ಮ್ಯಾಳಸ ನಿವಾಸ. ಅಭ್ಬಿಗೆರೆ ಬಡಾವಣೆ,
ಚಿಕ್ಕಬಾಣಾವರ ರಸ್ತೆ, ಬೆಂಗಳೂರು - ೯೦


---

ಅದೊಂದು ದಿನ, ಶಿವರಾಮ್ ಯಾದವ್ ಎಲ್ಲರ ವಿರೋಧವನ್ನು ಲೆಕ್ಕಿಸದೆ ತನ್ನ ತಾಯ್ನಾಡಾದ ಪಾಕಿಸ್ತಾನಕ್ಕೆ ಹೋಗಿಬರಲು ನಿರ್ಧರಿಸಿದ್ದರು. 'ಇಲ್ಲ, ನಾನಲ್ಲಿ ಹೋಗಿ ಕೂರಲಾರೆ. ಏನಿದ್ದರೂ ನನ್ನವರನ್ನು ಒಮ್ಮೆ ನೋಡಿ ಬರುವೆ. ನಾನು ಹುಟ್ಟಿ ಬೆಳೆದ ಮನೆ ಈಗ ಹೇಗಿದೆ ? ನನ್ನ ಕುಟುಂಬದ ಸದಸ್ಯರು ಈಗ ಯಾರ್‍ಯಾರಿದ್ದಾರೆ. ಹೊಸಬರು ಯಾರ್‍ಯಾರು ಅಂತ ನೋಡುತ್ತೇನೆ. ಎಲ್ಲಾ ನೊಂದ ಜನರಿಗೆ ಸಾಂತ್ವನ ಹೇಳಿಬರುತ್ತೇನೆ. ಅದಕ್ಕೆ ನೀವು ಒಮ್ಮೆ ಅವಕಾಶ ಮಾಡಿಕೊಡಿ' ಎಂದು ಶಿವರಾಮ್ ಯಾದವ್ ಅವರು ಮತ್ತೊಮ್ಮೆ ವಿಜ್ಞಾಪಿಸಿದರು.

ಹಾಗೆ ಒಂದು ಸಣ್ಣ ಗಂಟು ಮೂಟೆಯೊಂದಿಗೆ ಅವರು ಆ ದಿನ ಹೊರಡಲು ಮುಂದಾದರು. 'ಇಲ್ಲ, ಅಪ್ಪ, ನೀವು ಅಲ್ಲಿಗೆ ಹೋಗುವುದು ನನಗೆ ಇಷ್ಟವಿಲ್ಲ. ಒಂದು ವೇಳೆ ನೀವು ಹೋಗುವುದಾದರೆ ನಾನು ಆತ್ಮಹತ್ಯೆ ಮಾಡಿಕೊಳ್ಳುವೆ' ಎಂದು ಮೂವತ್ತರ ಹರೆಯದ ಅವರ ಏಕೈಕ ಮಗ ಬಾಲಚಂದ್ರ ಸಿಟಿದು ನಿಂತು ಹೇಳಿದಾಗ ಶಿವರಾಮ್ ಯಾದವ್ ತಬ್ಬಿಬ್ಬಾಗಿದ್ದರು.

ಈವರೆಗೂ ಮಾತನಾಡದ ಮಗ ಇದೀಗ ಯಾಕೆ ಈ ರೀತಿ ಹೇಳಿದ ಎಂದು ಅವರಿಗೆ ಅರ್ಥವಾಗಲಿಲ್ಲ. ಆದರೂ ಮಗನನ್ನು ಸಮಾಧಾನ ಮಾಡಲು ನೋಡಿದರು. 'ಇಲ್ಲ ನಾನು ಹೋಗಲು ಸಮ್ಮತಿಸಲಾರೆ. ಹೋದರೆ ಆತ್ಮಹತ್ಯೆ ಮಾಡಿಕೊಳ್ಳುವೆ' ಎಂದು ಮತ್ತೊಮ್ಮೆ ಬೆದರಿಕೆ ಹಾಕಿದ. ಗಂಗಾಲಕ್ಷ್ಮಿ ಮಗನ ಈ ವರ್ತನೆಯ ವಿರುದ್ಧ ಅಸಮಾಧಾನ ಸೂಚಿಸಿದರೂ ಆತ ತಾಯಿಯ ಮಾತನ್ನು ಕೇಳುವ ಸ್ಥಿತಿಯಲ್ಲಿರಲಿಲ್ಲ.

ಶಿವರಾಮ್ ಯಾದವ್ ಮಗನ ಮನಸ್ಸು ತಣ್ಣಗಾಗಲಿ ಎಂದು ಬಗೆಯುತ್ತಾ ಅಲ್ಲೇ ಕುಳಿತುಬಿಟ್ಟರು. ಮಗ ತಂದೆಯ ನಿರ್ಧಾರದ ಬಗ್ಗೆ ಕಾಯುತ್ತಾ ಅಲ್ಲೇ ಕಾಲೂರಿದ. ಎರಡು ದಿನವಾದರೂ ಆ ಮನೆಯಲ್ಲಿ ಯಾವುದೇ ಫಲಿತಾಂಶ ಕಾಣಲಿಲ್ಲ.

ಬಾಲಚಂದ್ರ ಎದ್ದು ಹೊರಹೋದ. ಅವ ಹೋದ ಬೆನ್ನಿಗೆ ಶಿವರಾಮ್ ಯಾದವ್ ತನ್ನ ತವರೂರಿಗೆ ಹೊರಡಲು ಮುಂದಾದರು. ಹಾಗೇ ಅವರು ಮನೆ ಅಂಗಳಕ್ಕೆ ಕಾಲಿಟ್ಟಾಗ ಒಳಗಿನಿಂದ ಒಂದು ಧ್ವನಿ 'ನಿಲ್ಲಿ ನಾನೂ ಬರುತ್ತೇನೆ' ಎಂದಿತು ! ತಿರುಗಿ ನೋಡಿದಾಗ ಹೆಂಡತಿ ಗಂಗಾಲಕ್ಷ್ಮಿಯೂ ಅಂಗಳಕ್ಕಿಳಿದಿದ್ದರು. ರೈಲ್ವೆ ನಿಲ್ದಾಣದಲ್ಲಿ ನಿಂತು ತನ್ನ ತಂದೆತಾಯಿಯನ್ನು ಕಾಯುತ್ತಿದ್ದ ಬಾಲಚಂದ್ರ ಅಲ್ಲಿ ಅವರನ್ನು ಕಂಡಾಗಲೇ, 'ಅಪ್ಪ ನನ್ನನ್ನು ಕ್ಷಮಿಸು, ನಾನೂ ನಿನ್ನ ತಾಯ್ನಾಡನ್ನು ಒಮ್ಮೆ ನೋಡಿ ಬರುವೆ' ಎನ್ನುತ್ತಾ ರೈಲು ಹತ್ತಿದ.


ಹಂಝು ಮಲಾರ್
ಅರಸ್ಥಾನ-೫೭೪ ೧೪೨, ಅಂಚೆ : ಪಾವೂರು
ಮಂಗಳೂರು ತಾಲ್ಲೂಕು

# ಭೂಮಿ ದುಂಡಾಗಿದೆ



**ಚಿತ್ರಶೇಖರ ಕಂಠಿ**

ಅರೆರೆ, ಇದೇನು ಸೋಜಿಗ ?! ಕರೀ ಕೋಟು, ಖಾಕಿ ಬಟ್ಟೆಯವರು ಬಿಟ್ಟರೆ ನನ್ನಂಥ ಜನರೇ ಇಲ್ಲ. ಚನಾದವನೂ ಇಲ್ಲ, ಚಾಯ್‌ವಾಲಾ ಬಿಸ್ಲೇರಿಯವನೂ ಇಲ್ಲ. ಜನ ಏನಾದರು ? ಜನರೇ ಇಲ್ಲವೆಂದು ಈ ವ್ಯಾಪಾರಿ ಮಂದಿ ಎಲ್ಲಿ ಹೋದರು ? ಆ ತುದಿಯಿಂದ ಈ ತುದಿಯವರೆಗೆ ಬಿಕೋ ಅನ್ನುತ್ತಿದ್ದ ಪ್ಲಾಟ್‌ಫಾರ್ಮ್ ನೋಡಿ ದಂಗಾಗಿಹೋದ ಚಂಗ.

ಇದೇನಿದು 'ಚಂಗ' ವಿಚಿತ್ರವಾಗಿದೆ ಅಂತೀರಲ್ಲ ? ಈ ಊರ ಸೀಮೇಲಿ ಇದೇನು ಮಹಾ ವಿಚಿತ್ರ ಅಲ್ಲ ಬಿಡ್ರಿ. ಇಲ್ಲೆಲ್ಲ ರಸ್ತೆ ನುಂಗುವ ತಿಮಿಂಗಲುಗಳು, ಹುಲ್ಲಿನ ಸೂಡು ಅರಗಿಸಿಕೊಳ್ಳುವ ಅಸುರರು, ನೆತ್ತರದ ಮಡುವಿನಲ್ಲಿ ಮುಳುಗೇಳುವ ಪುಣ್ಯವಂತರು, ಯಾರ್‍ಯಾರಿಗೋ ಬೆತ್ತಲೆ ಮಾಡುವವರು ಮತ್ತೆ ಇನ್ಯಾರೋ ಬಟ್ಟೆ ತೊಡಿಸುವವರು ಎಲ್ಲರೂ ಇರುವ ಈ ನೆಲದಲ್ಲಿ ಚಂಗ ಅನ್ನುವ ಹೆಸರಿರುವುದೂ ಒಂದು ಸೋಜಿಗವೇ ? ಚಂಗ, ತಮ್ಮಣ್ಣಾಜೀಯವರ ಮನೆಯಲ್ಲಿ ಗುಮಾಸ್ತ. ಇವನು ಹುಟ್ಟಿದ ಇಪ್ಪತ್ತೊಂದನೇ ದಿನ ನಾಮಕರಣವಾಯಿತು. ಅಂದು ಮುತ್ತೈದೆಯರು ತೊಟ್ಟಿಲಿಗೆ ಸುತ್ತುವರೆದು ಹೇಲಗುಗ್ಗರಿ ಹೇಲಗುಗ್ಗರಿ ಕುರ್ರೇ ಕುರ್ರೇ..... ಉಂಬಳೇಶ ಉಂಬಳೇಶ ಕುರ್ರೇ ಅಂತ ಹೆಸರಿಟ್ಟರು. ಅಕ್ಷರ ಅರಿಯದ ನಾಲಿಗೆ ಹೊರಳಲು ಹಟ ಮಾಡಿದಾಗ ಇವನ ಹೆತ್ತವರು ಚಂದಪ್ಪ ಅಂತ ಕರೆಯಲು ಶುರು ಮಾಡಿದರು. ಒಂದಷ್ಟು ಓದು ಬರಹ ಕಲಿತು ತಮ್ಮಣ್ಣಾಜೀಯವರ ಮನೆಯಲ್ಲಿ ಗುಮಾಸ್ತನಾಗಿ ನೌಕರಿ ಪ್ರಾರಂಭಿಸಿದ. ತಮ್ಮಣ್ಣಾಜೀ ಮೀಟಿಂಗ್ ಹಾಲ್‌ನಲ್ಲಿ ಕುಳಿತು ಚಂದೂ ಅಂತ ಕರೆಯುವುದೇ ತಡ, ಒಂದು ಬಾಗಿಲಿನಿಂದ ಈ ಚಂದೂ ಇನ್ನೊಂದು ಬಾಗಿಲಿನಿಂದ ಇನ್ನೊಬ್ಬ ಚಂದ್ರೂ ಬಂದು ಪ್ರಶ್ನಾರ್ಥಕವಾಗಿ ನೋಡುತ್ತಿದ್ದರು. ಇಳಿ ವಯಸ್ಸಿನ ತಮ್ಮಣ್ಣಾಜೀಗೆ ಈ ದ್ವಿಪಾತ್ರ ಕಿರಿಕಿರಿಯೆನಿಸಿ, ಮೊದಲಿನಿಂದಲೇ ಕೆಲಸಕ್ಕಿದ್ದ ಹೋಲ್‌ಸೇಲ್ ವ್ಯವಹಾರದ ಮೇನೇಜರ್ ಚಂದ್ರಕಾಂತನ ಹೆಸರು ಹಾಗೇ ಉಳಿಸಿಕೊಂಡು, ಇನ್ನೂ ಪ್ರೊಬೇಶನರಿ ಹಂತದಲ್ಲಿದ್ದ ಈ ನಮ್ಮ ಚಂದು ಸನ್ ಆಫ್ ಗಳಂಗಪ್ಪನ ಹೆಸರನ್ನು ಶಾರ್ಟ್ ಮಾಡಿ ಚಂಗ ಅಂತ ಕರೆದರು. ಧನ, ಧಾನ್ಯ ನೀಡುವ ಧಣಿ ಏನಂದರೂ ಶಿರಸಾವಹಿಸಬೇಕಲ್ಲವೇ ? ನಮ್ಮ ಚಂಗನೂ ಚಿಂ ಪಿಟಕ್ ಅನ್ನದೇ ಧಣಿ ನೀಡಿದ ಚಂಗ ಅನ್ನುವ ಹೆಸರು ಉಳಿಸಿಕೊಂಡು ಸಾಗಿದುಬಿಟ್ಟ.

ಎಲ್ಲರೂ ಸಾಲಾಗಿ ನಿಂತರು, ಚಂಗನೂ. ಪಾಲಿಸುವವರಿಗೇ ಕಾನೂನು. ಉಲ್ಲಂಘಿಸುವವರಿಗೆ ಲಂಗರು ಹಾಕುವವರ್‍ಯಾರು ? ಅಡಿಯಿಂದ ಮುಡಿವರೆಗೆ ಒತ್ತೊತ್ತಿ ನೋಡಿದರು. ಕಣ್ಣುಗಳ ಇಬ್ಬಂದಾಗಿ ಮುಖ ಕೆಂಪೇರಿತು. ಬ್ಯಾಗು ಬ್ರೀಫ್‌ಕೇಸೂ ತಡಕಾಡಿ ಹೂಂ ನಡೆಯಿರಿ ಒಳಗೆ ಅಂದರು. ಎಲ್ಲರ ಮುಖದಲ್ಲೂ ಪ್ರಶ್ನಾರ್ಥಕ ಚಿಹ್ನೆ. ಇದೆಲ್ಲ ಏನು ? ಯಾಕೆ ? ಅನ್ನುವ ಅನುಮಾನದ ಪ್ರಶ್ನೆಗಳಿಗೆ ಉತ್ತರಿಸುವವರ್‍ಯಾರು ? ಎಲ್ಲವೂ ಎತ್ತಿಕೊಂಡು ಹೊರಗೆ ಬಂದ ಚಂಗ. ರಸ್ತೆಗಳು ಬಿಕೋ ಅನ್ನುತ್ತಿದ್ದವು. ಆಟೋಗಳಿಲ್ಲ, ಟ್ಯಾಕ್ಸಿಗಳಿಲ್ಲ. ಹೊಸ ಬಸ್ಸುಗಳು ಸಾಲಾಗಿ ನಿಂತಿದ್ದವು. ಮತ್ತೊಮ್ಮೆ ಸರತಿಯಲ್ಲಿ ನಿಂತು ಬಸ್ಸು ಹತ್ತಿದ.

ಖಾಲೀ ಜಾಗವೇ ಇಲ್ಲವೇನೋ ಅನ್ನುವಷ್ಟು ಗಿಜಿಗುಡುತ್ತಿದ್ದ ಮಂದಿ ಏನಾದರು ? ರಸ್ತೆ ಬದಿಗಳಲ್ಲಿ ನಿಂತು ಬೆವರಿಳಿಸಿಕೊಂಡು ಹೊಟ್ಟೆ ಹೊರೆಯುವ ಮನುಷ್ಯರು ಎಲ್ಲಿಗೆ ಹೋದರು ? ಹರಕು ಛತ್ರಿಯ ನೆರಳಲ್ಲಿ ಕೈ ಮಸಿ ಮಾಡಿಕೊಂಡು ಮೆಟ್ಟು ಹೊಲಿದು ಪಾಲಿಶ್ ಮಾಡುವ ಕರೀಮೈ ಹುಡುಗ ಏನಾದ ? ಕಣ್ಣ ಕವಾಟಿನೊಳಗೆ ತುಂಬಿದ್ದ ಒಂದೊಂದೇ ಚಿತ್ರಗಳು ಸುಳಿದು ಮರೆಯಾದವು. ಡಬ್ಬಾ ಅಂಗಡಿಗಳಿದ್ದ ರಸ್ತೆ ಬದಿಯಲ್ಲೀಗ ಬಣ್ಣದ ಕಾರಂಜಿ, ಹಸಿರು ಮತ್ತು ಹೂ ಕುಂಡಗಳು. ಎಷ್ಟೊಂದು ಸಿಂಗಾರ ಈ ಊರಿಗೆ ! ಮಂದಿಯೇ ಮರುಜೀವ ಪಡೆದು ಹೀಗಾದರೆ ! ಚಂಗನಲ್ಲಿ ಅತರ್ಕಿತ ಆಲೋಚನೆಗಳು.

ಬಸ್ಸು ನಿಂತಿತು, ಚಂಗ ಇಳಿದ. ಹೊಟ್ಟೆ ಚುರ್‌ಗುಡುತ್ತಿತ್ತು. ಹಿಂದೆ ಮುಂದೆ ಎಡಬಲ ನೋಡಿದ, ಉಂಹೂಂ ಎಲ್ಲೂ ತಿಂಡಿ ಅಡುಗೆಯ ವಾಸನೆಯೇ ಇಲ್ಲ. ಕಣ್ಣಿಗೆ ನಿಲುಕುವಷ್ಟು ದೂರದಲ್ಲಿ ಚಕ್ರಾಧಿಪತಿಯ ಅರಮನೆಯಂಥ ಬಹುಮಹಡಿಯ ಭವ್ಯ ಕಟ್ಟಡ. ಇದ್ದಷ್ಟು ಕಸುವೂ ಕಾಲಿಗೆ ವರ್ಗಾಯಿಸಿ ನಾಲ್ಕು ಹೆಜ್ಜೆ ನಡೆದ. ತಮ್ಮ ಧಣಿಯ ಹಿರೀಮಗನಂತೆ ಗರಿಗರಿ ಸಫಾರಿ ಬಟ್ಟೆ ಉಟ್ಟಿದ್ದ ತರುಣನೊಬ್ಬ ನಡುಬಾಗಿಸಿ ರಸ್ತೆ ಬದಿಯ ಕಾಗದ ಚೂರು ಆರಿಸುವುದು ಕಂಡು ತಡೆಯಲಾಗದೇ ಕಿಸಕ್ಕಂತ ನಕ್ಕುಬಿಟ್ಟ.

''ಯಾಕಪ್ಪ ಏನ್ ಕಂಡು ನಕ್ಕೆ ?'' ಕಾಗದ ಚೂರು ತುಂಬಿದ್ದ ಮುಷ್ಟಿ ಬಿಗಿಮಾಡಿ ಎದೆಸೆಟೆಸಿ ತರುಣ ಕೇಳಿದ.

''ಅಲ್ಲಪಾ ತಮ್ಮ, ಈ ಊರಿಗಿ ಏನಾಯ್ತು ? ಇಲ್ಲಿನ ಮಂದಿಯೆಲ್ಲ ಎಲ್ಲಿಗಿ ಹೋದರು ?'' ನಗೆ ನುಂಗಿ ಮಾತು ಹೊರಡಿಸಿದ.

''ಏ... ಯಾ ಊರೋ ನಿಂದು ? ನೋಡಿದರೆ ಜಂಟಲ್‌ಮನ್ ಥರಾ ಕಾಣಿಸ್ತಿ, ತಲೆ ತುಂಬ ಸೆಗಣಿ ತುಂಬಕೊಂಡ ಹಾಗೆ ಮಾತಾಡ್ತಿ. ಊರ ತುಂಬಾ ಢಣಾ ಡಂಗೂರ ಆಗಿರೋ ಸುದ್ದಿ ನಿನಗೆ ಗೊತ್ತಿಲ್ಲ ? ನಿನ್ನಂಥವರೇ ಹೀಗಿದ್ದಿರೆಂದ ಮೇಲೆ ಇನ್ನು ನಿಮ್ಮ ಊರಿನ ಉದ್ಧಾರದ ಮಾತೆಲ್ಲಿ ಬಂತು ?'' ಬಾಗಿ ಮತ್ತೆರಡು ಕಾಗದದ ಚೂರು ಎತ್ತಿಕೊಂಡು ತರುಣ ಕೇಳಿದ.

''ಹೌದಪ್ಪ ತಮ್ಮ, ನಾ ಜಂಟಲ್‌ಮನ್ ಥರಾ ಕಾಣ್ತಿನಿಲ್ಲೋ ಗೊತ್ತಿಲ್ಲ. ನೀ ಅಂತೂ ಸೂಟು, ಬೂಟು ಹಾಕಿಕೊಂಡು ಥೇಟ್ ಜಂಟಲ್‌ಮನ್ನೇ ಆಗಿದ್ದಿ. ನಿನ್ನಂಥವನೇ ಇಲ್ಲಿ ಬಗ್ಗಿ ಬಗ್ಗಿ ಕಸ ಆರಸ್ತಿದ್ದಿ ಅಂದಾಗ ನನ್ನ ತಿಳುವಳಿಕಿದ್ದೇನು ಮಹಾ ಅಲ್ಲ ಬಿಡು. ನಾನೇನು ಭಾಳ ಓದಿದಾಂವಲ್ಲ. ಒಂದಷ್ಟು ಓದೋದಕ್ಕ, ನಾಲ್ಕಕ್ಷರ ಬರಿಯೋದಕ್ಕ ಕಲ್ತಾಂವ. ಸುದ್ದಿ ಬೆನ್ನು ಹತ್ತಿ ಹೋದರ ನಮ್ಮಂಥ ಗರೀಬರ ಹೊಟ್ಟೆಗೆ ತಣ್ಣೀರಿನ ಬಟ್ಟೇನೇ ಗತಿ. ನೀನು ಎಲ್ಲಾ ತಿಳಿದಾಂವ. ನೀನೇ ಈ ಊರಿನ ಸುದ್ದಿ ಏನಂತ ಹೇಳು, ನಾನೂ ಕೇಳ್ತೀನಿ. ಈ ಊರ ಮಣ್ಣು ತುಳಿದಾಗಿನಿಂದ ಮಾತಾಡಿದಾಂವ ಅಂದ್ರ ನೀನೇ ನೋಡು. ನನಗ ಇದು ಮೊದಲಿನ ಊರೇ ಹೌದಲ್ಲೋ ಅನ್ನುವಷ್ಟು ಅನುಮಾನ ಬರ್ತಿದೆ. ಮತ್ತ ಇನ್ನೊಂದು ಮಾತು. ನೋಡಲಿಕ ಆಫೀಸರ್ ಕಂಡಂಗ ಕಾಣೋ ನೀನು ಈ ಕಸ ಆರಿಸೋ ಕೆಲಸ ಮಾಡ್ತಿದ್ದಿ ಅಂದರ ನನ್ನ ಕಣ್ಣುಗಳಂತೂ ನಂಬುತ್ತಿಲ್ಲ. ಇದರ ಹಕೀಕತ್ತನೂ ಬಿಡಿಸಿದ್ರ ಛಲೋ ನೋಡು.'' ಕುತೂಹಲದಿಂದ ಕೇಳಿದ ಚಂಗ. ಭರ್ರನೆ ಮತ್ತೆರಡು ಬಸ್ಸು ಹೋದವು. ಹತ್ತಾರು ಜನ ಇಳಿದು ಅಡ್ಡರಸ್ತೆಗಳಲ್ಲಿ ನಡೆದರು. ಇನ್ನೊಂದು ಗೂಡ್ಸ್ ವ್ಯಾನ್ ಬಂದು ನಿಂತಿತು. ಅದರಿಂದಿಳಿದ ನಾಲ್ಕು ಜನ ದೊಡ್ಡ ಬಲೂನಿನಂತೆ ಕಾಣುತ್ತಿದ್ದ ರಬ್ಬರ್ ಕಾರಂಜಿ ಇಳಿಸಿ ರಸ್ತೆ ಬದಿ ಜೋಡಿಸಿದರು. ಪಕ್ಕದ ಪಬ್ಲಿಕ್ ಗಾರ್ಡನ್‌ನ ನಲ್ಲಿ ಪೈಪಿಗೆ ಉದ್ದನೆಯ ಈ ಪೈಪು ಕನೆಕ್ಟ್ ಮಾಡಿದ ಒಬ್ಬ. ಬಿಸಿಲಿಗೆ ಬೆಳ್ಳಿಯ ಚೂರುಗಳಂತೆ ನೀರಿನ ಕಾರಂಜಿ ಚಿಮ್ಮಿತು. ಇದೆಲ್ಲ ವಿಸ್ಮಯದಿಂದ ನೋಡಿದ ಚಂಗ, ಕತ್ತು ಹೊರಳಿಸಿದ. ಅಷ್ಟು ದೂರದಲ್ಲಿದ್ದ ಕಸದ ತೊಟ್ಟಿಗೆ ಮುಷ್ಟಿಯ ಚೂರು ಸುರಿದು ಬಂದ ತರುಣ.

''ನೋಡಪ... ಹುಲಿ ಬಣ್ಣ ಬಳಿದುಕೊಂಡ ತೋಳದ ಕತಿ ಗೊತ್ತಿರಬೇಕಲ್ಲ. ನಂದೂ ಅದೇ ನಮೂನಿ ಕಥೆ. ಜಿಂದಗಿಯೊಳಗ ಇಂಥಾ ಸೂಟು ಹಾಕ್ಕೊಳ್ಳೋ ಅವಕಾಶ

*ಅತಿಥಿಗಳು ನಮ್ಮ ಮೇಲೆ ಎರಗಿಕೊಳ್ಳುವುದು ದೇಶಕ್ಕೆ ಹೊಸ ಅನುಭವವೇನೂ ಅಲ್ಲ. ಒಬ್ಬ ಅಧ್ಯಕ್ಷ ಬಂದು ರಾಜಾಸ್ತಾನದ ಹಳ್ಳಿಗೆ ಭೇಟಿ ನೀಡುತ್ತಾನೆ. ಇನ್ನೊಬ್ಬ ಅಧ್ಯಕ್ಷ ಅಜ್ಮೀರಕ್ಕೆ ಹೋಗದೆ ಹಿಂದಿರುಗುತ್ತಾನೆ. ಲಕ್ಷಗಟ್ಟಲೆ ಮೋರಿಗಳಲ್ಲಿ ಹರಿದುಹೋಗುತ್ತದೆ ! ಇತ್ತೀಚಿನ ಸುದ್ದಿ ಕೇಳಿದ್ದೀರಲ್ಲವೇ ? ಅಮೆರಿಕಾದ ಮಾಜಿ ಅಧ್ಯಕ್ಷ ನ್ಯೂಯಾರ್ಕಿನ ಹಾರ್ಲೆಮ್ ಎಂಬ ಬಡವರ ಬಡಾವಣೆಯಲ್ಲಿ ಮನೆ – ಕಚೇರಿ ತೆಗೆದಿದ್ದಾನಂತೆ ! ಕ್ಯೂಬಾದ ಅಧ್ಯಕ್ಷ ಫಿಡೆಲ್ ಕ್ಯಾಸ್ಟ್ರೋ ಮಾತ್ರವೇ ಏಕೆ ಹಾರ್ಲೆಮ್‌ನಲ್ಲಿ ಆತಿಥ್ಯ ಸ್ವೀಕರಿಸಿ ಜನಮನ ಗೆಲ್ಲಬೇಕು ಎಂದೆನ್ನಿಸಿರಬೇಕು ಆತನಿಗೆ !*

ಮೊದಲನೆ ಸಾರಿ ನನಗ ಸಿಕ್ಕದ, ಅದೂ ಬಿಟ್ಟಿ. ನಾನು ಕ್ಲಾಸ್ ಫೋರ್ತ್ ನೌಕರ. ತಳ್ಳೋ ಗಾಡಿ ಎಳದು ಕಸ ತುಂಬಿ ಸಾಗಿಸೋದೆ ನನ್ನ ಕೆಲಸ. ದೊಡ್ಡೂರಿನ ಹಿರಿಯಣ್ಣ ಅವರು ಈ ಊರಿಗಿ ಬಂದ್ರಲ್ಲ. ಅದಕ್ಕ ನಮ್ಮ ಸಾಹೇಬ ನಮಗೆಲ್ಲ ಇಂಥಾ ಸೂಟು ಹೊಲಿಸಿ ಈ ಕೆಲಸ ಮಾಡದಕ್ಕ ಹಚ್ಚಿದರು. ಹರಕ ಬಟ್ಟಿ ಉಟಗೊಂಡು ನಾವೆಲ್ಲ ಕಸ ಬಳಿಯೋದು ಹಿರಿಯಣ್ಣ ಅವರು ನೋಡಿದರ ನಮ್ಮೂರ ಮರ್ಯಾದಿ ಹೋದಿತಂತ ನಮ್ಮನ್ನೆಲ್ಲ ಹೀಗಿರದಕ್ಕ ಹೇಳಿದ್ರು,'' ಅಂದ ತರುಣ ಕಂಬದ ಮರೆಗೆ ಮುಖ ಮಾಡಿ ತುಟಿಗೊಂದು ಬೀಡಿ ಇಟ್ಟು ಸರಸರನೆ ನಾಲ್ಕು ದಮ್ಮು ಎಳೆದ, ಕಳ್ಳನಂತೆ. ಬೆವರು ಸುರಿಸಿ ದುಡಿಯೋ ಜನ ಹ್ಯಾಂಗಿದ್ದರೇನು, ನಿಯತ್ತೊಂದಿದ್ದರಾಯ್ತು. ಅದೂ ಬಿಟ್ಟು ಈ ಸೂಟು, ಬೂಟು ಅನ್ನಿಸಿ, ''ಅಲ್ಲ ತಮ್ಮ, ಈ ಹಿರಿಯಣ್ಣ ಅಂದೆಲ್ಲ, ಅವರೂರಾಗ ನಮ್ಮಂಥ ಮಂದಿ ಇಲ್ಲಂತೇನು ? ಇಲ್ಲಂತೇ ಇಟ್ಕೋ. ಹಿರಿಯಣ್ಣ ಬರ್ತಾನಂತ ಈ ಊರು, ಕೇರಿ ಮಂದಿಗಿ ಮೂಲಿಗೆ ಒತ್ತಿದರ ಹ್ಯಾಂಗ ? ಡಬ್ಬಾ ಅಂಗಡಿ ಇಟ್ಟು, ದುಡದು ಹೊಟ್ಟಿ ತುಂಬಸ್ಕೊಳ್ಳೋ ಜನ ಏನು ಮಣ್ಣು ತಿನ್ನಬೇಕಾ ? ನಮ್ಮೂರ ಮಂದಿ ಕುಡಿಯೋ ನೀರಿಗಿ ಹರದಾರಿ ಹಾದಿ ನಡೀತಾರ, ಇಲ್ಲಿ ನೋಡಿದರ ಹಾದಿ ಬೀದಿಗೆಲ್ಲ ನೀರಿನ ಕಾರಂಜಿ ಚಿಮ್ಮುಸ್ತಾರ. ಇಲ್ಲಿ ಹಸಿರು ಗಿಡದಾಗ ಅರಳಿದ ಹೂವಿನ ಕುಂಡ ಸಾಲಾಗಿ ಇಟ್ಟಾರ, ಅಲ್ಲಿ ಮಳಿ, ನೀರಿಲ್ಲದೇ ಬೆಳಿ ಬಾಡಿ ಬಕ್‌ಬಕಾ ಅಂತಾವ. ಗಂಟಲೊಣಗಿ ಹೊಟ್ಟಿ ತಾಳ ಹಾಕ್ತದಂತ ಹುಡುಕಿದ್ರ ಒಂದೂ ಹೋಟೆಲ್ ಇಲ್ಲ. ಆ ಹಿರಿಯಣ್ಣಗ ಹೊಟ್ಟಿ ಹಸಿವು ಇದ್ದಂಗ ಇಲ್ಲ'' ಅಂತ ಕೇಳಿಯೇಬಿಟ್ಟ ಚಂಗ.

''ಯಾಕಿಲ್ಲಪ್ಪ...., ಅಲ್ಲಿ ಕಾಣಿಸ್ತದಲ್ಲ, ಆ ಸ್ಟಾರ್ ಹೋಟೆಲ್, ಅಲ್ಲಿ ಈವತ್ತು ಹಿರಿಯಣ್ಣಗ ಊಟ. ಅದಕ್ಕೇ ಈ ಬೀದಿ ಬಂದ್ ಮಾಡಿಬಿಟ್ಟಾರ. ದೊಡ್ಡೂರಿನ ಹಿರಿಯಣ್ಣ ಅಂದ್ರ ನನ್ನ ನಿನ್ನಂಗ ಸಾದಾ ಮನುಷ್ಯ ಅಲ್ಲ. ಅವನ ದೇಖ್‌ರೇಖಿಗೇ ಅಂತ ಅವರೂರಿಂದ ಎರಡು ಸಾವಿರ ಮಂದಿ ಬಂದಾರ. ಅವನ ಊಟಕ್ಕ ಬೇಕಾಗೋ ಅಡುಗಿ ಸಾಮಾನು, ಅಡುಗೆ ಮಾಡೋರು, ಅಷ್ಟೇ ಯಾಕ ಕುಡಿಯದಕ್ಕ ನೀರನೂ ಅವರೂರಿಂದೇ ತಂದಾರ. ಇನ್ನೊಂದು ಸುದ್ದಿ ಹೇಳಬೇಕಂದ್ರ, ನಮ್ಮೂರಿನ ಕತ್ತಲು ಕಂಡ್ರ ಹಿರಿಯಣ್ಣಗ ಭಾಳ ಭಯ ಇರಬೇಕು. ಅದಕ್ಕಂತ ಬೆಳಕು ಮಾಡೋ ಜನರೇಟರನೂ ಅವರೇ ತಂದುಬಿಟ್ಟಾರ. ಓಡಾಡದಕ್ಕ ದೊಡ್ಡ ಕಾರನೂ ಅಲ್ಲಿಂದೇ ಬಂದದ'' ತರುಣ ಇನ್ನೂ ಪಟ್ಟಿ ಹೇಳುತ್ತಲೇ ಇದ್ದ. ನಡುವೆ ಮಾತಾಡಿದ ಚಂಗ :

''ಮತ್ತ ರೋಡು, ಗಾಳೀನೂ ಅಲ್ಲಿಂದೇ ತಂದಿಲ್ಲೇನು ?''

''ಹೂಂ.... ಅವನ್ನೂ ತರ್ತಿದ್ದರೇನೊ. ಆದರ ಹಿರಿಯಣ್ಣ ಈ ನೆಲದ ಮೇಲೆ ನಡಿಯೋದಕ್ಕಿಂತ ಗಾಳಿಯೊಳಗ ಹಾರಾಡೋದೇ ಹೆಚ್ಚು ನೋಡು, ಅದಕ್ಕ ಅವನ್ನ ಬಿಟ್ಟಿರಬೇಕು'' ಅಂದ ತರುಣ ಮುಂದುವರೆದು ''ಅಂದ್ಹಾಂಗ ಹೊಟ್ಟೆ ಹಸಿವು, ಹೋಟೆಲ್ಲು ಅಂದೆಲ್ಲ ನನ್ನ ನಿನ್ನಂಥವರ ಹಸಿಪಿಗಿ ಇಲ್ಲಿ ಮರಗೋರು ಯಾರಿಲ್ಲ, ಆ ಹೋಟೆಲ್‌ನೊಳಗ ಗಾಳೀನೂ ಪರ್ಮಿಶನ್ ಪಡದೇ ಹೋಗಬೇಕು. ಅಂದಾಗ ನಿನಗ ಬಿಟ್ಟಾರೇನು ?!



ನನ್ನೊಂದಿಗಿ ಬಾ, ನಾ ಮನಿಯಿಂದ ತಂದಿದ್ದರೊಳಗ ಹಂಚಿಕೊಂಡು ತಿಂದರಾಯ್ತು'' ಅಂದ.

''ಮತ್ತ ನಿನಗ ಅರ್ಧ ಹೊಟ್ಟಿ ಆಗದಿಲ್ಲೇನು ತಮ್ಮ ?'' ಚಂಗ ತನ್ನ ಹೊಟ್ಟೆ ಅದುಮಿಕೊಂಡು ಕೇಳಿದ.

''ಇಂಥಾ ದೊಡ್ಡ ಊರಾಗ, ಅರ್ಧ ಹೊಟ್ಟೀಲಿ ದಿನಗಳಿಯೋರು ಎಷ್ಟು ಮಂದಿ ಇಲ್ಲಂತಿ. ಈವತ್ತು ಅಂಥವರ ಗುಂಪಿಗಿ ನಾವಿಬ್ಬರೂ ಸೇರಿದರಾಯ್ತು. ಈಗೊಂದು ವಾರದಿಂದ ಇಲ್ಲೆಲ್ಲ ಪಲ್ಲಕ್ಕಿ ಒಳಗ ಮೆರಿಯುವವ ಒಬ್ಬ, ಹೊತ್ತೋರು ಹಲವರು, ನೋಡೋರು ಲಕ್ಷಲಕ್ಷ ಜನ.'' ಹೀಗಂದ ತರುಣನ ಮುಖವೂ ಈಗ ಬಾಡಿದಂತಿತ್ತು.

''ಅಲ್ಲ ಈ ಊರಿಗಿ ಎಷ್ಟೊಂದು ಮಂದಿ ಬರ್ತಾರ ಹೋಗ್ತಾರ. ಯಾರಿಗೂ ಇಲ್ಲದ್ದು ಈ ಹಿರಿಯಣ್ಣಗ ಯಾಕಂತ. ನಮ್ಮೂರಿಗೆ ಬಂದಾನಂದ ಮ್ಯಾಲ ನಮ್ಮಂಗ ಇದ್ದು ಹೋಗ್ಬೇಕಪ. ನೆಂಟನಂಗ ಬಂದು ಮಣಿ ಹಾಕಿ, ಅಂದ್ರ ಹ್ಯಾಂಗ ?'' ಬೇಸರದಿಂದ ನುಡಿದ ಚಂಗ.

''ನೀ ಅಂದ ಮಾತು ನಿಜ. ಬೀಗ ಅಲ್ಲದೇ ಇದ್ರೂ, ಹಿರಿಯಣ್ಣ ಈ ಊರಿನ ಭಾಗಾದಿ. ನಾ ಇನ್ನೂ ಹುಟ್ಟಿದ್ದಿಲ್ಲ. ಆಗಿನಿಂದ ಇಲ್ಲೀತನ ಈ ಊರಿಗಿ ಹಿರಿಯಣ್ಣನ ಊರಿಂದ ಯಾರೂ ಬಂದಿರಲಿಲ್ಲಂತ. ಅಪರೂಪಕ್ಕ ಬಂದಾನಂದ ಮ್ಯಾಲ ಮಣೀನೂ ಹಾಕ್ಬೇಕು, ಮಾರೀನೂ ತೊಳೀಬೇಕು. ಮೊದಲೇ ಹಿರಿಯಣ್ಣ, ಹೆಚ್ಚು ಕಡಿಮಿ ಆಗಿ ಮನಸ್ಸು ಕೆಡಸ್ಕೊಂಡನಂದರ ಕೆಲಸ ಕೆಟ್ಟು ಹೋಗ್ತದ. ಅದೇನೊ ಜನ ಮರಳೋ ಜಾತ್ರೆ ಮರಳೋ ಅಂತಾರಲ್ಲ ಹಾಗಾಗಿಬಿಟ್ಟದ. ಹಿರಿಯಣ್ಣ ಮಾತಾಡ್ತಾನಂದ್ರ ಮುತ್ತು ಉದುರ್ತಾವೇನೋ ಅನ್ನೊವಂಗ ನಾವೆಲ್ಲ ಕಣ್ಣ ಕಣ್ಣು ಬಿಟ್ಟು ನೋಡಂಗ ಆಗಿಬಿಟ್ಟದ. ರತ್ನಗಂಬಳಿ ಹಾಸಿ ಬಹುಪರಾಕ್ ಹೇಳುವುದರೊಳಗೆ ಯಾವತ್ತೂ ನಾವೆಲ್ಲ ಮುಂದಲ್ಲೇನು ? ಅಪರೂಪಕ್ಕ ಊರಿಗಿ ಬಂದ ಹಿರಿಯಣ್ಣ ಏನಾದರೂ ತಂದಿದ್ದಾನು. ನಮಗನೂ ಹಿಡಿ ಕೈಮುಚ್ಚಿ ಕೊಟ್ಟಾನು ಅನ್ನೋ ಇರಾದೆಯೊಳಗೇ ನಾವು ಇದ್ದೀವಿ. ಅಂವ

# ಕೇಶಾಲಂಕಾರ ಪ್ರಸಂಗ

ಸತ್ಯವತಿ

**ಚಿ**ಪ್ಪಿನೊಳಗೆ ಅಡಗಿರುವ ಮೃದ್ವಂಗಿಗಳಂತೆ ಸದಾ ಪುಸ್ತಕದೊಳಗೆ ಹುದುಗಿರುವ ಪುಸ್ತಕ ಪ್ರಿಯ ಪತಿ ಮಹಾಶಯರು ಅಂದೇಕೋ ಪುಸ್ತಕದೊಳಗಿಂದ ತಲೆ ಎತ್ತಿ ನನ್ನ ಮಸ್ತಕವನ್ನು ಕಂಡುಬಿಟ್ಟರು !

''ಅಲ್ಲಾ, ಸಿನೇಮಾ ಸುಂದರಿಯರ, ಲೋಕ-ತ್ರಿಲೋಕ ಸುಂದರಿಯರ ಚಿತ್ರಪಟಗಳನ್ನು ನೀನು ನೋಡಿಲ್ಲವೆ ? ಅಥವಾ ಈ ಸುಂದರ ಮಂಗಳೂರು ನಗರದ ಕಾಲೇಜು ಸುಂದರಿಯರನ್ನು ಕಂಡಿಲ್ಲವೆ ? ಅವರಂತೆ ನಿನ್ನ ಕೇಶವನ್ನು ಶೃಂಗರಿಸಿಕೊಳ್ಳುವುದು ಬಿಟ್ಟು ಇದೆಂಥಾ ಅಲಂಕಾರ ? ಕೇಶವಿನ್ಯಾಸ ವ್ಯಕ್ತಿತ್ವದ ಕಳೆಯನ್ನು ಹೆಚ್ಚಿಸುವಲ್ಲಿ ವಿಶೇಷ ಕಸರತ್ತು ನಡೆಸುತ್ತದೆಂದು ನಿನಗೆ ಗೊತ್ತೇ ಇಲ್ಲವೆ ? ಈ ಹೈಟೆಕ್ ಯುಗದಲ್ಲಿ ಓಬೀರಾಯನ ಕಾಲದ ಮಡಿಕೆಯಂತೆ ಇದೆಯಲ್ಲಾ ನಿನ್ನ ಮಂಡೆ ?'' ಎಂದು ಹಲುಬುತ್ತಾ ಗುಡುಗಿದರು.

ಪುಸ್ತಕದ ಅಕ್ಷರಗಳನ್ನು ಬಿಟ್ಟರೆ ಬೇರೇನನ್ನೂ ಗಮನಿಸಿ ನೋಡದ ಇವರಿಗೆ ನನ್ನ ತಲೆ ಹೇಗೆ ಕಂಡಿತು ? ಬಹುಶಃ ಅಲ್ಲಿಯ 'ತಲೆಬರಹ' ಅಥವಾ 'ಹಣೆಬರಹ' ಕಂಡಿರಬಹುದೆ ? ಅದೇ ಆಗಿರಬೇಕು; ಇಲ್ಲದಿದ್ದರೆ ನೋಡುವ ಜಾತಿಯಾ ಇವರು ? ನಮ್ಮ ಮದುವೆಗೆ ಮೊದಲು ಇವರು ನನ್ನನ್ನು 'ನೋಡಲು' ದಿಢೀರ್ ಎಂದು ತಿಳಿಸದೇ ಬಂದಾಗ ಯಾವುದೋ ಕುತೂಹಲಕಾರಿ ಕತೆಯನ್ನು ಓದುತ್ತಿದ್ದ ನಾನು ಅದರೊಂದಿಗೇ ಇವರನ್ನು ಎದುರುಗೊಂಡಿದ್ದೆ. ನನ್ನ ಮುಖಕ್ಕಿಂತಲೂ ನಾನು ಓದುತ್ತಿದ್ದ ಪುಸ್ತಕವನ್ನು ನೋಡಿಯೇ ಸಂತಸಗೊಂಡ ಇವರು ನನ್ನನ್ನು ಒಪ್ಪಿಬಿಟ್ಟಿದ್ದರೆಂದು ಮದುವೆಯಾದ ನಂತರ ನನಗೆ ತಿಳಿಯಿತು.

ಅಂಥಾ ಇವರು ಇಂದು ನನ್ನ ಕೇಶಸೌಂದರ್ಯವನ್ನು ವೀಕ್ಷಿಸುವುದೆಂದರೇನು ? ಅದರ ಬಗ್ಗೆ ಯದ್ವಾತದ್ವಾ ತನ್ನ ಅನಿಸಿಕೆಗಳನ್ನು ಹರಿಯಬಿಡುವುದೆಂದರೇನು ? ನನಗೇನೂ ಅರ್ಥವಾಗಲಿಲ್ಲ. ಕಣ್ಣುಕಣ್ಣು ಬಿಟ್ಟೆ.

''ಏನು ಪಿಳಿ ಪಿಳಿ ನೋಡ್ತಿ ? ನಿನ್ನನ್ನೇ ಕೇಳಿದ್ದು. ಮೊದಲೇ ಮಂಗ ಮುಖ, ಆನೆ ಕಿವಿ. ಅದರ ಮೇಲೆ ಊರಿನ ಎಣ್ಣೆಯನ್ನೆಲ್ಲಾ ಸುರಿದುಕೊಂಡು ಅಂಟಿ ಬಾಚಿದ ತಲೆ ! ಥೇಟ್ ಮಣ್ಣಿನ ಮಡಿಕೆ ತರಾ ಕಾಣಿಸ್ತಿ. ಇನ್ನೂ ಸರಿಯಾಗಿ ಹೇಳಬೇಕೆಂದರೆ ಹೊಸದಾಗಿ ಕಟ್ಟೋ ಕಟ್ಟಡಗಳಿಗೆ ಕಟ್ಟಿರುತ್ತಾರಲ್ಲಾ ದೃಷ್ಟಿಗೊಂಬೆ, ಆ ಗೊಂಬೆಯ ವಿಚಿತ್ರ ಮುಖದ ಹಾಗಿದೆ ನಿನ್ನ ಅಲಂಕಾರ.''

ಹೀಗೆ ಅವ್ಯಾಹತವಾಗಿ ಇವರು ಏನೇನೋ ಹರಟುವುದನ್ನು ಕೇಳಿ, 'ಇವರಿಗೆ ಪಿತ್ತ ಕೈಕೊಟ್ಟಿತೆ ? ಅಥವಾ ಓದಿ ಓದಿ ಮರುಳಾಗಿ ತಲೆ ಕೆಟ್ಟೇಹೋಯಿತೆ ? ಇಲ್ಲದಿದ್ದರೆ ಇವರಿಗೆ ಎಂದೂ ಇರದಿದ್ದ ಸೌಂದರ್ಯ ಪ್ರಜ್ಞೆ ಇಂದು ಎಲ್ಲಿಂದ ಆವಿರ್ಭವಿಸಿತು ?' ಮುಂತಾದ ಪ್ರಶ್ನೆಗಳು ಏಕಕಾಲದಲ್ಲಿ ಉದ್ಭವಿಸಿ ನನ್ನನ್ನು ಚಿಂತೆಯ ಕೂಪಕ್ಕೆ ತಳ್ಳಿದವು.

ಪ್ರಾಚೀನ ಸಂಸ್ಕೃತಿಯ ಸಾಕಾರ ಮೂರ್ತಿ ಇವರಮ್ಮ-ಅರ್ಥಾತ್ ನನ್ನತ್ತೆ. ಆದ್ದರಿಂದ ಮದುವೆಯಾಗಿ ಬಂದಾಗಿನಿಂದ ನನ್ನ ತಲೆಗೆ ಮಣಗಟ್ಟಲೆ ಎಣ್ಣೆ ಸುರಿದು, ತೀಡಿ ತೀಡಿ ಬಾಚಿ, ಕೂದಲ ತುದಿಯವರೆಗೂ ಜಡೆ ಹೆಣೆದು, ಅದನ್ನೊಂದು ಸಪೂರ ಬಾಳೆಹಗ್ಗದಲ್ಲಿ ಕಟ್ಟಿ ಸಿಂಬಿ ಸುತ್ತಿ, ಆ ಗಂಟಿಗೆ ಹೇರ್ ಪಿನ್ ಚುಚ್ಚಿ ಭದ್ರಮಾಡುತ್ತಿದ್ದುದು ಅವರೇ. ಹಾಗಾಗಿ ನನ್ನ ಕೇಶಸಂರಕ್ಷಣೆ ಹಾಗೂ

---

*೧೯ನೇ ಪುಟದಿಂದ*

ಗುಮ್ಮನ ಗುಸಕ. ಅದೇನು ಮಾತಾಡ್ತಾನೋ ಏನ್ ಹೇಳ್ತಾನೋ ಅವನಿಗೇ ಗೊತ್ತು.'' ತನಗೆ ತಿಳಿದಷ್ಟನ್ನು ತರುಣ ಹೇಳಿದ. ಯಾವುದರಲ್ಲೋ ಮುಳುಗಿದಂತಿದ್ದ ಚಂಗ,

''ಅಲ್ಲಪ್ಪ ತಮ್ಮ...., ಊರಿಗಿ ಊರ ಮಂದೀನೇ ಹಿರಿಯಣ್ಣಗ ಇಷ್ಟೊಂದು ಮರ್ಯಾದೆ ಮಾಡ್ತಾರಂದ್ರ ಸುಮ್ಮನಾಗ್ತದ ? ಒಂದಿಷ್ಟು ಥೈಲಿ ತುಂಬಕೊಂಡು ಬಂದಿರಬೇಕು. ನಾಳೆಯಿಂದ ಈ ಊರ ರೋಡು ಕನ್ನಡಿ ಆದಾವು, ಗರೀಬರ ಮನಿ ಗಡಗಿ ಉರಿಯೋ ಒಲಿ ಹತ್ತೇವು, ಕರೀಮೈಗಳಿಸಗಿ ಬಟ್ಟೆ ಮುಚ್ಚೇವು, ಸಂತೋಷ, ಆನಂದದ ಸುಳಿಗಾಳಿ ಸಣ್ಣಗಿ ಬೀಸೇತು ಅಂತ ನಾ ಅಂತೀನಿ, ನಿನಗೇನನ್ನಸ್ತದ ?'' ಲೆಕ್ಕಾಚಾರದಿಂದ ಹೇಳಿದ ಚಂಗ.

''ಅಯ್ಯೋ ಮಾರಾಯಾ, ಖಾಲಿಹೊಟ್ಟಿ ತೊಳಸಿದಂಗಾಗ್ತದ. ತಿನ್ನದಕೇನಾದರೂ ಸಿಕ್ಕೀತು ಅಂತ ಹುಡುಕಾಡ್ತಿರೋ ನೀನೇ ಈ ಮಾತು ಹೇಳ್ತಿ ಅಂದ್ರ ನಗಬೇಕಾ ಅಳಬೇಕಾ ? ಈ ಹಿರಿಯಣ್ಣ ಒಂದು ನಮೂನಿ ಜಮೀನ್ದಾರ ಇದ್ದಂಗ. ಒಂದೊಂದೇ ಸೀಮಿ ಕಬ್ಜಾ ಮಾಡೋದೆ ಇವನ ಕೆಲಸ. ತಿನ್ನೋ ಅನ್ನಕ್ಕೂ ತನ್ನ ಹೆಸರು ಇಡೊ ಹಿಕಮತ್ ಇವಂದು. ಎಡಗೈಲಿ ಕೊಟ್ಟಂಗ ಮಾಡಿ ಬಲಗೈಲಿ ದೋಚೋ ಚಾಲಬಾಜ್ ಇಂವ. ಹುಣ್ಣಿಮಿ ಚಂದ್ರಮನಂಗ ಮಾರಿ ತುಂಬ ನಗಿ ತುಂಬಕೊಂಡು ಈ ಊರ ಮಂದಿಗಿ ಮರಳು ಮಾಡದಕ ಬಂದಾನ. ನಮ್ಮ ಹಣೇಬರಹ, ಈ ಕಣ್ಣುಕಟ್ ಆಟ ಆಡವನ ಒಳಮರ್ಮ ನಮಗೆಲ್ಲ ತಿಳಿಲಾರ್ದಂಗ ಆಗ್ಯದ. ದೂರದ ಗುಡ್ಡ ಕಣ್ಣಿಗಿ ನುಣುಪು ಅಂದಂಗ ನಾವೆಲ್ಲ ಹುಚ್ಚಾಗ್ಯಿವಿ. ನಮ್ಮೂರ ಬಂಗಾರದ ಅಂಗಳದಾಗ ಏನದ... ಏನಿಲ್ಲ ? ಇಲ್ಲಿ ನಾವು ಹುಡುಕದಕೇ ಹೋಗ್ತಿಲ್ಲ. ನಾವೆಲ್ಲ ಮಂದಿ ಬೆನ್ನು ಬಾಗಿಸಿ ಬೆವರು ಸುರುಸ್ತೀವಿ ಅಂದ್ರ ಕೆಲಸ ಇಲ್ಲ. ಓದ್ತೀವಿ ಅಂದವರಿಗಿ ವಿದ್ಯಾ ಇಲ್ಲ. ರೊಕ್ಕಸ್ತರ ತಲಿಯೊಳಗ ಬುದ್ಧಿ ಇಲ್ಲ. ಕಣ್ಣೊರಸದು, ತುಟಿ ಸವರೋದು ನಮ್ಮೋರು ಛೆಂದ ಕಲ್ತಾರ. ನಮಗನೂ ಆಹಾ ಅಂತ ಬಾಯಿಬಿಡದು ರೂಢೀನೆ ಆಗಿಬಿಟ್ಟದ. ಹಿರಿಯಣ್ಣನ ಗ್ರಹಣ ಬಿಟ್ಟು ಹೋಯ್ತಂದರ ಮತ್ತ ನಾವೆಲ್ಲ ಇದ್ದಂಗೆ ಇರ್ತೀವಿ'', ಅಂದ ತರುಣನ ಮುಖದಲ್ಲಿ ಚಿಂತೆ ಗೆರೆ ಮೂಡಿದ್ದವು. ಚಂಗನಿಗೂ ಅಲ್ಪ ಸ್ವಲ್ಪ ವಾಸ್ತವದ ಅರಿವಾಯ್ತು.

''ಹಂಗಾದ್ರೆ ನಾಳೆ ಏನು ಬದಲಾವಣೆ ಆಗೋದೆ ಇಲ್ಲಂತೇನು ತಮ್ಮ ?'' ಅಂತ ಚಂಗನೇ ಕೇಳಿದ.

''ಬದಲಾವಣೆನಾ ? ಐವತ್ತು ವರ್ಷಗಳಿಂದ ಆಗದ ಬದಲಾವಣೆ ಐದೇ ದಿನದೊಳಗ ಹ್ಯಾಂಗ ಆದೀತು ? ಹಿರಿಯಣ್ಣ ತನ್ನ ಊರ ಹಾದಿ ಹಿಡಿದ ಮರುದಿನ ಮತ್ತೆಲ್ಲ ಇದ್ದಂಗೇ ಇರ್ತದಿಲ್ಲೋ ನೀನೇ ನೋಡು. ಹರಕು ಬಟ್ಟೆ ಉಟ್ಟ ಜನ ಹೊರಗ ಬರ್ತಾರ, ರೋಡಿನ ಆಜೂ ಬಾಜೂ ಕಮರು ಹೊಡೀತದ, ರೋಡು ತುಂಬಿ ಜನರ ಜಾತ್ರೆ ನೆರೀತದ, ಭಿಕ್ಷೆ ಬೇಡವರು ಬೀದಿಗಿ ಬಂದು ಎವ್ವಾ ತುತ್ತು ಅನ್ನ.... ಎಪ್ಪಾ ಏನರ ಹಾಕರೀ ಅಂತ ಕೇಳದಕ ಶುರು ಮಾಡ್ತಾರ.'' ದೊಡ್ಡ ಪಟ್ಟೀನೇ ಇಟ್ಟ. ತರುಣನ ಮಾತು ಕೇಳಿ ಚಂಗ,

''ಮತ್ತ ಹಿರಿಯಣ್ಣ ಬಂದು ಹೋಗಿದ್ದರ ಫಲ ?'' ಅಂತ ಕೇಳಿಯೇಬಿಟ್ಟ.

''ಫಲ ಏನ್ ಬಂತು ಮಣ್ಣು. ಹಿರಿಯಣ್ಣನ ಮಗಳಿಗಿ ಊರು ನೋಡಬೇಕಿತ್ತು. ಹಿರಿಯಣ್ಣಗನೂ ಮಾಡದಕ್ಕ ಕೆಲಸ ಇಲ್ದೇ ತನ್ನೂರಾಗಿದ್ದು ಬ್ಯಾಸರಾಗಿತ್ತು. ಅದಕ್ಕಂತ ತಾನೂ ಬಂದ, ಮಗಳನೂ ಕರೆತಂದ. ನಮಗೇನೂ ಹುಸಿಭ್ರಾಂತಿ ಹುಚ್ಚು ಹಿಡಿದಿತ್ತು. ಯಾವ ಹಿರಿಯಣ್ಣ ಬರಲಿ, ಮರಿಯಣ್ಣ ಬರಲಿ, ನಾವು, ನಮ್ಮ ಬದುಕು, ಈ ಊರಿನ ನೆಲ, ಜಲ, ಗಾಳಿ, ಬೆಳಕು ಏನೂ ಬದಲಾಗಲ್ಲ, ದುಡೀದೇ ನಮ್ಮ ಹೊಟ್ಟೆ ತುಂಬಲ್ಲ. ಹೆಂಡರು ಮಕ್ಕಳನೂ ಬದುಕಲ್ಲ.'' ಮತ್ತೊಮ್ಮೆ ಹೇಳಿದ. ಚಂಗ ಚಿಂತೆಯಲ್ಲಿ ಮುಳುಗಿಹೋಗಿದ್ದ. ಏನೇನೋ ತರ್ಕಿಸುತ್ತ ಮೈ ಮರೆತಿದ್ದ. ಮತ್ತೆ ತರುಣನೇ ''ಏನಾಯ್ತಪ್ಪ... ಯಾಕ ಸುಮ್ಮನಾಗಿಬಿಟ್ಟೇ ?'' ಅಂತ ಕೇಳಿದಾಗ, ''ಈಗ ಏನನ್ನಲಿ ತಮ್ಮ ನಾನು. ನೀನೇ ಹೇಳ್ದೆಯಲ್ಲ ಇಲ್ಲೆಲ್ಲ ಇದ್ದದ್ದು ಇದ್ದಂಗೆ ಇರ್ತದ, ಏನೂ ಬದಲಾಗಲ್ಲ ಅಂತ. ಅದಕ್ಕೆ ನಾ ಬಂದ ಕೆಲಸಾನೇ ಬೇರೆ. ಈಗಿಂದೀಗ ನಾ ನಮ್ಮೆಜಮಾನರ ಮನಿಗಿ ಹೋಗಿ ಮಾಡಬೇಕಾದ ಕೆಲಸ ಮಾಡಿ ಮುಗಸಿ ತಿರುಗಿ ಹೋಗೋ ಮುಂದ ಮತ್ತ ನಿನ್ನ ಭೇಟಿಗಿ ಬರ್ತಿನಿ. ಒಂದೊಪ್ಪತ್ತಿದ್ದು ಮತ್ತೊಂದಿಷ್ಟು ನಿನ್ನ ವಿಚಾರ ಕೇಳಿ ಮತ್ತ ನಾ ನಮ್ಮೂರ ಹಾದಿ ಹಿಡೀತೀನಿ'' ಅಂತ ಹೇಳಿದವನೇ ಎದ್ದುನಿಂತ ಚಂಗ, ಖಾಲಿಯೇ ಇದ್ದ ರಸ್ತೆಯಲ್ಲಿ ಕುಣಿಕುಣಿದು ನಡೆದುಹೋದ. ಮತ್ತೆ ಎಲ್ಲಿಯಾದರೂ ಕಸ, ಕಾಗದ ಚೂರು ಬಿದ್ದಿರಬಹುದೇ ಅಂತ ತರುಣ ನೆಲ ನೋಡಿದ.

**ಚಿತ್ರಶೇಖರ ಕಂಠಿ**
ಗ್ರೀಷ್ಮ ; ಸಂ. ೧೪೫/೨, ಮಾಕಾ ಬಡಾವಣೆ, ಜೇವರ್ಗಿ ರಸ್ತೆ
ಗುಲಬರ್ಗಾ - ೫೮೫ ೧೦೨

ಕೇಶಸೌಂದರ್ಯ ವಿನ್ಯಾಸ ಎರಡೂ ಅವರಿಗೇ ಸೇರಿದ್ದಾಗಿತ್ತು. ಇಂತಿರುವಾಗ ತನ್ನ ಸ್ವಂತ ತಾಯಿಯ ಕೆಲಸದಲ್ಲಿ ಊನ ಹುಡುಕುವುದೆ ? ಮಗನಾದವನಿಗೆ ಇದು ತರವೆ ? ತರವಲ್ಲ ತಾನೇ ? ಅದಕ್ಕೇ ವಿಷಯವನ್ನು ಮನವರಿಕೆ ಮಾಡುವ ವ್ಯರ್ಥ ಪ್ರಯತ್ನದಲ್ಲಿ ತೊಡಗಿದೆ. ಏಕೆಂದರೆ ನನ್ನ ಅನುಭವದ ಪ್ರಕಾರ, ನನ್ನ ಮೊದಲೆರಡು ಮಾತುಗಳನ್ನು ಬಿಟ್ಟು ಮುಂದೇನನ್ನೂ ಕೇಳಿಸಿಕೊಳ್ಳದ ಅವರ ಅಭಿಪ್ರಾಯದಲ್ಲಿ ಹೆಂಗಳೆಯರೆಲ್ಲಾ ವಿಷಯವಿಲ್ಲದೆ ಸುಮ್ಮನೆ ಹರಟುವ ಮಾತಿನ ಮಲ್ಲಿಯರು. ಆದ್ದರಿಂದ ನಾನೇನೇ ಎಷ್ಟೇ ವಟಗುಟ್ಟುತ್ತಿರಲಿ, ಅದ್ಯಾವುದೋ 'ಅದೃಶ್ಯ ಹತ್ತಿ'ಯೊಂದು ಅವರ ಕರ್ಣಗಳನ್ನು ಮುಚ್ಚಿಬಿಟ್ಟು, ನನ್ನ ವಚನಾಮೃತಗಳು ಅವರ ಕರ್ಣಗಳ ಒಳಹೊಕ್ಕು ನಡೆಸಬೇಕಾಗಿದ್ದ ಚಮತ್ಕಾರಗಳನ್ನು ತಡೆಯುತ್ತಿತ್ತು.




ಇಂದೂ ಕೂಡಾ ಅದೇ ಪರಿಸ್ಥಿತಿ ಮುಂದುವರೆಯಿತು. ಆದರೆ ಮನೆಯಲ್ಲಿ ಮೌನವ್ರತವನ್ನಾಚರಿಸುತ್ತಾ, ಕಾಲೇಜಿನಲ್ಲಿ ಉಪನ್ಯಾಸ ನೀಡುವಾಗ ಮಾತ್ರ ಮಾತನಾಡುತ್ತಿದ್ದ ಅವರು ಇಂದು ನನಗೇ ತರಗತಿ ತೆಗೆದುಕೊಂಡಿದ್ದೊಂದು ವಿಶೇಷ. ಅದರಲ್ಲೂ ಇದು ಸೌಂದರ್ಯೋಪನ್ಯಾಸ ! ಎಂಥಾ ವಿಪರ್ಯಾಸ ! ಇವರು ಹಾಗೂ ಸೌಂದರ್ಯದ ಬಗ್ಗೆ ಕಾಳಜಿ ! ಇವೆರಡೂ ಹೇಗೆ ಕೂಡಿಬಂತು ಎಂದೇ ನನಗರ್ಥವಾಗಲಿಲ್ಲ.

''ಮೊದಲೇ ಕೇರೇಹಾವಿನ ಹಾಗೆ ನಿನ್ನ ತಲೆ ಸಣ್ಣದು, ದೇಹ ದೊಡ್ಡದು. ನಿನ್ನ ಸಣಕಲು ಕೈಕಾಲುಗಳೂ ಕೂಡ ನಿನ್ನ ದೇಹದ ಗಾತ್ರವನ್ನು ಗಮನಿಸಿದಾಗ 'ಚೊಲ್ಲೇನೆ.' ಅಂಥದ್ದರಲ್ಲಿ ಕೂದಲನ್ನು ಹಾರಾಡುವಂತೆ ಅಗಲಗಲವಾಗಿ ಬಿಡಿಸಿ ಬಿಡಿಸಿ ಬಾಚಿಕೊಂಡು ನಿನ್ನ ಚಾಮರಕರ್ಣಗಳನ್ನು ಬಚ್ಚಿಟ್ಟುಕೊಳ್ಳುವುದು ಬಿಟ್ಟು ಇದೇನು 'ಮಡಿಕೆ ಅಲಂಕಾರ' ?''ಎನ್ನುತ್ತಾ ದುರುಗುಟ್ಟಿ ನೋಡತೊಡಗಿದರು.

''ಕೇರೇ ಹಾವಾ ? ಅಥವಾ ಹಾವು ರಾಣೀನಾ ? ಎರಡಕ್ಕೂ ತಲೆ ಸಣ್ಣದು ದೇಹ ದೊಡ್ಡದು. ಹಾವಿಗೆ ಕೈಕಾಲು ಇಲ್ಲವಲ್ಲ, ಆದ್ದರಿಂದ ಹಾವುರಾಣಿ, ಅರಣೆ ಎಂದೇ ಕರೀರಿ.'' ಅವರಿಗೆದುರಾಡದೆ, ಅವರ ಪರವಾಗಿಯೇ ನನಗೆ ನಾನೇ ಇನ್ನೂ ಕೆಲವು ಹೆಸರುಗಳನ್ನು ಇಟ್ಟುಕೊಂಡೆ.

ಅವರಿಗೇನನ್ನಿಸಿತೋ, ಶಾಂತಚಿತ್ತರಾಗಿ ''ನಿಜವಾಗಿ ನಿನಗೆ ನಾನು ಹೇಳಿದ ಕೇಶಾಲಂಕಾರಾನೇ ಒಪ್ಪುವುದು. ನಾನು ಹೇಳಿದ ಹಾಗೇ ಬಾಚಿಕೋ ನೋಡುವಾ'' ಎಂದರು.

ಸರಿ, ಗಂಡನ ಮಾತು ಮೀರಲುಂಟೆ ? ಅದರಲ್ಲೂ ನಾನು ಸೌಂದರ್ಯರಾಣಿಯಂತೆ ಗೋಚರಿಸುವೆ ಎಂಬ ಹೃದಯಾಂತರಾಳದ ಅವರ ಮಾತುಗಳನ್ನು ಕೇಳಿದ ಮೇಲೂ ಸುಮ್ಮನಿರುವುದೆಂತು ? ಆದ್ದರಿಂದ ಕೂಡಲೆ ಕಾರ್ಯತತ್ಪರಳಾದೆ. ಒಂದು ರಾಸಿ ಶ್ಯಾಂಪೂ ಹಾಕಿ ಸ್ನಾನ ಮಾಡಿ, ಕೂದಲಿನ ಎಣ್ಣೆ ಜಿಡ್ಡನ್ನೆಲ್ಲಾ ತೆಗೆದು, ಮಗಳ ಹೇರ್‌ಡ್ರೈಯರ್‌ನಿಂದ ಕೂದಲನ್ನು ಒಣಗಿಸಿ, ಸಡಿಲ ಸಡಿಲವಾಗಿ ಕೂದಲೆಲ್ಲಾ ಕೆದರಿಹೋದಂತೆ ತಲೆ ಬಾಚಿಕೊಂಡು ಇವರಿಂದ ಶಭಾಸ್‌ಗಿರಿಯನ್ನು ಪಡೆದೆ.

ಬೆಳಿಗ್ಗೆ ಬೇಗನೆ ದೇವಸ್ಥಾನದಲ್ಲಿ ಚಂಡಿಕಾ ಯಾಗವಿದೆಯೆಂದು ಓಡಿಕೊಂಡೇ ಹೋಗಿದ್ದ ಅತ್ತೆಯವರು ಸಂಜೆ ನಾಲ್ಕರ ವೇಳೆಗೆ 'ಉಸ್ಸಪ್ಪಾ' ಎನ್ನುತ್ತ ಮನೆಯೊಳಗೆ ಕಾಲಿಟ್ಟರು.

ಅಂದಿನ ಪತ್ರಿಕೆಯನ್ನು ಆರಾಮವಾಗಿ ತಿರುವಿಹಾಕುತ್ತ ಕುಳಿತಿದ್ದ ನನ್ನೆಡೆಗೆ ಅಪರಿಚಿತ ದೃಷ್ಟಿ ಬೀರಿ, ''ಸುಮತೀ, ನಿನ್ನನ್ನು ಹುಡುಕಿಕೊಂಡು ಯಾರೋ ಬಂದ ಹಾಗಿದೆ ನೋಡಮ್ಮಾ'' ಎನ್ನುತ್ತ ಕಾಲು ತೊಳೆದುಬರಲು ಸ್ನಾನದ ಕೋಣೆಗೆ ನಡೆದರು.

ನಾನು ಹೊರಬಾಗಿಲ ಬಳಿ ಹೋಗಿ ಆಚೀಚೆ ನೋಡಿದೆ. ಯಾರೂ ಇಲ್ಲ.

''ಎಲ್ಲಿ ಅತ್ತೆ ? ಯಾರೂ ಕಾಣಿಸ್ತಾನೇ ಇಲ್ಲ'' ಎಂದು ನಾನು ಹೇಳುವುದಕ್ಕೂ, ಅತ್ತೆ ಅಲ್ಲಿಗೆ ಬರುವುದಕ್ಕೂ ಸರಿ ಆಯ್ತು.

''ಅಯ್ಯೋ ರಾಮ ! ನಿನಗೇನಾಯ್ತಮ್ಮ ? ಯಾಕೆ ಹೀಗೆ ಹುಚ್ಚಿ ಹಾಗೆ ಬಿಕರುಮಂಡೆ ಮಾಡಿಕೊಂಡಿದ್ದೀಯಾ ? ಸರಿಯಾಗಿದ್ದೀಯೋ ಇಲ್ವೋ ?'' ಎಂದು ಆಲಾಪಿಸತೊಡಗಿದರು. ನನ್ನ ನೂತನ ಕೇಶವಿನ್ಯಾಸದಿಂದಾಗಿ ಅವರಿಗೆ ಅಷ್ಟು ಹೊತ್ತು ನನ್ನ ಗುರುತಾಗಿರಲಿಲ್ಲ. ನನ್ನನ್ನೇ ಅತಿಥಿ ಎಂದು ಭಾವಿಸಿದ್ದರು.

ಈ ಹಿರಿಯ ಕೇಶವಿನ್ಯಾಸಕಿಯ ದುಃಖವನ್ನು ಕಂಡು 'ಅಯ್ಯೋ ಪಾಪ' ಎನಿಸಿತು. ಆದರೇನು ಮಾಡಲಿ ? ಇವರ ಮಗನೂ ಈಗ ಕೇಶಶೃಂಗಾರದ ದಾಂಧಲೆ ಎಬ್ಬಿಸಿದ್ದಾರಲ್ಲಾ. ಅದನ್ನೇ ಅರುಹಿದೆ.

ತನ್ನ ಕೆಲಸದಲ್ಲಿ ತಲೆ ಹಾಕಿದ್ದೂ ಅಲ್ಲದೆ, ತನ್ನ ಅಲಂಕಾರ ಸಾಮರ್ಥ್ಯವನ್ನು ಮಡಿಕೆಗೆ ಹೋಲಿಸಿ ಹೀಗಳೆದ ಮಗನನ್ನು ತರಾಟೆಗೆ ತೆಗೆದುಕೊಳ್ಳಲು ಅತ್ತೆ ಒಳಗೆ ದೌಡಾಯಿಸಿದರು. ಎಷ್ಟು ಹೊತ್ತಾದರೂ ಇಬ್ಬರೂ ಹೊರಬರಲಿಲ್ಲ. ನನಗೆ ಬೇರೆ ಆದೇಶಗಳನ್ನು ನೀಡಲಿಲ್ಲ. ಕುತೂಹಲ ತಾಳಲಾರದೆ ನಾನೇ ಮೆಲ್ಲಗೆ ಒಳಸರಿದು, ದೂರದಿಂದಲೇ ಬಾಗಿಲಲ್ಲಿ ಇಣುಕಿ ನೋಡಿದೆ. ಅತ್ತೆ ಕೈಬಾಯಿ ತಿರುಗಿಸಿ ಹೇಳಿದ್ದನ್ನೇ ಹೇಳುತ್ತಿದ್ದರು. ಯಥಾಪ್ರಕಾರ ಇವರು ಪುಸ್ತಕದ ಮರೆಯಲ್ಲಿ ಮಂದಹಾಸ ಬೀರುತ್ತಾ 'ಅದೃಶ್ಯ ಹತ್ತಿ'ಯ ಮೊರೆಹೊಕ್ಕಿದ್ದರು.

ಇವರಿಬ್ಬರಲ್ಲಿ ಯಾರು ವಿಜಯಿಯಾದರೂ, ಒಬ್ಬರಿಗಂತೂ ನನ್ನ ಕೇಶಾಲಂಕಾರದಿಂದ ಆನಂದವುಂಟಂಬ ತೃಪ್ತಿ ನನಗೆ. ಇಬ್ಬರೂ ರಾಜಿಯಾಗಿ ಹೊಸ ಆದೇಶವನ್ನು ನೀಡಿದರೂ ನನಗದು ಆದರಣೀಯವೇ. ಆದ್ದರಿಂದ ತಲೆ ಬಿಸಿ ಮಾಡದೆ, ನನ್ನ ತಲೆಯ ಹೇನಿನಂತೆ ಇವರುಗಳೂ ಕೂಡ ನನ್ನ ತಲೆಯನ್ನು ತಮಗಿಷ್ಟಬಂದಂತೆ ಬಳಸಿಕೊಳ್ಳಲಿ ಎಂದುಕೊಂಡು ಪುನಃ ಪತ್ರಿಕಾವಲೋಕನವನ್ನು ಮುಂದುವರೆಸಿದೆ.


ಸತ್ಯವತಿ
w/o ಡಾ|| ಎಸ್. ಹರಿಕೃಷ್ಣನ್
ಸರ್ಜನ್ ಡೆಂಟಿಸ್ಟ್
ಸುರತ್ಕಲ್ - ೫೭೫ ೦೧೪

# ಉಳ್ಳವರು ಶಿವಾಲಯವ ಮಾಡುವರು

*ಬಸವಣ್ಣನವರು ತಮ್ಮ ಬದುಕಿನಲ್ಲಿ ಏನೇನನ್ನು ಪ್ರತಿನಿಧಿಸಿದ್ದರೋ ಆ ಎಲ್ಲ ಲಕ್ಷಣಗಳೂ ಈ ವಚನದಲ್ಲಿವೆ - ಕವಿ, ಸಮಾಜ ಸುಧಾರಕ, ರಾಜಕೀಯ ಮುತ್ಸದ್ದಿ ಹಾಗೂ ಧಾರ್ಮಿಕ ಗುರು. ಈ ಮಾತನ್ನು ಸಮರ್ಥಿಸಿಕೊಳ್ಳುವ ಯತ್ನವೇ ಈ ಲೇಖನದ ಉದ್ದೇಶ.*

ಬಸವಣ್ಣನವರ ಈ ವಚನವನ್ನು ಕುರಿತು ಅತ್ಯಂತ ಉಪಯುಕ್ತ ವಿವರಣೆಯನ್ನು ನೀಡಿರುವ ಡಾ. ಎ. ಕೆ. ರಾಮಾನುಜನ್ ಅವರು ಇಡೀ ಧಾರ್ಮಿಕ ವಚನ ಸಾಹಿತ್ಯದಿಂದ ಒಂದು ಪ್ರಾತಿನಿಧಿಕ ವಚನವನ್ನು ಆಲಿಸಬೇಕೆಂದರೆ ಈ ವಚನಕ್ಕಿಂತ ಬೇರೊಂದಿಲ್ಲ ಎಂದೆನ್ನುತ್ತಾರೆ. ಅವರು ಈ ವಚನವನ್ನು ಕುರಿತು ವಿವರವಾಗಿ ಮತ್ತು ಸಶಕ್ತವಾಗಿ ಬರೆದಿದ್ದಾರೆ. ನಾನಂತೂ ಅವರ ಈ ಲೇಖನ (ಸ್ಪೀಕಿಂಗ್ ಆಫ್ ಶಿವ, ಮುನ್ನುಡಿ) ಓದಿ ತುಂಬಾ ಪ್ರಭಾವಿತನಾಗಿದ್ದೇನೆ. ಹೀಗಾಗಿ ಅದೇ ವಚನವನ್ನು ಕುರಿತು ಈಗ ನಾನು ಬರೆಯಹೊರಟಾಗ ಎಷ್ಟೊಂದು ಅವರ ಅಭಿಪ್ರಾಯಗಳು ನುಸುಳಿ ಒಂದಲ್ಲ ಒಂದು ರೀತಿ ಕಾಣಿಸಿಕೊಂಡುಬಿಡುತ್ತದೋ ಎಂಬ ಶಂಕೆಯಿದೆ. ಆದರೂ ಯತ್ನವನ್ನಂತೂ ಮುಂದುವರೆಸಿದ್ದೇನೆ.

ಮೊದಲು ವಚನ ನೋಡೋಣ : ಉಳ್ಳವರು ಶಿವಾಲಯವ ಮಾಡುವರು। ನಾನೇನ ಮಾಡುವೆ ? ಬಡವನಯ್ಯ। ಎನ್ನ ಕಾಲೇ ಕಂಭ, ದೇಹವೇ ದೇಗುಲ, ಸಿರ ಹೊನ್ನ ಕಲಸವಯ್ಯ। ಕೂಡಲಸಂಗಮದೇವ ಕೇಳಯ್ಯ : ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

ಪ್ರಪ್ರಥಮವಾಗಿ ಕಣ್ಣಿಗೆ ಹೊಡೆಯುವಷ್ಟು ಸ್ಪಷ್ಟವಾಗಿರುವುದು ಉಳ್ಳವರು ಮತ್ತು ಬಡವರು, ಈ ಎರಡು ವರ್ಗಗಳ ಮಧ್ಯದ ಅಂತರ. ಉಳ್ಳವರು ಎಂದರೆ ಐಶ್ವರ್ಯವಂತರು, ಅಧಿಕಾರಸ್ಥರು, ವ್ಯವಸ್ಥೆಯ ನಿಯಂತ್ರಕರು. ಈ ಯಾವುದನ್ನೂ ಕಳೆದುಕೊಳ್ಳಲು ಎಳ್ಳಷ್ಟು ಒಲ್ಲದ ವರ್ಗ ಇದು. ಹೀಗೆ ಉಳ್ಳದ್ದನ್ನು ಉಳಿಸಿಕೊಳ್ಳಲು ಉಳಿಯುವಂಥ, ಅಜರಾಮರವಾಗಿ ತಮ್ಮ ಶಕ್ತಿ ಸಂಕೇತಗಳಾದಂಥವನ್ನು ನಿರ್ಮಾಣ ಮಾಡಹೊರಡುತ್ತಾರೆ. 'ಶಿವಾಲಯವ ಮಾಡುವುದೂ' ಕೂಡ ಈ ಯತ್ನದ ಒಂದು ಅಂಶ. ಶಿವಾಲಯ ಭಕ್ತರಿಗೆ ಹೇಗೆ ಒಂದು ಬಗೆಯ ಸಂಕೇತವೋ ಉಳ್ಳವರಿಗೆ ಅದರ ಜೊತೆಗೆ ಮತ್ತೂ ಒಂದು ಸಂಕೇತವಾಗುತ್ತದೆ.

ಬಡವರು ಏನೂ ಇಲ್ಲದವರು. ಹಣ, ಅಧಿಕಾರ, ಮತ್ತು ಯಾವ ಶಕ್ತಿಯೂ ಇಲ್ಲದ ದುರ್ಬಲರು. ಅಸಹಾಯಕರು. ಏನೂ ಮಾಡಲಾಗದೆ ತಮ್ಮನ್ನು ಪ್ರತಿನಿಧಿಸಿಕೊಳ್ಳಲಾಗದವರು; ನಶ್ವರರು. ಉಳ್ಳವರು ತಮ್ಮ ಶಾಶ್ವತತೆಯನ್ನು ಸ್ಥಾಪಿಸಿಕೊಳ್ಳಹೊರಟ ಮಾರ್ಗದಲ್ಲಿ ಶಿವಾಲಯವೂ ಮಾಡುವರು ! ಬಡವರು 'ಏನೂ ಮಾಡಲಾಗದ' ಇಂದಿದ್ದು ನಾಳೆ ಸಂಪೂರ್ಣ ಇಲ್ಲವಾಗುವ ಅನಾಥರು. ಇದು ಗೋಚರವಾದ ಕೂಡಲೆ ಬಡವನಿಗೆ ಅದು ಸವಾಲೂ ಆಗಿ ಕಂಡುಬಿಡುತ್ತದೆ. ಹಾಗಾದರೆ ಇಷ್ಟೆಯೆ ತಾನು ? ಇಷ್ಟಕ್ಕಾಗಿಯೇ ಸೃಷ್ಟಿಸಲ್ಪಟ್ಟವನೆ ತಾನು ? ಉಳ್ಳವರ ಮುಂದೆ ಏನೂ ಆಗದೆ ಸಂಪೂರ್ಣ ನಿಶ್ಶಕ್ತನೆ ?

ಬಸವಣ್ಣನವರು ಎರಡನೆ ಸಾಲಿನಲ್ಲೇ ಇದನ್ನು ಅಲ್ಲಗಳೆಯುತ್ತಾರೆ, ಸಾರಾಸಗಟು ನಿರಾಕರಿಸುತ್ತಾರೆ. ಮನುಷ್ಯ ತನ್ನ ಆತ್ಮ ಪ್ರತಿಷ್ಠಾಪನೆ ಮಾಡಿಕೊಳ್ಳುವ ಅದ್ಭುತ ಮಾರ್ಗ ತೋರುತ್ತಾರೆ. 'ಎನ್ನ ಕಾಲೆ ಕಂಭ. ದೇಹವೇ ದೇಗುಲ, ಶಿರ ಹೊನ್ನ ಕಲಸವಯ್ಯ' ಅನ್ನುತ್ತಾರೆ. ಯಾವುದು ಪವಿತ್ರವೋ, ಪೂಜ್ಯವೋ, ದೈವಸನ್ನಿಧಿಯೋ ಅವೆಲ್ಲ ನನ್ನ ಮೈನಲ್ಲಿಯೇ ಇವೆ. ಶಿವಾಲಯವನ್ನು ಕೂಡ ನಾವು 'ಮನುಷ್ಯದೇಹ ರಚನೆಯ ಸ್ವರೂಪದಲ್ಲಿಯೇ' ನಿರ್ಮಾಣಮಾಡುತ್ತೇವೆ. ದೇವಾಲಯದ ಎರಡು ಭಾಗಗಳೂ 'ಹಸ್ತ' ; ಕಂಭವೇ ಪಾದ ಹಾಗೂ ಆಲಯದ ಕಲಸವೇ ಶಿರ. ಆಲಯದ ಒಳಗಿನ ಭಾಗ 'ಗರ್ಭಗುಡಿ'. ಅಂದರೆ ಉಳ್ಳವರು ಮಾಡುವ ಶಿವಾಲಯಕ್ಕೂ, ಶಿವ ನಿರ್ಮಿಸಿದ ಈ ದೇಹಕ್ಕೂ ವ್ಯತ್ಯಾಸಗಳೇನೂ ಇಲ್ಲ. ಅದೇ 'ಬ್ಲೂಪ್ರಿಂಟ್' ದೇವಾಲಯವೂ ಕೂಡ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಿದೆ : ಸಮಾಜದಲ್ಲಿ ಮೇಲು ಕೀಳು, ಬಡವ ಬಲ್ಲಿದ, ಹೆಣ್ಣು ಗಂಡು, ಎಂಬ ಭೇದ ಭಾವಗಳು ಹೇಗೆ ಇವೆಯೋ ಹಾಗೆಯೇ ನಮ್ಮ ದೇಹದ ಬಗ್ಗೆಯೂ ಕೂಡ ನಮ್ಮ ಕಲ್ಪನೆಯಲ್ಲಿ ಮೇಲು - ಕೀಳು, ಪವಿತ್ರ-ಅಪವಿತ್ರ, ಮಾತನಾಡಬಹುದಾದ - ಮಾತನಾಡ ಬಾರದ ಭಾಗಗಳು ಎಂದಿವೆ. ಮನುಷ್ಯ ತನ್ನ ದೇಹವನ್ನೇ ಹೀಗೆ ವಿಭಜಿಸಿಕೊಂಡು ಬಿಟ್ಟಿದ್ದಾನೆ. ಶಿರ ಶ್ರೇಷ್ಠವಾದದ್ದು - ಆದ್ದರಿಂದ ಮನುಷ್ಯ ಕುಲದ ಅತ್ಯಂತ ಶ್ರೇಷ್ಠನೆನಿಸಿದ ಬ್ರಾಹ್ಮಣನನ್ನು ಪ್ರತಿನಿಧಿಸಿದರೆ, ಕಾಲು ಅತ್ಯಂತ ಕೀಳಾದ್ದರಿಂದ ಶೂದ್ರನನ್ನು ಪ್ರತಿನಿಧಿಸುತ್ತದೆ. ಈ ಇಡೀ ದೇಹ ಸಮಗ್ರವಾದುದು. ಸಮನ್ವಯಗೊಂಡ, ಸಮನ್ವಯಗೊಳ್ಳಬೇಕಾದ ಒಂದು ಇಡಿಯಾದದ್ದು ಎಂದು ನಮಗನ್ನಿಸುವುದೇ ಇಲ್ಲ. ಎಡಗೈ ಬಲಗೈಗಳ ಬಗೆಗೆ ಕೂಡ ನಮ್ಮ ವಿಚಿತ್ರ ಕಲ್ಪನೆಗಳಿವೆ.

ಉಳ್ಳವರ ವಿರುದ್ಧದ ಪ್ರತಿಭಟನೆಯಾಗಿ ಹೇಗೆ ಈ ದೇಹವನ್ನೇ ಶಿವಾಲಯವ ಮಾಡಹೊರಟಿದ್ದಾರೋ ಬಸವಣ್ಣನವರು, ಅಷ್ಟೇ ಸಮರ್ಥವಾಗಿ, ಜೊತೆ ಜೊತೆಗೇ ಈ ದೇಹದ ಬಗೆಗಿನ ನಮ್ಮ ಪೂರ್ವಾಗ್ರಹಗಳನ್ನು ಕಿತ್ತು ಒಗೆಯುತ್ತಿದ್ದಾರೆ. ಶಿವಾಲಯವ ಮಾಡಲು ಹೊನ್ನ ಕಲಸವೆಷ್ಟು ಮುಖ್ಯವೋ ಅಷ್ಟೇ ಮುಖ್ಯ ಕಂಭ ಮತ್ತು ಈ ಒಟ್ಟು ದೇಹ. ದೇವಾಲಯವನ್ನು ಪ್ರವೇಶ ಮಾಡುವ ಭಕ್ತನಿಗೆ ಪ್ರತಿ ಕಂಭವೂ ಪವಿತ್ರ, ಪೂಜ್ಯ - ಹಾಗೆಯೇ ದೇಹದ ಪ್ರತಿಭಾಗವೂ ಕೂಡ. ಈ ಸಮನ್ವಯ ಕ್ರಿಯೆ ಆರಂಭಿಸುವವನು ಬಡವ. ಆತನಿಗೆ ಇರುವುದೊಂದೇ ಆಸ್ತಿ, ಈ ದೇಹ. ಆದ್ದರಿಂದಲೇ ಇದನ್ನು ಒಟ್ಟಾಗಿ ಬಳಸಬೇಕು, ಒಟ್ಟಾಗಿ ನೋಡಬೇಕು. ದೇವಾಲಯವು ಕಣ್ಣಿಗೆ ಕಾಣುತ್ತ ಹೋಗುವ, ಗಟ್ಟಿಯಾಗಿ ನೆಲೆಸುವ ನಿಶ್ಚಲ ಸತ್ಯ. ಅಂದರೆ ಸದಾಕಾಲಕ್ಕೂ ವಿವರಣೆಗೆ ಒಗ್ಗುವ ಸತ್ಯವೂ ಎಂದಾಯಿತು. ಭಕ್ತನ ದೇವಾಲಯದ ಕಲ್ಪನೆಗೂ, ಉಳ್ಳವರ 'ಶಿವಾಲಯ'ದ ಕಲ್ಪನೆಗೂ ಇರುವ ವ್ಯತ್ಯಾಸವನ್ನು ಮನಸ್ಸಿನಲ್ಲಿಟ್ಟುಕೊಂಡೇ ದೇವಾಲಯ ಹೇಗೆ 'ಸ್ಥಾವರ'ವಾಗಿ ಬಿಡುತ್ತದೆ ಎಂದು ಬಸವಣ್ಣನವರು ಹೇಳುತ್ತಿರುವುದು. ಆದರೆ ಇದರ ವಿರುದ್ಧ, ಅಂದರೆ ಈ ಶಾಶ್ವತವಾಗಿ ಉಳಿದು ಬಿಡುವುದರ ವಿರುದ್ಧ ನಶ್ವರ ಮನುಷ್ಯನನ್ನು, ಬಡವನನ್ನು ಸ್ಪರ್ಧೆಗೆ ಬಿಟ್ಟಿದ್ದಾರಲ್ಲ ? ಈ ದೇಹವನ್ನು ಎಷ್ಟೇ 'ದೇಗುಲವೆಂದು ಕಂಡುಕೊಂಡರೂ' ಇದು ನಶ್ವರವಲ್ಲವೇ ? ಉಳಿದುಬಿಡುವುದರ ಜೊತೆ ಅಳಿದುಬಿಡುವುದನ್ನು ಹೀಗೆ ತೂಗಿ ನೋಡುವುದು ದೈವಕಲ್ಪನೆಗೆ ಅನ್ಯಾಯವಲ್ಲವೆ ?

ಬಹುಶಃ ನಾವಿಲ್ಲಿ ಅತ್ಯಂತ ಜಾಗರೂಕರಾಗಿರಬೇಕು ಎಂದು ನನಗನ್ನಿಸುತ್ತದೆ.

ಈ ದೇಹವೆಂಬುದು ನಶ್ವರವಾದರೂ ಮನುಷ್ಯ ಜೀವವೆಂಬುದು ಶಾಶ್ವತ. ವ್ಯಕ್ತಿಗಳು ನಶ್ವರರೇ ಹೊರತು ಬದುಕಲ್ಲ. ಇಲ್ಲಿ ಬಡವ, ಮನುಷ್ಯ ಜೀವಿ ಎಂಬುದು ಒಂದು ಅದ್ಭುತ ಕಾವ್ಯಮಯ ಸಂಕೇತ, ಇಡೀ ಬದುಕಿಗೆ ಸಂಕೇತ, ಬದುಕಿನ ವಿಕಾಸ ಪ್ರಕ್ರಿಯೆಗೆ ಸಂಕೇತ. ಸದಾ ಹೊಸತು ಗೊಳಿಸಿಕೊಳ್ಳುತ್ತಿರುವ, ಬಿಸಿರಕ್ತ ಹರಿಯುತ್ತಲೇ ಇರುವ, ಹೃದಯ ಮಿಡಿಯುತ್ತಲೇ ಇರುವ ಜೀವಸಂಕೇತ. ಆದ್ದರಿಂದ ಶಾಶ್ವತ. ಹೀಗಾಗಿ ಈ ದೇಗುಲ ಎಂದೂ ಸ್ವಚ್ಛ, ನಿರ್ಮಲ, ಜೀವಂತ. ವ್ಯವಸ್ಥೆಗೆ ಒಗ್ಗಿಕೊಳ್ಳಲು ಸಾಧ್ಯವೇ ಆಗುವುದಿಲ್ಲ ಈ ಎಂದೂ ಬೆಳೆಯುತ್ತಿರುವ ಅರಳುತ್ತಿರುವ ಒಂದು ಸತ್ಯಕ್ಕೆ. ಹೀಗಾಗಿ ಬಡವನ ಈ ಉಳ್ಳವರ ವಿರುದ್ಧದ ಪ್ರತಿಭಟನೆ ಜೀವಪರವಾದದ್ದು. ಭವಿಷ್ಯಮುಖಿಯಾದದ್ದು. ಉಳ್ಳವರಿಗೆ ತಮ್ಮ ಹೊರಗಿನ ವಿವರಗಳು - ಐಶ್ವರ್ಯ, ಅಧಿಕಾರ, ಸ್ಥಾನಮಾನ - ಇವುಗಳು ಶಕ್ತಿ ನೀಡಿದರೆ ಬಡವನಿಗೆ ತನ್ನ ಒಳಗಿನ, ತನ್ನದೇ ಆದ, ತನ್ನ ಅವಿಭಾಜ್ಯ ಅಂಗಗಳಾದ ದೇಹ, ಕಂಭ, ಶಿರ, ರಕ್ತ, ಮಾಂಸ, ಮನಸ್ಸು , ಕಲ್ಪನೆಗಳು ಶಕ್ತಿ ನೀಡುತ್ತವೆ.

'ಜಂಗಮ' ಶಬ್ದಕ್ಕೆ ಅರ್ಥ, ಮಹತ್ವ ಬರುವುದು ಇಲ್ಲಿ. ಚಾಲನಶಕ್ತಿಯನ್ನು ಎಂದೂ ಕಳೆದುಕೊಳ್ಳದ್ದು ಈ ದೇಹ, ಮನಸ್ಸುಗಳು. ಉಳ್ಳವರು ಮಾಡುವ ಶಿವಾಲಯಕ್ಕೆ ಜಂಗಮತ್ವ ಹೊರಟುಹೋಗಿಬಿಡುತ್ತದೆ; ಹೊರಟು ಹೋಗಿ ಬಿಡುವ ಸಾಧ್ಯತೆಗಳು ಇರುತ್ತವೆ. 'ಸ್ಥಾವರ'ವಾಗಿ, ಜಡವಾಗಿ, ಪರಂಪರಾನುಗತವಾಗಿ ಅದರೊಟ್ಟಿಗೆ ಉಳಿದುಬಂದ ವಿವರಗಳು - ಮಹಿಮೆ, ಮಹಾತ್ಮೆ - ಮಾತ್ರ ಶಾಶ್ವತವಾಗಿ ಬಿಡುತ್ತವೆ.

ಬಸವಣ್ಣನವರು ೧೨ನೇ ಶತಮಾನದಲ್ಲಿ ಆರಂಭಿಸಿದುದು ಒಂದು ಚಳವಳಿ. ಈ ಚಳವಳಿ ಜಂಗಮತ್ವವನ್ನು ಕಳೆದುಕೊಂಡು ಸ್ಥಾವರವಾದರೆ ಅದೂ ಕೂಡ ಉಳ್ಳವರು ಮಾಡುವ 'ಶಿವಾಲಯವೂ' 'ಮಠಮಾನ್ಯಗಳೂ' ಆಗಿಬಿಡುತ್ತವೆ. ಎಂದೇ [illegible]

ಜಿ. ಕೆ. ಗೋವಿಂದರಾವ್

ಚಳವಳಿಯ ಕೇಂದ್ರವನ್ನು ಕಾಣುತ್ತಾರೆ. ಕಳೆದುಕೊಳ್ಳಲು ಏನೂ ಇರದ, ಏನೂ ಇರಬಾರದವರು ಮಾತ್ರ ಚಳವಳಿಯನ್ನು ಸಜೀವವಾಗಿ ಉಳಿಸಬಲ್ಲರು ಎಂಬುದು ಅವರಿಗೆ ಸಂಪೂರ್ಣ ವೇದ್ಯವಾಗಿರಬೇಕು. ಬಸವಣ್ಣನವರಿಗೂ ಸುಮಾರು ಎರಡು ಸಾವಿರ ವರ್ಷಗಳಿಗೆ ಮುಂಚೆಯೇ ಈ ಸತ್ಯ ಗೋಚರವಾಗಿದ್ದುದು ಬುದ್ಧನಿಗೆ. ಅವನ ಉಪದೇಶಗಳನ್ನು, ಅವನು ಹೇಳಿದ ಕಥೆಗಳನ್ನು, ಅವನ ಜೀವನದ ವೃತ್ತಾಂತವನ್ನು ಅವನ ಸಮಕಾಲೀನರು ಶಾಶ್ವತವಾಗಿ ಉಳಿಸಲು ಸಂಸ್ಕೃತದಲ್ಲಿ ಬರೆದಿಡಬೇಕೆಂದು ಯತ್ನಿಸಿದಾಗ ಬುದ್ಧ ಖಡಾಖಂಡಿತವಾಗಿ ಇದನ್ನು ತಿರಸ್ಕರಿಸುತ್ತಾನೆ. ಜನರ ಆಡುಭಾಷೆಯಲ್ಲಿ ಉಳಿಯಬೇಕು ತಾನು ಹೇಳಿದುದು, ತಾನು ಮಾಡಿದುದು, ಬೋಧಿಸಿದುದು, ಸಮಾಜದ ಎಲ್ಲ ವರ್ಗದ ಜನಕ್ಕೆ ಲಭ್ಯವಾಗಿರಬೇಕು ಎಂದು ಬಯಸುತ್ತಾನೆ. ಬುದ್ಧನ ಕಾಲಕ್ಕೆ ಸಂಸ್ಕೃತ ತನ್ನ ಸ್ಥಾನಮಾನವನ್ನು - ಅಂದರೆ ಜನಬಳಕೆಯ ಭಾಷೆಯಾಗಿ - ಕಳೆದುಕೊಂಡು ಕೇವಲ ಮುನ್ನೂರು, ನಾನ್ನೂರು ವರ್ಷಗಳಷ್ಟೇ ಆಗಿದ್ದವು. ಸಂಸ್ಕೃತಭೂಯಿಷ್ಠ ಕಾಲ ಅದು. ಅಂತಹ ಯುಗದಲ್ಲೇ, ಜನಭಾಷೆಯ ಬಗ್ಗೆ ಕಾಳಜಿ ವಹಿಸಿ, ಒಂದು ಸತ್ಯ, ಒಂದು ಅನುಭವ ಜೀವಂತವಾಗಿ ಉಳಿಸುವುದಕ್ಕೆ ಯತ್ನಿಸಿದುದೇ ತಾನು ಚಾಲನೆ ಕೊಟ್ಟದ್ದು ಒಂದು ಚಳವಳಿಗೆ ಎಂದು ಬುದ್ಧನಿಗೆ ಗೊತ್ತಿರುತ್ತದೆ. ಬಸವಣ್ಣನವರ ವಚನದ ಅಂಕಿತನಾಮವಾದ 'ಕೂಡಲಸಂಗಮದೇವ' ಈ ವಚನಕ್ಕೆ ಮಹತ್ವದ ಅರ್ಥಪೂರ್ಣತೆಯನ್ನು ತಂದುಕೊಡುತ್ತದೆ. ಪವಿತ್ರವಾದ ಸಂಕೇತವಾಗಿ ಉಳಿಯಬೇಕಾದ ಶಿವಾಲಯವೂ ಕೂಡ ಜೀವಂತ ಶಕ್ತಿಯನ್ನು ಉಳಿಸಿಕೊಳ್ಳುತ್ತದೆ. ಅಂದರೆ ವ್ಯವಸ್ಥೆಯಾಗದೆ, ಜೀವಶಕ್ತಿ ಕಳೆದುಕೊಳ್ಳದೆ, ಉಳಿಯುವ ಶಾಶ್ವತ ಆಲಯವಾಗುತ್ತದೆ. ಇದು ಉಳ್ಳವರ ಸ್ವತ್ತು ಮಾತ್ರವಾಗುವುದಿಲ್ಲ, ಉಳ್ಳವರ ಶಕ್ತಿ ಪ್ರದರ್ಶನವೂ ಬಡವನ ದೌರ್ಬಲ್ಯದತ್ತ ಬೊಟ್ಟು ಮಾಡುವ ಸಂಸ್ಥೆಯಾಗುವುದಿಲ್ಲ. ಹಾಗೆಯೇ ಸಂಪೂರ್ಣ ಸಮನ್ವಯಗೊಂಡ, ಏಕತೆಯನ್ನು ಉಳಿಸಿಕೊಂಡ ದೇಹ ಕೂಡ ಹರಿಯುವ ಜೀವ ಪ್ರವಾಹದ ಒಂದು ಬಿಂದುವಾಗುತ್ತದೆ. ಈ ಎರಡೂ ಅಂಶಗಳು ಸಂಗಮವಾದಾಗ ಬಹುಶಃ ನಶ್ವರತೆ - ಶಾಶ್ವತತೆಗಳ ಅರ್ಥಗಳೂ ಕೂಡ ನಾಟಕೀಯವಾಗಿ, ಕ್ರಾಂತಿಕಾರಕವಾಗಿ ಬದಲಾಗುತ್ತವೆ. 'ಕೂಡಲಸಂಗಮ'ವಾಗುತ್ತವೆ.

ಭೂಸನೂರಮಠ ಅವರು ಸಂಪಾದಿಸಿದ 'ವಚನ ಸಾಹಿತ್ಯ ಸಂಗ್ರಹ'ದಲ್ಲಿ ಅಲ್ಲಮರ ಒಂದು ವಚನ ಇದೇ ಸಂದರ್ಭದಲ್ಲಿ ಕಣ್ಣಿಗೆ ಬಿದ್ದಿತು. 'ಕಾಯಕವೆ ಕೈಲಾಸ - ದೇಹವೆ ದೇಗುಲ' ಎಂಬ ಉಪಶೀರ್ಷಿಕೆಯಡಿ ಕಂಡ ವಚನಗಳಲ್ಲಿ ಇದೊಂದು. ಬಸವಣ್ಣನವರ 'ಉಳ್ಳವರು' ವಚನಕ್ಕೆ ಪೂರಕವಷ್ಟೇ ಅಲ್ಲ ; ಹೇಗೆ ಆ ವಚನದ ವ್ಯಾಪ್ತಿಯನ್ನು ಹಿಗ್ಗಿಸಿಬಿಡುತ್ತದೆ ಮತ್ತು ಬಸವಣ್ಣನವರ ಉದ್ದೇಶವನ್ನೂ ಎಷ್ಟು ಮುಂದುವರೆಸಿಕೊಂಡು ಹೋಗಿಬಿಡುತ್ತದೆ ಎಂಬುದನ್ನು ನಾವು ನೋಡಬಹುದು.

ಅಲ್ಲಮರ ವಚನ ಇದು : ''ದೇಹದೊಳಗೆ ದೇವಾಲಯ ವಿದ್ದು, ಮತ್ತೆ ಬೇರೆ ದೇವಾಲಯವೇಕೆ ? ಎರಡಕ್ಕೆ ಹೇಳಲಿ ಲ್ಲಯ್ಯ ! ಗೊಹೇಶ್ವರ, ನೀನು ಕಲ್ಲಾದರೆ ನಾನೇನಪ್ಪೆನು ?''

ಬಸವಣ್ಣನವರ ವಚನ ಪ್ರಕ್ರಿಯೆಯ ಸೂಚಕವಾದರೆ ಅಲ್ಲಮರ ವಚನ ಆ ಪ್ರಕ್ರಿಯೆ ಮುಟ್ಟಬೇಕಾದ ಅಂತಿಮ ಘಟ್ಟದ ಸೂಚಕ. ಇಲ್ಲಿ ಅಲ್ಲಮರಿಗೆ ಅನುಮಾನಗಳೇ ಇಲ್ಲ, ಪ್ರತಿಭಟನೆಯ ಹಂತವನ್ನು ಮೀರಿ ಗುರಿ ಸಾಧಿಸಿದ ಸಮಾಧಾನ, ವಿನಯದ ವಿಶ್ವಾಸ.

ಕೂಡಿ ಹರಿಯುವ ನದಿಗಳ ವಿವಿಧ ಮಜಲುಗಳಿಲ್ಲ, ಸವಾಲು, ಸಾಹಸಗಳಿಲ್ಲ, ಸುಳಿ, ಪ್ರವಾಹಗಳಿಲ್ಲ, ಎಲ್ಲ ಘಟ್ಟವನ್ನೂ ದಾಟಿ ನಿಶ್ಚಲವಾಗಿ ಅಂತಿಮ ಹಂತವಾದ ಸಂಗಮಕ್ಕೆ ಹರಿಯುತ್ತಿರುವ ನೀರಿನ ನಿಶ್ಚಲತೆ, ಪ್ರಶಾಂತತೆ ಇದೆ.

ದೇಹ-ದೇವಾಲಯ ಈಗಾಗಲೇ ಒಂದು. ಆದ್ದರಿಂದ ಈ ದೇಹವಿರುವವರೆಗೆ ಬೇರೆ ದೇವಾಲಯದ, ಬಾಹ್ಯಸಂಕೇತಗಳ ಅವಶ್ಯಕತೆಯಿಲ್ಲ. ಈ ಎರಡು ಬೇರೆ ಬೇರೆಯೇ ಅಲ್ಲ. 'ಅಹಂ-ಬ್ರಹ್ಮಾಸ್ಮಿ' ಅದ್ವೈತ ಕಲ್ಪನೆಯ ಅತ್ಯಂತ ಸಮರ್ಥ ವಾಕ್ಯ ಇದು. ಈ ನಶ್ವರ-ಶಾಶ್ವತಗಳು ಒಂದೇ. ನಶ್ವರದಲ್ಲಿ ಶಾಶ್ವತವೂ, ಶಾಶ್ವತದಲ್ಲಿ ನಶ್ವರವೂ ವಿಲೀನಗೊಂಡಿವೆ. ಆದ್ದರಿಂದಲೇ 'ನೀನು ಕಲ್ಲಾದರೆ ನಾನೇನಪ್ಪೆನು ?' ಈ ದೇವಾಲಯವು ಕೇವಲ ವ್ಯವಸ್ಥೆಯಾದರೆ, ಅಭ್ಯಾಸಮಾತ್ರವಾದರೆ, 'ಕಲ್ಲಾದರೆ' ನಾನು - ಬಡವ, ದುರ್ಬಲ, ನಶ್ವರ, - ಏನಾಗಬೇಕು ?

ಆದ್ದರಿಂದಲೇ ದೇಹದಲ್ಲಿ ಜೀವಂತಿಕೆ ಉಳಿಸಿಕೊಳ್ಳುವುದೆಂದರೆ ದೇವಾಲಯದಲ್ಲಿ ಜೀವಂತಿಕೆ ಉಳಿಸಿಕೊಂಡಹಾಗೆ. ದೇವಾಲಯವು ಜೀವಂತ ಧಾರ್ಮಿಕ ಸಂಕೇತವಾಗಿ, ಬೆಚ್ಚನೆಯ ಭಾವನೆಯಾಗಿ ಉಳಿಯುವವರೆಗೆ ಈ ದೇಹ ಶಾಶ್ವತತೆಯ ಅಂಶವನ್ನು ಉಳಿಸಿಕೊಳ್ಳುತ್ತದೆ ಎಂದರ್ಥ. ಇವು ಪರಸ್ಪರ ಹೇಗೆ ಹೌದೋ ಹಾಗೇ ಏಕತ್ರ ನೆಲೆಸಿರುವ, ಏಕಕಾಲದಲ್ಲಿ ಅನುಭವವಾಗುವ ಸತ್ಯ. ಎರಡೂ ಹೌದು, ಒಂದೇ ಒಂದು ಕೂಡ ಹೌದು. ಎರಡಾಗಿ ಆರಂಭವಾಗುವ - ದೇಹ, ದೇಗುಲ - ಅಲ್ಲಮರಲ್ಲಿ ದೇಹವೇ ದೇಗುಲವಾಗಿಬಿಟ್ಟಿದೆ.

ಅಂದರೆ ವ್ಯವಸ್ಥೆಯ ವಿರುದ್ಧದ ಚಳವಳಿಯ ಮುಂದಿನ ಮಜಲೆಂದರೆ ಈ ಚಳವಳಿಯ ಜೀವಂತಿಕೆಯಲ್ಲಿ - ಯಾರೂ ವಿರೋಧಿಗಳು, ಪ್ರತಿಸ್ಪರ್ಧಿಗಳು ಇಲ್ಲದಿದ್ದಾಗಲೂ - ಏನೂ ಭಂಗಬಾರದಂತೆ, ಎಂದೂ ತಣ್ಣಗಾಗದಂತೆ ಕಾಪಾಡಿಕೊಂಡುಬರುವುದು. ಇಲ್ಲದಿದ್ದರೆ ಜಂಗಮತ್ವವನ್ನು ಕಳೆದುಕೊಂಡು 'ಕಲ್ಲಾಗಿ' ಹೋಗಿ 'ನಾನೇನಾಗಬಹುದು' ಎಂಬ ಅನುಮಾನದಲ್ಲಿ, ಆತಂಕದಲ್ಲಿ, ಭಯದಲ್ಲಿ, ಉಳಿಯುವಂತಾಗುತ್ತದೆ, ಅಷ್ಟೆ.


**ಜಿ. ಕೆ. ಗೋವಿಂದರಾವ್**

ನಂ. ೧೬೧, ೧ನೇ ಮಹಡಿ, ೩೬ನೇ 'ಎ' ಕ್ರಾಸ್

೭ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೮೨


## ಅವ್ವ

ಹರಿದ ರವಿಕೆ ಹೊಲಿದ ಸೀರೆ
ಹಾಲಿತ್ತು ಸರಿ ತಿನ್ನಿಸಿ
ತೊದಲು ಮಾತಿಗೆ ತಲೆದೂಗಿ
ಮುದ್ದು ಮುದ್ದಾಗಿ ಗಿಣಿ ಮಾತು ಕಲಿಸಿ
ಕೋಗಿಲ ಹಾಡ ಹೇಳಿ
ನೆಲ ಮುಗಿಲವರೆಗೆ ಕಥೆಕಟ್ಟಿ
ಕತ್ತಲಿಗೆ ಹೋದವಳು;

ಮೈನೆರೆದಾಗ - ಮದುವೆ ಒಸಗೆಯಲ್ಲಿ
ಸುಗ್ಗಿಕಾಲದ ಹಿಗ್ಗುಕಂಡು
ಪುಂಗಿ ದನಿಗೆ ಮೋಡಿ ಹಾಕಿ
ನೋವು ಮರೆಸಿ ರಾಗ ಬೆರೆಸಿ
ಕತ್ತಲಿಗೆ ಹೋದವಳು;

ಕಳೆದ ಕುರಿಮರಿಗೆ ಸತ್ತ ಕರುವಿಗೆ
ಹಗಲಿರುಳು ಅತ್ತು
ಅಪ್ಪನ ನೇಗಿಲಿಗೆ ಎತ್ತಾಗಿ ದುಡಿದು
ಕತ್ತಲಿಗೆ ಹೋದವಳು;

ಸತಿಯಾಗಿ ಪತಿವ್ರತೆಯಾಗಿ
ಬೇವುಂಡು ಮಾವಾಗಿ
ಮಲ್ಲಿಗೆಯಂತರಳಿ
ಕತ್ತಲಿಗೆ ಹೋದವಳು;

ಪುರಾಣದ ಕಗ್ಗಂಟು ಧರ್ಮದ ಮುಗ್ಗಟ್ಟುಗಳ
ರುಬ್ಬುಗುಂಡಿಗೆ ಸಿಕ್ಕದೆ
ಬದುಕಿನೊಬ್ಬಿಟ್ಟಿಗೆ ಸುಟ್ಟುಕೊಂಡು
ಕತ್ತಲಿಗೆ ಹೋದವಳು;

ಕಾರೆಕುಡಿ ಕನ್ನೆ ಸತ್ತೆ ಮಸೆದು
ಗೋಟಿಗಡ್ಡೆ ಬೇಯಿಸಿ
ಬಾಯಿ ರುಚಿ ಮಾಡಿ
ಕಟ್ಟಹೊಲದ ಹೆಂಟಿ ಬಡಿದು
ಬೊಬ್ಬೆ ಕೈಗಳಲಿ ಹಬ್ಬಕಂಡು
ಕತ್ತಲಿಗೆ ಹೋದವಳು;

ಜವರಾಯ ಬಂದರೆ ಬರಿಕೈಲಿ ಬರಲಿಲ್ಲ
ಒಳ್ಳೊಳ್ಳೆ ಸಸಿ ಕೊಯ್ದ ಒಳ್ಳೊಳ್ಳೆ ಮರ ಕೊಯ್ದ
ಎಂದು ಹಲವು ಬಾರಿ ಹಾಡಿದ್ದವಳು
ಹೊತ್ತಾರೆಗೆ ಕತ್ತಲಿಗೆ ಹೋದಳು.




ಎಣ್ಣೆಗೆರೆ ಆರ್. ಒಡ್ಡೂಸುಮಯ್ಯ

''ತೇಜಸ್'', ನಾರಾಯಣಪ್ಪ ಕೋಟದ ಹತ್ತಿರ, ದೇವನೂರು ಚರ್ಚ್ ಹಿಂಭಾಗ,

ಸಪ್ತಗಿರಿ ಬಡಾವಣೆ, ತುಮಕೂರು - ೫೭೨ ೧೦೨

# ಬಸವಣ್ಣನವರ ಒಂದು ವಚನದ ಹೊಸ ಓದು



ನಿಂಗಪ್ಪ ಮುದೇನೂರು

ಒಂದು ವಚನದ ತಾತ್ವಿಕ ಚರ್ಚೆ ಇಲ್ಲಿದೆ. ಇದು ಬಸವಣ್ಣನವರ ಬಹು ಜನಪ್ರಿಯ ವಚನ. ವೀರಶೈವ ಸಮಾಜದ (ಈಗಿನ ಲಿಂಗಾಯತ ಸಮಾಜವಲ್ಲ) ಜಂಗಮದ ಕ್ರಿಯಾಶೀಲ ತಾತ್ವಿಕತೆಯನ್ನು ಪ್ರತಿಪಾದಿಸುತ್ತ ಆ ಮೂಲಕ ಸ್ಥಾವರ ಪರಿಕಲ್ಪನೆಯನ್ನು ನಿರಾಕರಿಸುತ್ತ ಬಂದ ಈ ವಚನ, ಸಹಜವಾಗಿ ವಿದ್ವಾಂಸರನ್ನು ಚಕಿತಗೊಳಿಸಿದೆ. ಇದನ್ನಿಲ್ಲಿ ಸಮಕಾಲೀನ ಸಮಾಜಗಳು ಬದುಕುತ್ತಿರುವ ಎಚ್ಚರ ಹಾಗೂ ದುಗುಡಗಳ ಹಿನ್ನೆಲೆಯಾಗಿ ನೋಡುತ್ತಲೇ ಅದರ ತಾತ್ವಿಕತೆಯನ್ನು ಪ್ರಶ್ನಿಸಲು ಮುಂದಾದಾಗ ಆ ವಚನದ ಒಳಾರ್ಥಗಳೇನು ಮತ್ತು ಬಸವಣ್ಣನಿಗಿದ್ದ, ಬಸವಣ್ಣ ಪ್ರತಿನಿಧಿಸುವ ಮೇಲ್ವರ್ಗಕ್ಕಿದ್ದ ಕೆಳಸಮುದಾಯಗಳ ಮೇಲ್‌ಚಲನೆಯ ಧಾರ್ಮಿಕ ಹಾಗೂ ಆರ್ಥಿಕ ರಾಜಕಾರಣದ ಒಳಭಯಗಳೇನಿದ್ದವು ಎನ್ನುವುದನ್ನು ಈ ವಚನ ಸೂಕ್ಷ್ಮವಾಗಿ ಹೊರಹಾಕುತ್ತದೆ.

ವಚನವನ್ನು ಈಗ ಓದಿ :

''ಉಳ್ಳವರು ಶಿವಾಲಯ ಮಾಡಿಹರು
ನಾನೇನ ಮಾಡುವೆ ಬಡವನಯ್ಯಾ
ಎನ್ನ ಕಾಲೇ ಕಂಭ, ದೇಹವೇ ದೇಗುಲ
ಶಿರ ಹೊನ್ನ ಕಲಶವಯ್ಯಾ
ಕೂಡಲ ಸಂಗಮದೇವಾ, ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.''

ಮಧ್ಯಕಾಲೀನ ಚರಿತ್ರೆಗೆ ಆತುಕೊಂಡಿರುವ ನಮ್ಮ ಬಹುಪಾಲು ಅಧ್ಯಯನಗಳು ಆ ಹೊತ್ತಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಘರ್ಷಗಳನ್ನು ವಸ್ತುನಿಷ್ಠವಾಗಿ ಹೇಳುವಲ್ಲಿ ಸೋತಿವೆ. ಹೀಗೆ ಹೇಳುವಲ್ಲಿ ಇವಕ್ಕಿರುವ ಮುಖ್ಯ ಆಕರಗಳು ಬರೀ ವಚನಗಳೇ. ಆ ಕಾಲದ ಬಿಜ್ಜಳನಿಗೆ ಸಂಬಂಧಿಸಿದ ಶಾಸನಗಳಿದ್ದರೂ ಉದ್ದೇಶಪೂರ್ವಕವಾಗಿ ಅವನ್ನು ತಡವಿಕೊಂಡಂತಿಲ್ಲ. ಆದರೆ ವಚನಗಳ ವೈಭವೀಕರಣದಲ್ಲಿಯೇ ಇವು ಮುಳುಗಿಹೋದಂತಿವೆ. ಇಲ್ಲಿ ಚಿದಾನಂದಮೂರ್ತಿಯವರಂತಹ ಹಿರಿಯ ಸಂಶೋಧನ ವಿದ್ವಾಂಸರು ಬಸವಣ್ಣನ ವಂಶಸ್ಥರ ಜಾಡು ಹಿಡಿದು ಹೊರಟರೆ, ಉಳಿದ ಕೆಲವರು ಆತನ ಹುಟ್ಟು, ಮದುವೆ, ಸಾವು(ಕೊಲೆಯ) ಕುರಿತು ಕಾಲಬದ್ಧ ಶೋಧನೆಗೆ ತೊಡಗಿದ್ದಾರೆ. ಇನ್ನೂ ಕೆಲವರು ಬಿಜ್ಜಳನ ಕೊಲೆಯಾಯ್ತು ಎಂದು ಕೈ ತೊಳೆದುಕೊಂಡಿದ್ದಾರೆ. ಆದರೆ ಇವರೆಲ್ಲರಿಗಿಂತ ಭಿನ್ನವಾಗಿ ಆಲೋಚಿಸಿ ಒಂದು ನಿಜವಾದ ಚರ್ಚೆಗೆ ಗ್ರಾಸವಾಗಿರುವವರು ಎ. ಕೆ. ರಾಮಾನುಜನ್ ಎನ್ನಿಸುತ್ತದೆ. ಅವರ 'ಸ್ಪೀಕಿಂಗ್ ಆಫ್ ಶಿವ'ದ ಕನ್ನಡಾನುವಾದವನ್ನು (ಚಂದ್ರಶೇಖರ ನಂಗಲಿ) ನಾನಿಲ್ಲಿ ಮುಖ್ಯವಾಗಿಟ್ಟುಕೊಂಡಿದ್ದೇನೆ.

ತಮ್ಮ ಪ್ರಸಿದ್ಧ ಕೃತಿ 'ಸ್ಪೀಕಿಂಗ್ ಆಫ್ ಶಿವ'ದ ಪ್ರಸ್ತಾವನೆಯಲ್ಲಿ ಎ. ಕೆ. ರಾಮಾನುಜನ್‌ರವರು ಇದೇ ವಚನವನ್ನು 'ದೇಹ ಮತ್ತು ದೇವಾಲಯ' ಎನ್ನುವ ನೆಲೆಯಲ್ಲಿಯೇ ಗ್ರಹಿಸುತ್ತಾರೆ. ಈ ವಚನ ಅವರಿಗೆ ಧಾರ್ಮಿಕ ಭಾವಗೀತಾತ್ಮಕ ಶರೀರದಂತೆ ಕಂಡಿದೆ. ಆದರೆ ನನಗೆ ಅದು 'ನಿರ್ಭಾವ ಗೀತಾತ್ಮಕ ಅಶರೀರ (ನಿರ್ಜೀವ) ಸ್ಥಾವರ'ದಂತೆಯೇ ಕಾಣಿಸುತ್ತದೆ, ಇರಲಿ. ಮುಂದುವರೆದು ಅವರು ಹೇಳುವುದನ್ನು ನೋಡಿ : ''ವೀರಶೈವಧರ್ಮವೆಂದು ಕರೆಯಲ್ಪಟ್ಟ ಬಂಡಾಯ ಅಥವಾ ಪ್ರತಿಭಟನಾತ್ಮಕ ಚಳವಳಿಯ ಹಲವು ವೈಶಿಷ್ಟ್ಯಗಳು, ಬಹುಮುಖಿ ಆಶಯುಗಳು ಮತ್ತು ವೈರುಧ್ಯಗಳನ್ನು ಮೇಲಿನ ವಚನವು ಬಹು ಸಮರ್ಥವಾಗಿ ನಾಟ್ಯೀಕರಿಸಿದೆ.''

ಈ ವಚನಕ್ಕೆ ಸಂಬಂಧಿಸಿದ ಅವರ ಮಾತುಗಳಿವು :

''ಸಾಂಪ್ರದಾಯಿಕ ಶೈಲಿಯಲ್ಲಿ ನಿರ್ಮಾಣಗೊಂಡಿರುವ ಭಾರತೀಯ ದೇವಾಲಯಗಳು ಮನುಷ್ಯ ಶರೀರದ ವಾಸ್ತು ಪ್ರತಿಮೆಗಳಾಗಿವೆ.... ನೆಲದಿಂದ ಮೇಲೇಳುವ ದೇವಾಲಯವು ಮನುಷ್ಯನ ಹುಟ್ಟಿನಂತೆಯೇ ಕ್ಷೇತ್ರ ಬೀಜ ಸಂಬಂಧವನ್ನು ಹೋಲುತ್ತದೆ. ಆದ್ದರಿಂದಲೇ ಮನುಷ್ಯನ ಅಂಗಾಂಗಗಳ ಹೆಸರುಗಳನ್ನೇ ದೇವಾಲಯದ ವಿವಿಧ ಭಾಗಗಳಿಗೆ ಇಡಲಾಗಿದೆ.'' ಇಲ್ಲಿ ಹಸ್ತ, ಪಾದ, ನೆತ್ತಿ (ಕಳಸ), ಅಂಗಭೋಗ, ಗರ್ಭಗುಡಿ ಇತ್ಯಾದಿ ಹೆಸರುಗಳೇನೋ ನಿಜ. ಒಂದು ರೀತಿಯಲ್ಲಿ ಸ್ಥಾವರಗಳಿಗೆಲ್ಲಾ ಜೀವ ತುಂಬುವ ಬಸವಣ್ಣನ ಆದರ್ಶದ ಕನಸು, ಅದನ್ನು ಜಂಗಮಗೊಳಿಸುವ ಬಸವಣ್ಣನ ಯೋಜನೆಯೇನೋ ಸರಿ ಇರಬಹುದು. ಇದು ವಚನಗಳ ಮಹತ್ತಾದ ಆಶಯವೂ ಆಗಿರಬಹುದು. ಆದರೆ ಆ ಕಾಲದ ಚಾರಿತ್ರಿಕ ಸಂದರ್ಭಗಳೇ ಬೇರೆ ಇವೆಯಲ್ಲ, ಆ ಮುಖಗಳನ್ನು ನೋಡುವುದು ಹೇಗೆ ? ವಚನಗಳನ್ನು ಬರೀ ವಚನಗಳಾಗಷ್ಟೇ ನೋಡಿದರೆ ಬಸವಣ್ಣ ಮತ್ತು ಆ ಕಾಲದ ಸಮಕಾಲೀನ ಶರಣರು ಸಮಾಜ ಸುಧಾರಕರು, ಕ್ರಾಂತಿಯೋಗಿಗಳು, ಧಾರ್ಮಿಕ ಚಳವಳಿಗಾರರು ಎಂದೆಲ್ಲಾ ಎನ್ನಿಸಿಕೊಳ್ಳಲು ಹೇಗೆ ಸಾಧ್ಯವಾಗುತ್ತದೆ ? ವಚನಕ್ಕೂ ಅಂದಿನ ಸಮಾಜಕ್ಕೂ ನೇರ ಸಂಬಂಧಗಳು ಇರಬೇಕಲ್ಲ. ಹೀಗೆ ನೋಡಲು ಎ. ಕೆ. ರಾಮಾನುಜನ್ ಅವರಿಗೆ ಇಲ್ಲಿ ಸಾಧ್ಯವಾಗಿಲ್ಲ. ಒಂದು ವೇಳೆ ಹಾಗೆ ನೋಡಲು ಸಾಧ್ಯವಾಗಿದ್ದರೆ ಸಾಂಪ್ರದಾಯಿಕ ಶೈಲಿಯಲ್ಲಿ ವಿಭಜಿಸಲ್ಪಟ್ಟಿರುವ ಭಾರತೀಯ ಮನುಷ್ಯ ಜಾತಿ (ವರ್ಣ)ಗಳು ಮನುಷ್ಯ ಶರೀರದ ಅಸಮಾನತೆಯ ಜೀವಂತ ಪ್ರತಿಮೆಗಳಾಗಿವೆ ಎಂದು ಹೇಳುತ್ತಿದ್ದರೇನೋ ?

ಈ ವಚನದ 'ದೇಹ ಮತ್ತು ದೇವಾಲಯ' ಸಂದರ್ಭದಲ್ಲಿ ರಾಮಾನುಜನ್ ತಾಳುವ ನಿಲುವು ವಾಸ್ತವವನ್ನು ಬಿಚ್ಚಿಡಲಾರದು. ಆದರೆ ದೇಹದ ಪ್ರಾಮುಖ್ಯತೆಯನ್ನು ಪ್ರತಿಪಾದಿಸುವ ಆಧ್ಯಾತ್ಮಿಕದ ನಿಲುವಿಗಷ್ಟೇ ಸೀಮಿತವಾಗಿಬಿಡುತ್ತದೆ. ಇಲ್ಲಿ ಭೌತಿಕದ ಪ್ರಶ್ನೆಯೇ ಬರಲಾರದು. ''ನಾವಿಲ್ಲಿ ಸಮಕಾಲೀನ ಲಿಂಗಾಯತ ಸಮಾಜದ ಮಾನವ ಶಾಸ್ತ್ರೀಯ ನೆಲೆಯಿಂದ ಚಿಂತನೆಗೆ ತೊಡಗದೆ, ವಚನಗಳೆಂಬ ಪಠ್ಯಗಳನ್ನು ನಿರ್ದಿಷ್ಟ ಸಂದರ್ಭವೊಂದರಲ್ಲಿಟ್ಟು ವರ್ಣಿಸಬೇಕೆಂಬ ಉಮೇದಿಗೊಳಗಾಗದೆ ಮುಕ್ತವಾಗಿರ ಬೇಕಾಗುತ್ತದೆ'' ಎಂದು ರಾಮಾನುಜನ್ ಹೇಳಿಕೊಳ್ಳುತ್ತಾರೆ. ಆದರೆ ಸ್ವತಃ ಅವರಿಗೇ ಇಲ್ಲಿ ಸಂಪೂರ್ಣ ಮುಕ್ತವಾಗಿರಲು ಸಾಧ್ಯವಾಗಿಲ್ಲ.

ಇನ್ನೊಂದು ಕಡೆ ಸಾಮಾಜಿಕ ಶ್ರೇಣಿಯಲ್ಲಿ ಮೇಲುಸ್ತರವನ್ನು ಕೆಳಸ್ತರಕ್ಕೆ ಸ್ಥಿತ್ಯಂತರಗೊಳಿಸಿದೆ ಎನ್ನುವ ಮಾತು ಬರುತ್ತದೆ. ಇದು ಸರಿಯಾದ ವಿವರಣೆಯಲ್ಲ. ಬಸವಣ್ಣನಂತಹ ಶರಣರು ಮೇಲುಸ್ತರದಿಂದ ಕೆಳಸ್ತರವನ್ನು ನೋಡಿ, ಕೆಳಸ್ತರವನ್ನು ತನ್ನ ಮೇಲುಸ್ತರಕ್ಕೆ ಮತಾಂತರಿಸಿಕೊಂಡಿರುವುದು ತಿಳಿದೇ ಇದೆ. ಆ ಮೂಲಕ ವೀರಶೈವ 'ಧರ್ಮ ಪ್ರಭುತ್ವ'ವನ್ನು ಇನ್ನಷ್ಟು ಗಟ್ಟಿಗೊಳಿಸಿಕೊಳ್ಳಲು ಇಲ್ಲಿ ಸಾಧ್ಯವಾಗಿದೆಯೆನ್ನಿ. ಈ ಸಾಮಾಜಿಕ ಚಲನೆ ಇರುವುದೇ ಕೆಳಸ್ತರದಿಂದ ಮೇಲುಸ್ತರದ ಪ್ರಕ್ರಿಯೆಯೆಡೆಗೆ. ಇದೇ ಇಲ್ಲಿ ನಡೆದಿರುವುದು.

ನಾನು ಮತ್ತೆ ವಚನದ ವೀರಶೈವ ಸಂದರ್ಭಕ್ಕೆ ಬರುತ್ತೇನೆ. ಆ ಕಾಲದಲ್ಲಿ ವೀರಶೈವ ಒಂದು ಚಳವಳಿಯಾಗಿ ರೂಪುಗೊಳ್ಳಬೇಕಾದರೆ ಅದಕ್ಕೆ ಸ್ಥಳೀಯ ಸಾಮಂತಶಾಹಿಯ ಆಶ್ರಯವೂ ದಕ್ಕಿದೆ. ಬಸವಣ್ಣನೇ ಒಂದು ರಾಜ್ಯದ ಸಂಪತ್ತಿನ (ಭಂಡಾರದ) ಸ್ಥಾನದಲ್ಲಿ ಇದ್ದಿರಬೇಕಾದರೆ ಆ ಹೊತ್ತಿನ ಆರ್ಥಿಕ ಸಂರಚನೆಯೂ ವೀರಶೈವ ಧರ್ಮವನ್ನು ಇನ್ನೂ ಉಚ್ಛ್ರಾಯಗೊಳಿಸಿರಬೇಕು. ಬಿಜ್ಜಳ ದೊರೆ ಮೂಲತಃ ಶೈವನಾಗಿರುವುದೂ ಇದಕ್ಕೆ ಕಾರಣವಾಗಿದೆ. ಧರ್ಮದೊಂದಿಗೆ ಅನುಭವ ಮಂಟಪವನ್ನು ಕಟ್ಟಲು (ಸ್ಥಾವರವಲ್ಲದಿದ್ದರೂ ಜಂಗಮರೂಪದಲ್ಲಿ) ಇಲ್ಲಿ ಶಕ್ಯವಾಗಿದೆ ಅನ್ನಿಸುತ್ತದೆ. ಕೆಳ ವರ್ಗಗಳ ವೃತ್ತಿಯಿಂದ ದೊರೆಯಬಹುದಾಗಿದ್ದ ಕಾಯಕ ಪ್ರಧಾನ ದತ್ತಿ, ದಾನ, ದಾಸೋಹಗಳ ರೂಪದ ವಸ್ತುಗಳು ಮೇಲ್ವರ್ಗಗಳ ಜಂಗಮ ಸಮಾಜಕ್ಕೆ ಮುಡಿಪಾಗಿ ದಕ್ಕಿರಬೇಕು. ಇಂಥವರನ್ನು ತಮ್ಮೆಡೆಗೆ ದೀಕ್ಷೆ, ಮತಾಂತರಗೊಳಿಸಿಕೊಳ್ಳುವ ಮೂಲಕ ಜಂಗಮ ಸ್ವರೂಪವನ್ನು ಸಮಾನಾಂತರಿಸಿಕೊಂಡಿರುವ ಸಾಧ್ಯತೆಗಳೂ ಇವೆ. ಆ ಮೂಲಕ ವೀರಶೈವವನ್ನಿಲ್ಲಿ ಎತ್ತರಿಸಿಕೊಂಡಿರಬಹುದು.

ಕಾಯಕವೇ ಪ್ರಧಾನವಾಗುವ ಇಲ್ಲಿನ ಆಶಯದ ಒಳಗುಟ್ಟೇನು ? ಕಾಯಕಕ್ಕೆ ದುಡಿಮೆಯೇ ಪ್ರಧಾನವೆನ್ನಬಹುದಾದರೆ ಈ ದುಡಿಮೆಯ ಲಾಭ ಯಾರಿಗೆ ಮತ್ತು ಎಲ್ಲಿಗೆ ಸಲ್ಲುತ್ತದೆ ಎನ್ನುವುದೂ ಮುಖ್ಯವಾಗಬೇಕಿದೆ. ಅದಿನ್ನೂ ರಾಜ್ಯಶಾಹಿಯ ಕಾಲ. ಆದರೆ ಆ ಆಶ್ರಯದಿಂದ ಇವರು ಹೊರಬಂದಿರಬಹುದಷ್ಟೆ. ಕೆಳ ಸಮುದಾಯಗಳ ರಾಜರ ಆಳ್ವಿಕೆ ಮತ್ತು ಮೇಲ್ವರ್ಗಗಳ ಪುರೋಹಿತಗಿರಿ ಎರಡೂ ಪೂರಕವಾಗಿ ಒಂದು ಸಾಮ್ರಾಜ್ಯದ ಒಳಗೆ ಇರುವಾಗ ಇಲ್ಲಿ ಸಮುದಾಯಗಳು ಇವನ್ನು ಸೇರುವುದು, ಇಲ್ಲವೆ ಎದುರು ಹಾಕಿಕೊಳ್ಳುವುದು ಹೇಗೆ ಸಾಧ್ಯವಾಗಿದೆ ಎನ್ನುವುದೇ ಆಶ್ಚರ್ಯ. ಹಲವುಮಟ್ಟಿಗೆ ಇದು ಯಶಸ್ವಿಯಾಗಿದೆ. ಅದೂ ಮಾದಪ್ಪ ಮಂಟೇದರ ಸಾಮುದಾಯಿಕ ಪ್ರತಿನಿಧೀಕರಣದ ಮೂಲಕ ಮೇಲಿನ ಎರಡೂ ಪೂರಕ ಸಂದರ್ಭಗಳನ್ನು ಧಿಕ್ಕರಿಸಿ ಒಂದು ಪ್ರತ್ಯೇಕ ಹಾದಿಯನ್ನು, ಪ್ರತ್ಯೇಕ ಒಕ್ಕಲು ಕೇಂದ್ರಿತ ಮಠ ನೆಲೆಗಳನ್ನು, ಕಂಡುಕೊಳ್ಳುವುದೊಂದೇ ಇವುಗಳ ಮೂಲ ಅಸ್ತಿತ್ವವಾಗಿರಬೇಕು. ಈ ಅಸ್ತಿತ್ವಕ್ಕೆ ಮಾದಪ್ಪ-ಮಂಟೇದರು (ಮಾದಿಗ-ಹೊಲೆಯರು) ಗಟ್ಟಿಯಾಗಿ ನಿಂತಿರುವ ಸಾಧ್ಯತೆಗಳಿವೆ. ಇದಕ್ಕೆ ಅವರು ಪಡೆದ ಒಕ್ಕಲು ಮಠ ಮನೆಗಳೇ ಸಾಕ್ಷಿ. ಈ ಮಠ ಮನೆಗಳ ಸ್ಥಾವರವನ್ನು ಬಸವಣ್ಣನವರು ಪ್ರಶ್ನಿಸಿರಬಹುದೇ ಎನ್ನುವ ತಾತ್ವಿಕ ಅನುಮಾನ ನನ್ನದು. (ವಚನದ ಕೊನೆಯ ಸಾಲು 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ').



ಮೇಷ್ಟ್ರ ನಿಮ್ಮನ್ನ ಕರೆಸಿದ್ದು ಯಾಕೆಂದ್ರೆ, ಕರೆಕ್ಟಾಗಿ ಇದು ಎಷ್ಟನೇ ಸ್ವಾತಂತ್ರ್ಯ ಹೋರಾಟದ ಕಥೆ ಎಲ್ಲಾ ಸೇರ್ಸಿ ಒಂದು ಭಾಷಣ ಬರ್ಕೊಡಿ ಅನ್ನೋಕೆ!

ತಾತ್ವಿಕ ದೃಷ್ಟಿಯಿಂದ ವೀರಶೈವ ಧರ್ಮ ದೇವಾಲಯವನ್ನು ನಿರಾಕರಿಸಿತ್ತು ಎನ್ನುತ್ತಾರೆ ಡಾ॥ ಎಚ್. ತಿಪ್ಪೇರುದ್ರ ಸ್ವಾಮಿಗಳು. ಈ ಮೂಲಕ ವೀರಶೈವ ಧರ್ಮವನ್ನು ಹೊರತುಪಡಿಸಿ ಉಳಿದ ಎಲ್ಲಾ ಮತಧರ್ಮಗಳು ದೇವಾಲಯ ಮತ್ತು ಗುಡಿಗಳ ನಿರ್ಮಾಣವನ್ನು ಪ್ರೋತ್ಸಾಹಿಸಿದ್ದವು ಎನ್ನುವುದು ಅವರ ಸ್ಪಷ್ಟ ನಿಲುವು. (ಕೆಳ ಸಮುದಾಯಗಳ ಮಠ ಮನೆಗಳಿಗೂ ಈ ಮಾತು ಆರೋಪವಾಗಿ ಅನ್ವಯಿಸುತ್ತದೆ). ಇಲ್ಲಿ ವೀರಶೈವ ಧರ್ಮಕ್ಕೆ ಹೊರತಾದ ಎಲ್ಲಾ ಮತಧರ್ಮಗಳು ಎಂದರೆ ಯಾವುವು ? ಬ್ರಾಹ್ಮಣ ಅಗ್ರಹಾರ ಮಠಗಳಾಗಿದ್ದರೆ ವೀರಶೈವ ಇದಕ್ಕೆ ವಿರುದ್ಧವಾಗಿ ನಿರಾಕರಿಸುವ ಪ್ರತಿಕ್ರಿಯೆ ತೋರಿತು. ಜೈನಮತವನ್ನು ಹತ್ತಿಕ್ಕುವ ಮೂಲಕ ದಕ್ಷಿಣದಲ್ಲಿ ವೀರಶೈವ ಪ್ರಾಬಲ್ಯ ಪಡೆಯಿತು. ಅಷ್ಟೇ ಅಲ್ಲ, ಬಹುಪಾಲು ಜೈನ ಕೇಂದ್ರಗಳನ್ನು ವೀರಶೈವೀಕರಿಸಿದ (ಶಿವಲಿಂಗ ಸ್ಥಾಪನೆ) ಚರಿತ್ರೆಯೂ ನಮ್ಮ ಕಣ್ಣೆದುರು ಹೆಚ್ಚು ಮೌನವಾಗಿದೆ. ಇದು ಇತರೆ ಧರ್ಮಗಳ ಮೇಲೆ ಮಾಡಿರುವ ಸ್ಥಾವರಗಳ ಆಕ್ರಮಣವಲ್ಲದೆ ಇನ್ನೇನು ?

ಒಂದೆಡೆ ಕೆಳಸಮುದಾಯದ ಮಠ ಮನೆಗಳನ್ನು ಸ್ಥಳೀಯ ಜನಪದ ಮಾಂತ್ರಿಕ ದೇವ-ದೇವಿಯರನ್ನು ನಿರಾಕರಿಸುವ ಮಠೀಯ ಮನೋಧರ್ಮವನ್ನು ಈ 'ವೈಚಾರಿಕ' ಎನ್ನುವ ಧರ್ಮ ರೂಢಿಸಿಕೊಂಡಿದ್ದರ ಸತ್ಯಗಳೆಲ್ಲಿ? ಬಸವಣ್ಣನ ವಚನಗಳಲ್ಲೇ ಈ ನಿರಾಕರಣೆ ಇದೆ. ಇನ್ನು ''ಉಳ್ಳವರು ಶಿವಾಲಯ ಮಾಡಿಹರು'' ಎಂದರೆ ಉಳ್ಳವರು ಯಾರು ? ವೀರಶೈವ ಧರ್ಮದ ಒಪ್ಪಿತಗೊಂಡ ಮೇಲ್ವರ್ಗವೇ ಇರಬೇಕು. 'ನಾನೇನು ಮಾಡಲಿ ಬಡವನಯ್ಯ' ಎನ್ನುವಲ್ಲಿ ಬಸವಣ್ಣ ಬಡವರ ಧ್ವನಿಯಾಗಿ ಮಾತನಾಡುತ್ತ ಉಳ್ಳವರ ಸ್ಥಾಪಿತ ಶಿವಾಲಯವನ್ನು ಇಡಿಯಾಗಿ ಒಪ್ಪಿಕೊಳ್ಳಲೂ ಆಗದೆ, ನಿರಾಕರಿಸಲೂ ಆಗದೆ ಕೊನೆಗೆ 'ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರ ಹೊನ್ನ ಕಲಶವಯ್ಯಾ.... ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎನ್ನುವ ಮೂಲಕ ಕೆಳವರ್ಗದವರನ್ನು ಸದಾ ಕಾಯಕ (ಶ್ರಮ) ಜೀವಿಗಳಾಗಿರುವಂತೆ, ಜಂಗಮಿಗಳಾಗಿರುವಂತೆ, ಶಿವಭಕ್ತರಾಗಿರುವಂತೆ ಕಾಪಾಡಿಕೊಂಡು ಬಂದಿರುವ ಈ ಧರ್ಮದ ಒಳಗುಟ್ಟುಗಳೇನು ? ಈ ಸೂಕ್ಷ್ಮಗಳನ್ನು ತಿಪ್ಪೇರುದ್ರ ಸ್ವಾಮಿಗಳು ತಿಳಿಸಲಾರರು. ಒಂದು ಸ್ವಧರ್ಮವನ್ನು ತಾತ್ವಿಕವಾಗಿ ಒರೆಗೆ ಹಚ್ಚದೆ, ಆಲೋಚಿಸದೆ, ಹಿಡಿಗಂಟಾಗಿ ಇಟ್ಟುಕೊಂಡಿರುವ ಬಗೆಯಿದು ಎನ್ನಿಸುತ್ತದೆ. ಅನಂತರ ವೀರಶೈವ ಮತಾವಲಂಬಿಗಳಾಗಿದ್ದ ಜನ ದೇವಾಲಯಗಳನ್ನು ತಿರಸ್ಕರಿಸದೆ ಉದಾರ ದೃಷ್ಟಿಯಿಂದ ಅವುಗಳನ್ನು ಪ್ರೋತ್ಸಾಹಿಸಿದರು. ಜೊತೆಗೆ ಆಳುವ ವರ್ಗವು ಪರಮತ ಸಹಿಷ್ಣುತೆಯ ದೃಷ್ಟಿಯನ್ನು ಇಟ್ಟುಕೊಂಡಿದ್ದಿತೆಂದು ಭಾವಿಸುತ್ತಾರೆ. ಇಲ್ಲಿ ಆಳುವ ವರ್ಗದ ಪರಮತ ಸಹಿಷ್ಣುತೆಯೆಂದರೆ ಕೆಳವರ್ಗಗಳು ಅಧೀನವಾಗಿಯೇ ಬದುಕಬೇಕು ಎನ್ನುವುದನ್ನು ಇದು ಧ್ವನಿಸುತ್ತದೆಯಲ್ಲವೆ ?

ಹೆಚ್ಚೇಕೆ ೧೨,೧೩ನೇ ಶತಮಾನದಲ್ಲಿಯೇ ಅಪಾರ ಗುಡಿ, ಮಠ, ದೇವಾಲಯ ಕೇಂದ್ರಗಳು ನಿರ್ಮಾಣವಾಗಿವೆ. ದೇವಾಲಯ ನಿರ್ಮಾಣವೊಂದರ ಉಚ್ಛ್ರಾಯ ಕಾಲಘಟ್ಟವಿದು. ಕೆಳ ಸಮುದಾಯಗಳು ತಮ್ಮ ತಮ್ಮ ಅಸ್ತಿತ್ವಕ್ಕಾಗಿ ಈ ಬಗೆಯಲ್ಲಿ ಹೆಣಗುತ್ತಿರುವಾಗ ವೀರಶೈವ ಧರ್ಮದ ಊಳಿಗ ವರ್ಗ ಈ ಮಠ ದೇವಾಲಯಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿರಬೇಕು. ಈ ಸಂಕರ ಸ್ಥಿತಿಯನ್ನು ಯಾವ ವಿದ್ವಾಂಸನೂ ಇದುವರೆಗೆ ಬಾಯಿಬಿಟ್ಟು ಹೇಳಿದಂತಿಲ್ಲ. ಈ ದೊಡ್ಡ ಅಂತರದೊಳಗೆ ಕಾಲಿರಿಸಿಕೊಂಡು ನಮ್ಮ ಬಹುಪಾಲು ಕನ್ನಡದ ವಿದ್ವಾಂಸರು ಮಧ್ಯಕಾಲೀನ ಚರಿತ್ರೆಯನ್ನು ಬರೆಯಹೊರಟಿದ್ದಾರೆ. ಈ 'ಕಂದರ' ಅವರನ್ನು ಆಹುತಿ ತೆಗೆದುಕೊಳ್ಳದೆ ಬಿಟ್ಟೀತೇ ? ೧೨, ೧೩ನೇ ಶತಮಾನದ ಅದೇ ಸಂಕರ ಸ್ಥಿತಿ ಇಂದು ಬೇರೆ ಬೇರೆ ಸ್ವರೂಪಗಳಲ್ಲಿ ಮರುಕಳಿಸುತ್ತಿದೆ ಎನ್ನಿಸುತ್ತದೆ. ಇಂದು ಕೆಳ ಸಮುದಾಯಗಳೆಲ್ಲ ರಾಜಕೀಯವಾಗಿ ಗುರುತಿಸಿಕೊಳ್ಳಲು ಜಾತಿ, ಮಠ, ಧರ್ಮಗಳೆಂದು ಮತ್ತೆ ಸ್ಥಾವರಗಳ ಪೀಠ, ಜಗದ್ಗುರು, ಸಂಘ, ಸಂಸ್ಥೆಗಳನ್ನು ನೆಚ್ಚಿ ಹೊರಟಿರುವುದು ಏನನ್ನು ಸೂಚಿಸುತ್ತದೆ ?

ನಾನಿಲ್ಲಿ ಮುಖ್ಯವಾಗಿ ಏನು ಹೇಳುತ್ತಿದ್ದೇನೆಂದರೆ, ಬಸವಣ್ಣ ನಿರಾಕರಿಸುವ ಸ್ಥಾವರದ ಪರಿಕರಗಳು ಊಳಿಗದವು ಎನ್ನಿಸುವುದಿಲ್ಲ. ಅವೆಲ್ಲ ಕೆಳಸಮಾಜಗಳ ಜನಮೂಲದವು. ಇವು ಯಾವ ಸಾಮ್ರಾಜ್ಯಗಳನ್ನೂ ನಿರ್ಮಿಸಹೊರಟಿಲ್ಲ. ಸಾಮ್ರಾಜ್ಯಗಳಿಗೆ ಅಧೀನವಾಗಿಯೂ ಬದುಕಲು ಹೊರಟಿಲ್ಲ. ಇವುಗಳ ಮೂಲ ಉದ್ದೇಶ ಈ ಹಿಂದೆ ಹೇಳಿದಂತೆ ಒಕ್ಕಲು ಕೇಂದ್ರಗಳನ್ನು ಸ್ಥಾಪಿಸುವುದೇ. ಆ ಮೂಲಕ ಉತ್ಪಾದಕತೆಯನ್ನು ಸ್ಥಳೀಯವಾಗಿಯೇ ಹಿಗ್ಗಿಸುವುದು. ಪಶುಪಾಲನೆ, ಕೃಷಿಗೆ ಸಂಬಂಧಿಸಿದ 'ಉತ್ಪಾದಕಾ ಮಾಟ'ದ ತಂತ್ರಗಳಿವು. ಜನಪದ ಸಾಂಸ್ಕೃತಿಕ ನೆಲೆಗಳಂತೆ ಕೆಲಸ ಮಾಡುತ್ತಿದ್ದ ಇವನ್ನು ಮೇಲ್ವರ್ಗಗಳು ಆಕ್ರಮಿಸಿಕೊಂಡು ತಮ್ಮ ಊಳಿಗ ಪ್ರಭುತ್ವದ ನೆಲೆಗಳನ್ನಾಗಿ ಮಾರ್ಪಡಿಸಿಕೊಂಡಿರಬೇಕು. ಕೆಳಸಮುದಾಯಗಳಿಗೆ ಅನಿವಾರ್ಯವಾಗಿದ್ದ ಈ ಸ್ಥಾವರದ ಸಾಂಸ್ಕೃತಿಕ ನೆಲೆಗಳನ್ನು ಬಸವಣ್ಣ ವಿರೋಧಿಸಿರುವ ಎಲ್ಲಾ ಸಾಧ್ಯತೆಗಳಿವೆ. ಬಸವಣ್ಣನವರ ಈ ಉಳ್ಳವರು ವೈದಿಕ ಬ್ರಾಹ್ಮಣರು, ಜೈನರು ಆಗಿರಲಾರರು. ವೀರಶೈವ ಧರ್ಮದೊಳಗೇ ಇರುವ ಒಂದು ಊಳಿಗ ವರ್ಗ ಆಗಿರಬೇಕು. ''ಆ ವರ್ಗದವರು

ಶಿವಾಲಯಗಳನ್ನು ಕಟ್ಟುತ್ತಾರೆ. ಆದರೆ ಕಟ್ಟಲು ಸಾಮರ್ಥ್ಯವಿಲ್ಲದ ನಾನು ಬಡವ. ಹಾಗಾಗಿಯೇ ಎನ್ನ ಕಾಲೇ ಕಂಭ, ದೇಹವೇ ದೇಗುಲ, ಶಿರ ಹೊನ್ನ ಕಲಶ'' ಎಂದು ಬಡವರ ಮನಸ್ಸಿನ 'ಭಿತ್ತಿ' ಎಂಬಂತೆ, ಅವರ ಪ್ರತಿನಿಧಿ ತಾನೆಂಬಂತೆ ಮಾತನಾಡುವುದು, ಆ ಮೂಲಕ ಬಡವರ ಪ್ರತಿಕ್ರಿಯೆಯನ್ನು ಮೌನಗೊಳಿಸುವುದು. ಬಡವರ ಶ್ರಮಕ್ಕೆ, ಜ್ಞಾನಕ್ಕೆ ಕ್ರಿಯಾಶೀಲವಾಗಬಹುದಾದ (ಜಂಗಮವೆನ್ನಿ) ದೇಹವನ್ನೇ ಇನ್ನೊಂದು ರೂಪದಲ್ಲಿ ಸ್ಥಾವರಗೊಳಿಸುವುದು ನಿಷ್ಕ್ರಿಯಗೊಳಿಸುವುದರ (ಅಂದರೆ ಇಲ್ಲಿ 'ಲಿಂಗ' ಎನ್ನುವ ನಿರ್ಜೀವ ವಸ್ತುವನ್ನು ದೇಹದಲ್ಲಿ ಅಥವಾ ಆತ್ಮದಲ್ಲಿ 'ಧರಿಸುವುದು' ಎಂದರೆ ಧರಿಸಿದ ಆ ಭಾಗವನ್ನು ಆ ಮೂಲಕ ಸ್ಥಾವರಗೊಳಿಸುವುದೆಂದೇ ಅರ್ಥ) ಹಿಂದಿನ ಬಸವಣ್ಣನ ಲಿಂಗಸಮಾಜದ ಆಶಯಗಳೇನಿದ್ದಿರಬಹುದು ? ಅಥವಾ ಸ್ಥಾವರಕ್ಕಳಿವುಂಟು ಎನ್ನುವ ಮೂಲಕ ನೇರವಾಗಿ ಮೇಲ್ವರ್ಗಗಳ ಸ್ಥಾವರ ಪ್ರತಿಮೆಗಳನ್ನು ನಿರಾಕರಿಸದೆ ಕೆಳಸಮುದಾಯಗಳ ಹೊಸದಾಗಿ 'ಕಟ್ಟುವ ಕ್ರಿಯೆ'ಗೆ ಬಸವಣ್ಣನ ಈ ವಚನ ಅಡ್ಡಿಯಾಗಿರುವ ಸಾಧ್ಯತೆಗಳಿವೆ. ಮಾರಿ-ಮಸಣಿ ದೈವಗಳ ತಿರಸ್ಕಾರ, ಹಿಂಸೆಯ ತಿರಸ್ಕಾರ, ತನ್ನ ಮೇಲ್‌ರಚನೆಗೆ ಲಿಂಗಾಂತರಗೊಳಿಸುವ ವೀರಶೈವ ಸಾಂಸ್ಕೃತೀಕರಣದ ಧರ್ಮ ರಾಜಕಾರಣ, ತನ್ನ ವರ್ಗದ ಪುರೋಹಿತಗಿರಿಯ ಮೂಲಕ ವೈದಿಕ ಆಚರಣೆಗಳ ಇಡಿಯಾದ ಅ – ತಿರಸ್ಕಾರ ಇದೆಲ್ಲ ಏನನ್ನು ಸೂಚಿಸುತ್ತದೆ ?

ಈ ಬಸವಣ್ಣ ಲಿಂಗ ಜಂಗಮದ (ಸ್ಥಾವರ ಜಂಗಮ) ಕುರಿತು ಕೆಲವು ವಚನಗಳಲ್ಲಿ ಮಾತಾಡುತ್ತಾನೆ. ಉದಾಹರಣೆಗೆ, 'ಲಿಂಗವುಳ್ಳವರೆನ್ನ ಸಂಗಮನಾಥನೆಂಬೆ'; ಒಂದು ವೇಳೆ ಲಿಂಗ ಇರದೇ ಇರುವವರನ್ನು ಬಸವಣ್ಣ ಯಾವ 'ನಾಥ' ಎಂದಿರಬಹುದು ? ಲಿಂಗವನ್ನು, ಲಿಂಗವಂತರನ್ನು ಅನೇಕ ಪರೀಕ್ಷೆಗೆ ಒಳಪಡಿಸುವ ಮಂಟೇಸ್ವಾಮಿ ಒಮ್ಮೆ ಬಸವನ ಎದುರಲ್ಲೇ ಕುದಿಕುದಿವ ಹೆಂಡದಲ್ಲಿ ಲಿಂಗವನ್ನು ಅದ್ದಿತೆಗೆದು ಅದನ್ನು ಹೊಳಪಾಗಿಸುವ ಸಂದರ್ಭ ಮಂಟೇಸ್ವಾಮಿ ಕಾವ್ಯದಲ್ಲಿಯೇ ಬರುತ್ತದೆ. ಎಲ್ಲೆಲ್ಲಿ ವಚನಗಳು ಬುದ್ಧಿ ಪೂರ್ವಕವಾಗಿ ಮೌನವಹಿಸಿವೆಯೋ ಅಲ್ಲಲ್ಲಿ ಈ ಮೌಖಿಕ ಚರಿತ್ರೆಗಳು ದನಿ ಎತ್ತಿ ಮಾತಾಡಿವೆ. ಈಗ ಈ ಮಾತುಗಳನ್ನು ಕೇಳಿಸಿಕೊಳ್ಳುವ ಅನಿವಾರ್ಯತೆಯೂ ಬಂದಿದೆ. ಇಲ್ಲಿ ಲಿಂಗವಂತ ಶರಣರು ಎಷ್ಟೊಂದು ಕಪಟಿಗಳು, ಭಕ್ತಿ ಹೀನರು, ಚಾರಿತ್ರ್ಯವಿಲ್ಲದವರು ಎನ್ನುವುದನ್ನು ಮಂಟೇದರು ಒಮ್ಮೆ ಕಲ್ಯಾಣದಲ್ಲಿ ಬಸವಣ್ಣನೆದುರೇ ತೋರಿಸಿಕೊಡುತ್ತಾರೆ. ಇದು ಮೌಖಿಕ ಕಾವ್ಯದ ಸಂದರ್ಭ. ಇನ್ನು ಅಲ್ಲಮನ ವಚನವೂ ಬಸವಣ್ಣನ ವಚನಕ್ಕೆ ಪ್ರತಿವಚನವನ್ನು ನೀಡುವುದನ್ನು ನೋಡಿ –

''ಲಿಂಗವುಳ್ಳವರೆಲ್ಲ ಸಂಗಮನಾಥರಲ್ಲ
ಲಿಂಗ ಗುಣಗಳಿದ್ದವರು ಮಾತ್ರ ಸಂಗಮನಾಥರು.''

ಇದಕ್ಕೆ ಪೂರಕವಾಗಿ ಚೆನ್ನಬಸವಣ್ಣನದೂ ಒಂದು ವಚನವಿದೆ ;

''ಅಂಗದ ಮೇಲೆ ಲಿಂಗವುಳ್ಳದೆಲ್ಲವು ಸಂಗಮನಾಥನೆಂಬ
ಭಾವನೆ ಬಸವಣ್ಣಂಗಾಯಿತಲ್ಲದೆ ಎನಗೆ ಆ ಭಾವವಿಲ್ಲ ನೋಡಾ ।
ಲಿಂಗೈಕ್ಯ ಶರಣರ ಕಂಡರೆ ನಂಬಿ ನೆಚ್ಚಿ ಅವರ ಪಾದಕ್ಕೆರಗುವುದೆನ್ನ
ಮನವು''

– ಇದೆಲ್ಲ ಏನನ್ನು ಸೂಚಿಸುತ್ತದೆ ?

ಜಂಗಮಕ್ಕಳಿವಿಲ್ಲ ಎಂದ ಬಸವಣ್ಣನಿಗೆ ಸ್ಥಾವರವಾಗಬಹುದಾದ ಲೌಕಿಕದ 'ಲಿಂಗ'ದ ಕಲ್ಪನೆ ಅದ್ಹೇಗೆ ಮೂಡಿತೋ !? ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಶೈವ ಧರ್ಮದ ಮುಖ್ಯ ಉದ್ದೇಶವೇ ಶಿವನನ್ನು ಸ್ಥಾವರ ರೂಪದಲ್ಲಿ ಪೂಜಿಸುವುದು. ಹಾಗಿದ್ದರೆ ಈ ಏಕೋದೇವೋಪಾಸನೆಯ ತಾತ್ವಿಕತೆಯಾದರೂ ಏನು ? ಕೆಳಸಮುದಾಯಗಳಲ್ಲಿ ಈ ಶೈವ ಧರ್ಮವೇಕೆ ಗಟ್ಟಿಯಾಗಿ ನೆಲೆ ನಿಲ್ಲಲಿಲ್ಲ? ಇದ್ದರೂ ಈಗದು ಯಾವ ಸ್ವರೂಪದಲ್ಲಿದೆ ? ಈ ಹೊತ್ತಿನ ಕೆಳ ಸ್ವರೂಪದ ಸಮುದಾಯಗಳು ಕಟ್ಟಿಕೊಳ್ಳುತ್ತಿರುವ ಆರ್ಥಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂರಚನೆಯ ಪರಿಕರಗಳು ಎಂಥವು ? ಇದೇ ಸಂದರ್ಭದಲ್ಲಿ ಮೇಲ್ವರ್ಗ, ಧರ್ಮಗಳು, ಇವಕ್ಕೆ ಪ್ರತಿಕ್ರಿಯಿಸುವ ಬಗೆ ಹೇಗಿದೆ ? ಕೆಳಜಾತಿಗಳ 'ಜಾತಿ' ಪರಿಕಲ್ಪನೆ, ಮೇಲ್ವರ್ಗಗಳ ಜಾತ್ಯಾತೀತ ವರ್ಗಭಾವನೆ ಏನನ್ನು ಧ್ವನಿಸುತ್ತದೆ ? ದಲಿತರ ಮೇಲಾಗುವ ಮಧ್ಯಮ ವರ್ಗಗಳ ಶೋಷಣೆಗೆ ಈ ವೈಚಾರಿಕ ಧರ್ಮದಲ್ಲಿ ಈ ಹೊತ್ತು ಯಾವ ಬಗೆಯ ಉತ್ತರಗಳಿವೆ ? ಬಸವಣ್ಣನವರ ಈ ಒಂದು ವಚನ ಈ ಬಗೆಯಲ್ಲಿ ನನ್ನಲ್ಲಿ ಅನುಮಾನ, ಪ್ರಶ್ನೆಗಳನ್ನು ಹುಟ್ಟಿಸಿದೆ.

ನಿಂಗಪ್ಪ ಮುದೇನೂರು
ಸಂಶೋಧಕ, ಕನ್ನಡ ವಿಶ್ವವಿದ್ಯಾಲಯ - ಹಂಪಿ
ವಿದ್ಯಾರಣ್ಯ - ೫೮೩ ೨೭೬

## ಮೆಜೆಸ್ಟಿಕ್ ಗಣಪನಿಗೆ



ನಮ್ಮನ್ನೆಲ್ಲ ಕಾಯುತ್ತೀಯೆಂದು ತಿಳಿದಿರುವ
ಕಾಯಿಸುವ, ಬೇಯಿಸುವ
'ಅಮ್ಮಾ !' ಎಂದು ಆರ್ತತೆಯಿಂದ ಬೀದಿ ಬದಿಯಲಿ ನಿಂತು
ಸತಾಯಿಸುವ ಗಣಪತಿ !
ನಿನಗಿದೋ ಒಂದು ಅಹವಾಲು.
ಇಲ್ಲಿ ಮಾನವರಿಲ್ಲ. ಮಾನವ ತೊಗಲ ಹೊದ್ದ
ತಿರುಗಾಡುವ, ಗೋಲಿಲ್ಲದೆ ಫುಟ್ಬಾಲಾಡುವ
ಎಲ್ಲಿಗೋ ಓಡಾಡುವ, ಅತ್ತಿಂದಿತ್ತ, ಇತ್ತಿಂದತ್ತ
ಓಡೋಡಿ ದಾರಿಗಡ್ಡವಾಗುವ ಹೃದಯಹೀನ ಯಂತ್ರಗಳಿವೆ.
ಯಮನ ವಾಹನಗಳು ಗುರುಗುಡುತ್ತವೆ, ಮೈಯ ಹಾಯುತ್ತವೆ.
ಬುಸುಗುಡುತ್ತವೆ; ಕಕ್ಕುತ್ತವೆ ವಿಷದ ಹೊಗೆ
ಮುಸುಕಿ ಮನುಷ್ಯರೆ ಕಾಣಿಸುವುದಿಲ್ಲ,
ಕೆಂಪು, ಹಳದಿ, ಮರ್ಕ್ಯುರಿ ದೀಪಗಳು
ಯಮನ ಕಣ್ಣುಗಳಂತೆ ತಿವಿದು ಕುಕ್ಕುತ್ತಿವೆ
ಕಣ್ಣು ಕುಕ್ಕಿಸುತ್ತವೆ ಮನುಷ್ಯಗೆ ಕಾಣದಂತೆ.
ಓ ಗಣಪ ! ನಿನಗೆಲ್ಲಿಯಾದರೂ ಸಿಕ್ಕರೆ ಮನುಷ್ಯರನ್ನು ಕಾಣಿಸೋ ತಂದೆ ॥೧॥
ಮುಚ್ಚಿರುತ್ತವೆ ಮನೆಯ ಬಾಗಿಲುಗಳು ಕಾಯುತ್ತವೆ ಬಾಗಿಲುಗಳ ನಾಯಿಗಳು
ಎಚ್ಚರಿಸುತ್ತವೆ 'ನಾಯಿಗಳಿವೆ !' ಬೋರ್ಡುಗಳು
ನೆರೆಮನೆಯ ಅಳಲು ಇವಗೆ ಕೇಳುವುದಿಲ್ಲ
ಸತ್ತರೂ ತನ್ನ ಮನೆ ಬಾಗಿಲು ತೆಗೆಯುವುದಿಲ್ಲ.
ಇಲ್ಲಿ ಗುರ್ತಿನವರೆ ಇಲ್ಲ, ಎಲ್ಲರೂ ಕಳ್ಳರೆ ಎಂದು ಅನುಮಾನಿಸುವ ನಮಗೆ
ಗುರ್ತಿಲ್ಲದವರ ಪರಿಚಯ ಮಾಡಿಸೋ ತಂದೆ ॥೨॥
ಇಲ್ಲಿ ಕಳೆದುಕೊಳ್ಳುತ್ತಾರೆ ಎಲ್ಲವನ್ನೂ
ಪರ್ಸುಗಳನ್ನು, ಮುಗ್ಧ ನಗುವನ್ನು
ಗಳಿಸುತ್ತಾರೆ ಆದರೆ, ಕಳೆದುಕೊಳ್ಳುತ್ತಾರೆ
ಮೈಯನ್ನೂ ಸರ್ವೇಂದ್ರಿಯ ಸಂವೇದನೆಯನ್ನು
ಎಲ್ಲಕ್ಕಿಂತ ಹೆಚ್ಚಾಗಿ ಹೃದಯಗಳನ್ನು
ಒಬ್ಬರು ಇನ್ನೊಬ್ಬರನ್ನು ಕಳೆದುಕೊಂಡುಬಿಡುತ್ತಾರೆ ತಮ್ಮನ್ನು ತಾವು
ಕಳೆದುದ ಸಿಗುವಂತೆ ದಯಪಾಲಿಸೋ ತಂದೆ ॥೩॥
ಓಡೋಡಿ ಹಿಡಿಯುತ್ತಾರೆ ಸಿಟಿ ಬಸ್ಸುಗಳ
ಒಬ್ಬರನ್ನೊಬ್ಬರು ಎಡವಿ ಬೀಳುತ್ತಾರೆ
ತಳ್ಳಿಕೊಂಡು, ಗುಜುಗುಡುತ್ತಾರೆ ಅರ್ಥವಾಗದ ಶಬ್ದಗಳಲ್ಲಿ
ಒಬ್ಬರಿನ್ನೊಬ್ಬರು ಅರ್ಥವಾಗುವ,
ಅರ್ಥಮಾಡಿಕೊಳ್ಳುವ ವ್ಯವಧಾನ ನೀಡೋ ತಂದೆ ॥೪॥
ಇಲ್ಲಿ ಆಫೀಸುಗಳು ನಿದ್ದೆ ಮಾಡುತ್ತಿವೆ
ಕೆಂಪು ಪಟ್ಟಿಯ ಕಬಂಧ ಬಾಹು ಉಸಿರುಗಟ್ಟಿಸುತ್ತಿದೆ.
ಸಿಕ್ಕಿದ್ದನ್ನು ಬಾಚುತ್ತದೆ, ಬಾಚಿ ಮುಕ್ಕುತ್ತದೆ.
ಮುಕ್ಕಿದ್ದೆಲ್ಲ ಜೆರ್ಸಿ ದನದ ಹೊಟ್ಟೆಯೊಳಗಿನ
ಪ್ಲಾಸ್ಟಿಕ್ ತೊಟ್ಟೆಗಳನಾಗಿಸೋ ತಂದೆ ॥೫॥
ಎಲ್ಲಕ್ಕಿಂತ ಹೆಚ್ಚಾಗಿ ಫುಟ್‌ಪಾತ್ ದರಿದ್ರನಾರಾಯಣರಿಗೆ
ಸಿಮೆಂಟ್ ಗಾರೆ ಎತ್ತಿಕೊಡುವ ಮುಗ್ಧ ಮಕ್ಕಳಿಗೆ
ಹೋಟೆಲ್ ನೆಲ ವರೆಸುವ ಮಾಣಿಗಳಿಗೆ
ನ್ಯಾಯದ ತುತ್ತನ್ನು ನೀಡೋ ತಂದೆ ॥೬॥
ಕ್ರೈಮ್, ಪನಿಶ್‌ಮೆಂಟ್ ಮತ್ತು ಕನ್‌ಫೆಶನ್
ಇದ್ದರೆ ಮಾತ್ರ ಜಗತ್ತು ರೋಚಕ ಅಲ್ಲವೆ ತಂದೆ ?
ಇವೆಲ್ಲವ ನೋಡಿ ನಿನಗೇನನಿಸದಿದ್ದರೆ ಸುಮ್ಮನಿದ್ದುಬಿಡು
ಮಾಡಲೇನಾಗದಿದ್ದರೆ ಈ ತನಕ ನೀನು ಸುಮ್ಮನೆ ಎಲ್ಲವನ್ನೂ
ನೋಡುತ್ತ ನಿಂತ ಕಲ್ಲಬಂಡೆಯಂತೆ ಹೀಗೆಯೇ ಇದ್ದು ಬಿಡು
ಇಲ್ಲ ತೊಲಗು !

ಉದಯಕುಮಾರ್ ಹಬ್ಬು
ಕಿನ್ನಿಗೋಳಿ - ೫೭೪೧೫೦, ದ.ಕ

# ಬಂಗಾರದ ಬೆಳೆ

'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಪುಸ್ತಕ ಪ್ರಕಟಣೆಗಳ ಕ್ಷೇತ್ರದಲ್ಲಿ ೫೦ ವಸಂತಗಳನ್ನು ಪೂರೈಸಿದ ಶುಭ ಸಂದರ್ಭದಲ್ಲಿ 'ಬಂಗಾರದ ಬೆಳೆ' ಎಂಬ ಶೀರ್ಷಿಕೆಯಡಿಯಲ್ಲಿ ೫೦ ಪುಸ್ತಕಗಳನ್ನು ಪ್ರಕಟಿಸುತ್ತಿದ್ದು, ಅದರ ಮೊದಲ ಕಂತಿನ ಹನ್ನೆರಡು ಪ್ರಕಟಣೆಗಳು.
















**ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ**

ನಂ. ೯, 'ರಮ್ಯ'
ಗೋಕುಲಂ ಮೂರನೇ ಹಂತ
ಮೈಸೂರು - ೫೭೦ ೦೦೨
ದೂರವಾಣಿ : ೫೧೩೮೨೧



# ಕರ್ನಾಟಕದ ಆರೋಗ್ಯ ಕ್ಷೇತ್ರದ ಇತಿಹಾಸದಲ್ಲೊಂದು ಮೈಲುಗಲ್ಲು

# ಆರೋಗ್ಯ ಕಾರ್ಯಪಡೆ ವರದಿ

ಡಾ|| ಪ್ರಕಾಶ್ ಸಿ. ರಾವ್

ಆರೋಗ್ಯ ಕ್ಷೇತ್ರದ ಬೆಳವಣಿಗೆ ಅಪಾರವಾಗಿದೆ. ಆದರೂ ರಾಷ್ಟ್ರ ಹಾಗೂ ರಾಜ್ಯಮಟ್ಟದಲ್ಲಿ ಆರೋಗ್ಯ ಪರಿಸ್ಥಿತಿ ಚಿಂತಾಜನಕವಾಗಿದೆ. ಆದ್ದರಿಂದಲೇ ರಾಷ್ಟ್ರಮಟ್ಟದಲ್ಲಿ ಜನಾರೋಗ್ಯ ಸುಧಾರಿಸುವ ಹಲವಾರು ಪ್ರಯತ್ನಗಳಾಗಿವೆ. ಕರ್ನಾಟಕದಲ್ಲಿ ಜನಾರೋಗ್ಯ ಸುಧಾರಿಸಲು ಆರೋಗ್ಯ ಇಲಾಖೆ ಆರೋಗ್ಯ ಕಾರ್ಯಪಡೆಯನ್ನು ನೇಮಕ ಮಾಡಿರುವುದು ಸಮಂಜಸವಾಗಿದೆ. ಈ ಕಾರ್ಯಪಡೆಯ ಅಧ್ಯಕ್ಷರನ್ನಾಗಿ ಡಾ|| ಸುದರ್ಶನ್ ಅವರನ್ನು ನೇಮಕ ಮಾಡಲಾಗಿದೆ. ಡಾ|| ಸುದರ್ಶನ್ ಸೋಲಿಗ ಗಿರಿಜನರ ಮಧ್ಯೆ ಕೆಲಸ ಮಾಡುತ್ತ, ಜನಾರೋಗ್ಯ ಸುಧಾರಣೆಗೆ ಅಂತಾರಾಷ್ಟ್ರೀಯ ಮನ್ನಣೆ ಪಡೆದ ವ್ಯಕ್ತಿ. ಇತರ ಸದಸ್ಯರೂ ತಮ್ಮ ತಮ್ಮ ಕ್ಷೇತ್ರದಲ್ಲಿ ಪ್ರಖ್ಯಾತಿ ಪಡೆದ ವ್ಯಕ್ತಿಗಳು. ೧೩ ಸದಸ್ಯರ ಕಾರ್ಯಪಡೆ ತಯಾರಿಸಿದ ೫೪೦ ಪುಟದ ಅಂತಿಮ ವರದಿಯನ್ನು ಸರಕಾರ ಏಪ್ರಿಲ್ ೨೦೦೧ರಲ್ಲಿ ಬಿಡುಗಡೆ ಮಾಡಿದೆ. ಈ ವರದಿಯನ್ನು ಸರಕಾರ ಅನುಷ್ಠಾನಕ್ಕೆ ತರಬೇಕಾಗಿದೆ.

ಈ ಕಾರ್ಯಪಡೆಗೆ ಜನಾರೋಗ್ಯ, ಜನಸಂಖ್ಯಾ ನಿಯಂತ್ರಣ, ಆರೋಗ್ಯ ಹಾಗೂ ಕುಟುಂಬ ಇಲಾಖೆಯ ಕಾರ್ಯವೈಖರಿ, ವೈದ್ಯಕೀಯ ತರಬೇತಿ ಹಾಗೂ ಜನಾರೋಗ್ಯಕ್ಕೆ ಶಿಕ್ಷಣ ಮುಂತಾದವುಗಳನ್ನು ಸುಧಾರಿಸಲು ಶಿಫಾರಸುಗಳನ್ನು ನೀಡಲು ಕೇಳಿಕೊಳ್ಳಲಾಗಿತ್ತು. ಈ ಕೆಲಸವನ್ನು ಆರೋಗ್ಯ ಇಲಾಖೆಯೇ ಮಾಡಬಹುದಾಗಿತ್ತು. ಆರೋಗ್ಯ ಇಲಾಖೆ ಮಾಡಲಾಗದ ಈ ಕೆಲಸವನ್ನು ಆರೋಗ್ಯ ಕಾರ್ಯಪಡೆ ಮಾಡಲು ಕೇಳಿಕೊಂಡ ಅಧಿಸೂಚನೆ ಅಸಮಂಜಸವಾಗಿದ್ದರೂ, ಆರೋಗ್ಯ ಕಾರ್ಯಪಡೆ ಆರೋಗ್ಯ ಸುಧಾರಣೆಗೆ ಅಗತ್ಯವಿರುವ ಎಲ್ಲ ಮುಖ್ಯ ಅಂಶಗಳನ್ನು ಅಧ್ಯಯನ ಮಾಡಿರುವುದು ಶ್ಲಾಘನೀಯ.

ಈ ವರದಿಗೆ ''ಆರೋಗ್ಯದಲ್ಲಿ ಸಮಾನತೆ, ಗುಣಮಟ್ಟ ಹಾಗೂ ಸಮಗ್ರತೆಯೆಡೆಗೆ ಕರ್ನಾಟಕ'' ಎಂದು ಹೆಸರಿಡಲಾಗಿದೆ. ಈ ವರದಿ ಪ್ರಾಥಮಿಕ ಆರೋಗ್ಯಪಾಲನೆ ಹಾಗೂ ಜನಾರೋಗ್ಯದ ಬಗ್ಗೆ ಗಮನಹರಿಸಿದೆ. ಯಾವುದೇ ಸಮಾಜದ ಆರೋಗ್ಯ ಸುಧಾರಿಸಲು ಈ ಅಂಶಗಳು ಅತ್ಯವಶ್ಯ.

ಈ ವರದಿ ತಯಾರಿಸುವ ಮುನ್ನ ಹಲವಾರು ವೈದ್ಯಕೀಯ ವ್ಯಕ್ತಿಗಳು, ಆರೋಗ್ಯದ ಬಗ್ಗೆ ಕಾಳಜಿ ಇರುವ ಜನಸಾಮಾನ್ಯರು, ರಾಜಕೀಯ ಪಕ್ಷಗಳು, ಪತ್ರಕರ್ತರು ಮುಂತಾದವರನ್ನು ಸಂಪರ್ಕಿಸಿ, ಅವರ ಅನಿಸಿಕೆಗಳನ್ನು ದಾಖಲಿಸಲಾಯಿತು. ಖಾಸಗಿ ಮತ್ತು ಸರಕಾರಿ ವ್ಯಕ್ತಿಗಳು ಹಾಗೂ ಸಂಸ್ಥೆಗಳನ್ನು ಸಂಪರ್ಕಿಸಿ ಆರೋಗ್ಯಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನು ತಿಳಿದುಕೊಳ್ಳಲಾಯಿತು. ಎಲ್ಲ ವಿಷಯಗಳನ್ನೂ ವೈಜ್ಞಾನಿಕವಾಗಿ ಅಧ್ಯಯನ ಮಾಡಿದ ನಂತರ ವರದಿಯನ್ನು ತಯಾರಿಸಲಾಯಿತು.

**ವರದಿಯಲ್ಲಿ ಏನಿದೆ :** ಜನಾರೋಗ್ಯ ಸುಧಾರಿಸಲು ಪ್ರಾಥಮಿಕ ಆರೋಗ್ಯ ಪಾಲನೆಯ ವ್ಯವಸ್ಥೆಯನ್ನು ಸುಧಾರಿಸಬೇಕಾಗುತ್ತದೆ. ಪ್ರಾಥಮಿಕ ಆರೋಗ್ಯ ವ್ಯವಸ್ಥೆಯೊಂದಿಗೆ, ದ್ವಿತೀಯ ಹಾಗೂ ತೃತೀಯ ವ್ಯವಸ್ಥೆಗಳನ್ನು ಸುಧಾರಿಸಲು ಶಿಫಾರಸುಗಳನ್ನು ನೀಡಲಾಗಿದೆ. ಕುಡಿಯುವ ನೀರು, ಪೌಷ್ಟಿಕ ಆಹಾರ, ನೈರ್ಮಲ್ಯ, ಆರೋಗ್ಯವನ್ನು ತೀರ್ಮಾನಿಸಲು ಪ್ರಮುಖ ಪಾತ್ರ ವಹಿಸುತ್ತದೆ. ಈ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ.

ಆರೋಗ್ಯ ಸುಧಾರಿಸಲು ಆರೋಗ್ಯ ಸೇವೆಗಳು ಅಗತ್ಯ. ಪ್ರಾಥಮಿಕ ಆರೋಗ್ಯ ಕೇಂದ್ರಗಳು, ತುರ್ತುಸ್ಥಿತಿಯಲ್ಲಿನ ಆರೋಗ್ಯ ಸೇವೆಗಳು, ರೋಗನಿದಾನ ಸೇವೆಗಳು, ರಕ್ತನಿಧಿ ಕೇಂದ್ರ ಹಾಗೂ ರಕ್ತ ವರ್ಗಾವಣೆಯ ಸೇವೆಗಳು ಮುಂತಾದವುಗಳ ಚರ್ಚೆ ವರದಿಯಲ್ಲಿದೆ. ಆರೋಗ್ಯ ಹಾಗೂ ಕುಟುಂಬ ಇಲಾಖೆಯ ಕಾರ್ಯವೈಖರಿಯನ್ನು ಸುಧಾರಿಸಲು ಅನೇಕ ಸಲಹೆಗಳನ್ನು ನೀಡಲಾಗಿದೆ. ಆರೋಗ್ಯ ಪಾಲನೆಯಲ್ಲಿ ಗುಣಮಟ್ಟ ಹಾಗೂ ಸರ್ವ ಸಮಾನತೆಗೆ ಒತ್ತಾಯಿಸಲಾಗಿದೆ. ಆಧುನಿಕ ಚಿಕಿತ್ಸಾ ಪದ್ಧತಿಯಲ್ಲದೆ, ಭಾರತೀಯ ಔಷಧಿ ಪದ್ಧತಿಯಾದ ಆಯುರ್ವೇದ, ಸಿದ್ದ, ಯುನಾನಿ ಹಾಗೂ ಹೋಮಿಯೋಪತಿ ಮುಂತಾದ ಪದ್ಧತಿಗಳ ಬಗ್ಗೆ ಸಾಕಷ್ಟು ಮಾಹಿತಿ ಕೊಡಲಾಗಿದೆ. ಈ ಪದ್ಧತಿಗಳನ್ನು ನಮ್ಮ ಜನರು ಉಪಯೋಗಿಸುತ್ತಾ ಬಂದಿದ್ದಾರೆ ಹಾಗೂ ಇವು ದಿನನಿತ್ಯದ ಕಾಯಿಲೆಗಳಿಗೆ ಕಡಿಮೆ ಬೆಲೆಯ ಸುಲಭ ವಿಧಾನದ ಚಿಕಿತ್ಸಾ ಪದ್ಧತಿಗಳಾಗಿವೆ. ಈ ಚಿಕಿತ್ಸಾ ಕೇಂದ್ರಗಳು ಸರಕಾರೀ ಕ್ಷೇತ್ರದಲ್ಲಿದ್ದರೂ, ಜನಸಾಮಾನ್ಯರಿಗೆ ಅದರ ಮಾಹಿತಿ ಇಲ್ಲ.

ತಾಯಿ, ಮಗು, ತಾರುಣ್ಯದಲ್ಲಿರುವವರು, ಅಂಗವಿಕಲರು, ವೃದ್ಧರು, ಗುಡ್ಡಗಾಡು ಜನರು ಮುಂತಾದವರ ಆರೋಗ್ಯ ಸುಧಾರಣೆ ಬಗ್ಗೆ ವಿಶೇಷ ಗಮನದ ಅಗತ್ಯವಿದೆ. ಈ ವರದಿ ಆ ಪ್ರಯತ್ನವನ್ನು ಮಾಡಿದೆ.

ಅನಾರೋಗ್ಯದ ಕೆಲವು ಪ್ರಮುಖ ಕಾರಣಗಳಾದ ತಂಬಾಕು, ಮದ್ಯಪಾನ ಉಪಯೋಗದ ಹತೋಟಿಯನ್ನು ತರುವುದು ಕಷ್ಟಸಾಧ್ಯದ ವಿಷಯ. ಈ ವರದಿಯಲ್ಲಿ ಅದರ ವಿವರವಾದ ಪ್ರಸ್ತಾಪವಿದೆ.

ನಮ್ಮ ರಾಜ್ಯದಲ್ಲಿ ಕಂಡುಬರುವ ಅನೇಕ ರೋಗಗಳನ್ನು ಹತೋಟಿಗೆ ತರಲು ಇರುವ ರಾಷ್ಟ್ರೀಯ ಕಾರ್ಯಕ್ರಮಗಳನ್ನು ಪರಿಶೀಲಿಸಲಾಗಿದೆ. ಅದರಲ್ಲೂ ಮಾನಸಿಕ ಆರೋಗ್ಯ, ದಂತ ಆರೋಗ್ಯದ ಬಗ್ಗೆ ವಿಶೇಷ ಗಮನ ಹರಿಸಲಾಗಿದೆ. ಜೀವನಶೈಲಿಗೆ ಸಂಬಂಧಿಸಿದ, ಸಾಂಕ್ರಾಮಿಕವಲ್ಲದ ರೋಗಗಳ ಹತೋಟಿಗೆ ಸಹ, ಶಿಫಾರಸು ಮಾಡಲಾಗಿದೆ. ಈ ವಿವರಗಳು ವೈದ್ಯರಿಗೆ ಹಾಗೂ ವೈದ್ಯಕೀಯ ವಿದ್ಯಾರ್ಥಿಗಳಿಗೆ ಪ್ರಯೋಜಕವಾಗಬಹುದು.

ಇಂದು ನಮ್ಮ ರಾಜ್ಯದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ವೈದ್ಯಕೀಯ ತರಬೇತಿ ಕೇಂದ್ರಗಳಿದ್ದರೂ ಆ ತರಬೇತಿ ಕೇಂದ್ರಗಳ ಗುಣಮಟ್ಟ ಕಳಪೆ ಮಟ್ಟದಲ್ಲಿಯೇ ಇರುವುದು ಕಂಡುಬರುತ್ತದೆ. ವೈದ್ಯಕೀಯ ಶಿಕ್ಷಣ ಹಾಗೂ ಪ್ಯಾರಮೆಡಿಕ್ಸ್‌ನ ತರಬೇತಿಗಾಗಿ ಇರುವ ವ್ಯವಸ್ಥೆಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ಸೂಚಿಸಲಾಗಿದೆ. ಹೊಸ ವೈದ್ಯಕೀಯ ಕಾಲೇಜುಗಳನ್ನು ನಿಷೇಧಿಸಲಾಗಿದೆ. ಆರೋಗ್ಯ ಸುಧಾರಿಸಲು ನೇರ ಚಿಕಿತ್ಸೆಗೆ ಸಂಬಂಧಿಸಿದ ವಿಷಯಗಳಾದ ಆರೋಗ್ಯ ಸೇವೆಯ ವ್ಯವಸ್ಥೆ, ಆರೋಗ್ಯ ಸಂಶೋಧನೆ, ಹಣಕಾಸು, ಪಂಚಾಯತ್ ರಾಜ್, ಆರೋಗ್ಯ ಆಡಳಿತ ಮಾಹಿತಿ ವ್ಯವಸ್ಥೆ, ಆರೋಗ್ಯ ಸಂಹಿತೆ, ಜನರನ್ನು ಸಶಕ್ತಗೊಳಿಸುವುದು, ಆರೋಗ್ಯಕ್ಕಾಗಿ ಅಂತರ ಕ್ಷೇತ್ರೀಯ ಚಟುವಟಿಕೆಗಳು ಮುಂತಾದವುಗಳನ್ನು ಚರ್ಚಿಸಲಾಗಿದೆ.

ಜನಾರೋಗ್ಯ ಸುಧಾರಣೆಯಲ್ಲಿ ಸಾಂಕ್ರಾಮಿಕ ರೋಗಗಳ ಹತೋಟಿ, ರೋಗದ ಮೇಲೆ ನಿಗಾ ಇಡುವುದು, ಸಾಂಕ್ರಾಮಿಕವಲ್ಲದ ರೋಗಗಳ ಹೆಚ್ಚಳದ ಬಗ್ಗೆ ಗಮನಹರಿಸಲು ಒತ್ತಾಯಪಡಿಸಲಾಗಿದೆ. ರಾಷ್ಟ್ರಮಟ್ಟದಲ್ಲಿ ಹಾಗೂ ರಾಜ್ಯಮಟ್ಟದಲ್ಲಿ ಸಮಂಜಸ ಜನಪರ ಆರೋಗ್ಯ, ಔಷಧಿ ಹಾಗೂ ಜನಸಂಖ್ಯಾ ನೀತಿ ಇಲ್ಲದಿರುವುದು ಶೋಚನೀಯ. ಇಂದಿನ ಆರೋಗ್ಯ ಪರಿಸ್ಥಿತಿ ಸುಧಾರಿಸದೇ ಇರಲು ಇದೊಂದು ಕಾರಣ. ಇದಲ್ಲದೆ ಆರೋಗ್ಯ ಸಾಧನೆ ಸೂತ್ರಗಳಲ್ಲಿ ಅನೇಕ ಬದಲಾವಣೆಗಳು ಕಂಡುಬಂದುದರಿಂದ ಆ ಬದಲಾವಣೆಗಳನ್ನು ಗಮನದಲ್ಲಿಟ್ಟುಕೊಂಡು ಆರೋಗ್ಯ, ಔಷಧಿ ಹಾಗೂ ಜನಸಂಖ್ಯಾ ನೀತಿಯ ಕರಡನ್ನು ತಯಾರಿಸಿ ವರದಿಯಲ್ಲಿ ಸೇರಿಸಲಾಗಿದೆ.

ಜನಾರೋಗ್ಯ ಸುಧಾರಣೆ ಕೇವಲ ಸರಕಾರದಿಂದ ಮಾತ್ರ ಸಾಧ್ಯವಾಗದು, ಜನರ ಪಾತ್ರವೂ ಹಿರಿದಾಗಿದೆ. ಇಂದಿನ ಆರೋಗ್ಯ ಪರಿಸ್ಥಿತಿಗೆ ಜನರ ಸಹಭಾಗಿತ್ವ ಇಲ್ಲದಿರುವುದು ಒಂದು ಮುಖ್ಯ ಕಾರಣವೆಂದು ತಿಳಿದುಬಂದಿದೆ. ಜನರಿಗೆ ಆರೋಗ್ಯದ ಬಗ್ಗೆ ಅರಿವು ಮೂಡಿಸಬೇಕು, ಆರೋಗ್ಯ ಸೌಲಭ್ಯಗಳು (ಕೇವಲ ಸೇವೆಗಳಲ್ಲ) ಎಲ್ಲರಿಗೂ ದೊರಕಬೇಕು. ಆರೋಗ್ಯ ಸೌಲಭ್ಯ ಲಭ್ಯವಾಗದಿದ್ದಲ್ಲಿ ಜನರು ಮುಂದೆ ಬಂದು ಸರಕಾರವನ್ನು ಕೇಳುವ ಹಕ್ಕು ದೊರಕಬೇಕು ಎಂಬ ಧ್ಯೇಯದಿಂದ ಪ್ರಾರಂಭವಾದ ಆಂದೋಲನವೇ 'ಜನಾರೋಗ್ಯ ಆಂದೋಲನ.' ಈ ಆಂದೋಲನ ಕರ್ನಾಟಕದಲ್ಲಲ್ಲದೆ ನಮ್ಮ ದೇಶದ ಅನೇಕ ರಾಜ್ಯಗಳಲ್ಲಿ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಅನೇಕ ದೇಶಗಳಲ್ಲಿ ಪ್ರಾರಂಭವಾಗಿದೆ. ಈ ಬೆಳವಣಿಗೆ ಜನಾರೋಗ್ಯ ಸುಧಾರಣೆಗೆ ಪೂರಕವಾಗಿದೆ. ಈ ವಿಷಯವನ್ನು ಈ ವರದಿ ಚರ್ಚಿಸಿದೆ. ಆರೋಗ್ಯ ಕ್ಷೇತ್ರದಲ್ಲಿ ಬದಲಾವಣೆಗಳನ್ನು ಅಪೇಕ್ಷಿಸುವುದು ಸರಿಯೇ. ಏನು ಬದಲಾವಣೆಗಳನ್ನು ಅಪೇಕ್ಷಿಸಬಹುದು ಎಂಬುದನ್ನು ಸ್ಪಷ್ಟಪಡಿಸಬೇಕಾಗುತ್ತದೆ. ೨೦೨೦ರ ಹೊತ್ತಿಗೆ ಆರೋಗ್ಯ ಕ್ಷೇತ್ರದಲ್ಲಿ ಏನು ಬದಲಾವಣೆಗಳನ್ನು ಅಪೇಕ್ಷಿಸಬಹುದು ಎಂಬುದನ್ನು '೨೦೨೦ರ ದೃಷ್ಟಿ'ಯಲ್ಲಿ ಸ್ಪಷ್ಟಪಡಿಸಿದ್ದಾರೆ. ಇದು ಒಂದು ನೈಜ ಚಿತ್ರಣವಾಗಿದೆಯೆಂದು ಹೇಳಬಹುದು.

ಆರೋಗ್ಯ ಸಾಧನೆಯ ಲೋಪದೋಷಗಳನ್ನು ಗಮನಿಸಿ ಸಮಿತಿ ಶಿಫಾರಸ್ಸುಗಳನ್ನು ನೀಡಿದೆ. ಈ ಶಿಫಾರಸ್ಸುಗಳನ್ನು ಸರಕಾರ ಅನುಷ್ಠಾನಕ್ಕೆ ತರುತ್ತದೆಯೇ ಎಂಬುದನ್ನು ಕಾದು ನೋಡಬೇಕಾಗಿದೆ.

ಈ ವರದಿ ಪ್ರಗತಿಪರವಾಗಿರುವುದರಲ್ಲಿ ಯಾವ ಅನುಮಾನವೂ ಇಲ್ಲ. ಆದರೂ, ಈ ವರದಿ ಆರೋಗ್ಯ ಕ್ಷೇತ್ರದ ಮೇಲೆ ಪ್ರಭಾವ ಬೀರುವ ಇನ್ನೂ ಅನೇಕ ವಿಷಯಗಳತ್ತ ಗಮನ ಹರಿಸಬೇಕಾಗಿತ್ತು. ಅವುಗಳಲ್ಲಿ ಕೆಲವನ್ನು ಹೆಸರಿಸಬಹುದು.

**ಜಾಗತೀಕರಣ, ಉದಾರೀಕರಣ, ಖಾಸಗೀಕರಣ :** ಪ್ರಾಥಮಿಕ ಆರೋಗ್ಯ ಪಾಲನೆ ಹಾಗೂ ಜನಾರೋಗ್ಯದ ನೀತಿಗಳು ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣ ನೀತಿಯಿಂದ ಪ್ರಭಾವಿತವಾಗಿವೆ. ಇದರ ಪರಿಣಾಮದಿಂದ ನಮ್ಮ ಆರೋಗ್ಯ ನೀತಿಯು ವಿಶ್ವಬ್ಯಾಂಕ್ ಹಾಗೂ ಐ.ಎಮ್.ಎಫ್. ಆದೇಶದಂತೆ ಬದಲಾಗುತ್ತಿದೆ. ಇದು ಬಡಜನರ ಮೇಲೆ ಹೆಚ್ಚಿನ ಪರಿಣಾಮ ಬೀರುತ್ತದೆ. ಅವರಿಗೆ ಆರೋಗ್ಯ ಸೌಲಭ್ಯ ನಿರಾಕರಿಸಿದಂತಾಗುತ್ತದೆ.

ಆರೋಗ್ಯ ವ್ಯವಸ್ಥೆ ಈಗಾಗಲೇ ಖಾಸಗೀ ಕ್ಷೇತ್ರದ ಹಿಡಿತದಲ್ಲಿದೆ. ಸರಕಾರೀ ಕ್ಷೇತ್ರ ಆರೋಗ್ಯ ಕ್ಷೇತ್ರವನ್ನು ನಿಯಂತ್ರಿಸುವ ಜವಾಬ್ದಾರಿಯಿಂದ ನುಸುಳಿಕೊಳ್ಳುತ್ತಿದೆ. ಇದರಿಂದ ಆರೋಗ್ಯ ಸಾಧಿಸಲು ಜನರು ಖಾಸಗೀ ಕ್ಷೇತ್ರವನ್ನು ಅವಲಂಬಿಸಬೇಕಾಗುತ್ತದೆ. ಈ ತರಹದ ಹಿಡಿತವಿಲ್ಲದ ಖಾಸಗೀಕರಣ ಯಾವುದೇ ಸಮಾಜಕ್ಕೆ ಅಪಾಯ ಉಂಟುಮಾಡಬಹುದಾಗಿದೆ. ವರದಿಯಲ್ಲಿ ಈ ವಿಷಯ ಪ್ರಸ್ತಾಪವಾಗಿದೆ. ಆದರೂ ಈ ಹೊಸ ನೀತಿಯನ್ನು ಎದುರಿಸಲು ಹೊಸ ತಂತ್ರದ ಅಗತ್ಯವಿರುವುದನ್ನು ಗಮನಿಸಲಾಗಿಲ್ಲ. ಖಾಸಗೀಕರಣವನ್ನು ನಿಯಂತ್ರಿಸುತ್ತ, ಕ್ರಮೇಣ ನಿರ್ಮೂಲನ ಮಾಡುವುದು ಅಗತ್ಯ.

**ಬಡಜನರ ಆರೋಗ್ಯ :** ನಮ್ಮ ದೇಶದ ಹೆಚ್ಚಿನ ಜನಸಂಖ್ಯೆ ಗ್ರಾಮೀಣ ಪ್ರದೇಶದಲ್ಲೇ ವಾಸವಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಆರೋಗ್ಯ ಸೇವೆಗಳು ಸಮರ್ಪಕವಾಗಿಲ್ಲ. ಅನಾರೋಗ್ಯ ಸಮಸ್ಯೆಗಳೂ ಹೆಚ್ಚು. ಈ ಅನಾರೋಗ್ಯ ಸಮಸ್ಯೆಗಳನ್ನು ಗುರುತಿಸಿ, ಚಿಕಿತ್ಸೆ ಕೊಡಬೇಕಾಗಿದೆ. 'ಗುರುತಿಸುವ ಈ ಪ್ರಯತ್ನ' ವ್ಯಾಪಕವಾಗಿ ಆಗಬೇಕಾಗಿದೆ. ಅದಲ್ಲದೆ ಜನಾರೋಗ್ಯ ಸುಧಾರಿಸುವ ಪ್ರಯತ್ನ ಸಮರ್ಪಕವಾಗಬೇಕಾಗಿದೆ. ಅನಾರೋಗ್ಯ ಬಡಜನರಲ್ಲಿ ಮಹಿಳೆಯರಲ್ಲಿ ಹೆಚ್ಚು ಕಂಡುಬರುತ್ತಿದೆ. ಕೇವಲ ಚಿಕಿತ್ಸೆಯಿಂದ ಅನಾರೋಗ್ಯವನ್ನು ಕಡಿಮೆ ಮಾಡಲಾಗದು. ಕೇವಲ ಆಸ್ಪತ್ರೆಗೆ ಬಂದವರಿಗೆ ಮಾತ್ರ ಚಿಕಿತ್ಸೆ ಎಂಬ ನೀತಿ ಇದ್ದಲ್ಲಿ ಚಿಕಿತ್ಸೆಯೂ ಸಂಪೂರ್ಣವಾಗಲಾರದು; ಕಾರಣ, ಹೆಚ್ಚಿನ ಜನರು ರೋಗ ಗುರುತಿಸರು ಹಾಗೂ ರೋಗ ಉಂಟಾದಲ್ಲಿ ಆಸ್ಪತ್ರೆಗೆ ಹೋಗಲೂ ಅಶಕ್ತರು. ವರದಿಯಲ್ಲಿರುವ 'ಸಮಾನತೆಗೆ ಪ್ರಯತ್ನಿಸುವುದು' ಎಂಬುದು ಹೇಳಿಕೆ ಮಾತ್ರ ಆಗದೆ ಕಾರ್ಯರೂಪಕ್ಕೆ ಬರಬೇಕಾಗಿದೆ. ಔಷಧಿಯ ಸಮಂಜಸ ಉಪಯೋಗದ ಬಗ್ಗೆ ಪ್ರಸ್ತಾಪಿಸಲಾಗಿದೆ. ಇದನ್ನು ಪ್ರತಿಹಂತದಲ್ಲೂ ಜಾರಿಗೊಳಿಸುವ ಪ್ರಯತ್ನವಾಗಬೇಕು. ಉಪಯೋಗಿಸಲು ಅಗತ್ಯ ಔಷಧಿಗಳು ದೊರಕಬೇಕು. ಅನಗತ್ಯ ಅಪಾಯಕರ ಔಷಧಿಗಳನ್ನು ನಿಷೇಧಿಸಬೇಕಾಗುತ್ತದೆ. ಈ ನಿಷೇಧವನ್ನು ರಾಜ್ಯಮಟ್ಟದಲ್ಲೂ ಮಾಡಬಹುದಾಗಿದೆ. ಔಷಧಿ ನಿಯಂತ್ರಣ ಅಧಿಕಾರಿಗಳು ಈ ಪ್ರಯತ್ನವನ್ನು ಮಾಡಬೇಕಾಗಿದೆ. ಪ್ರತಿಹಂತದಲ್ಲೂ ಉಪಯೋಗಿಸಬೇಕಾದ ಅಗತ್ಯ ಔಷಧಿ ಪಟ್ಟಿಯನ್ನು ಸರಕಾರ ತಯಾರಿಸಬೇಕಾಗಿದೆ. ಔಷಧಿ ಉದ್ಯಮ ಈ ಬೆಳವಣಿಗೆಯನ್ನು ಸಹಿಸಲಾರದು, ಆದರೆ ಸರಕಾರ ಈ ಜನಪರ ಕಾರ್ಯಕ್ಕೆ ಔಷಧಿ ಉದ್ಯಮವನ್ನು ಲೆಕ್ಕಿಸಬಾರದು. ಔಷಧಿ ನಿಯಂತ್ರಣ ಅಧಿಕಾರಿಗಳು ಕಾರ್ಯಪಡೆಯ ಸದಸ್ಯರಾಗಿರುವುದರಿಂದ ಈ ಬದಲಾವಣೆಗಳನ್ನು ತರಲು ಪ್ರಯತ್ನಿಸುತ್ತಾರೆ ಎಂದು ನಂಬಬಹುದಾಗಿದೆ.

**ಖೊಟ್ಟಿ ವೈದ್ಯರು :** ತರಬೇತಿ ಪಡೆಯದೆ ಚಿಕಿತ್ಸಾ ಪದ್ಧತಿಯನ್ನು ಉಪಯೋಗಿಸುವ ವೈದ್ಯರಿಗೆ ಖೊಟ್ಟಿ ವೈದ್ಯ ಎಂದು ಹೇಳಬಹುದು. ವೈದ್ಯರೆಂದು ಕರೆಸಿಕೊಳ್ಳುವ ಈ ವ್ಯಕ್ತಿಗಳು ಆಧುನಿಕ ಔಷಧಿಗಳನ್ನು ದುರುಪಯೋಗಪಡಿಸುವುದಲ್ಲದೆ ಅನೇಕಬಾರಿ ಅಪಾಯ ಉಂಟುಮಾಡುತ್ತಾರೆ. ಜನಸಾಮಾನ್ಯರಿಗೆ ಸಾಮಾನ್ಯವಾಗಿ ಚಿಕಿತ್ಸೆ ಮುಖ್ಯವಾಗುತ್ತದೆ. ಏನು ಹಾಗೂ ಯಾರಿಂದ ಎಂಬುದು ಮುಖ್ಯವಾಗುವುದಿಲ್ಲ. ಆದ್ದರಿಂದ ಈ ಖೊಟ್ಟಿ ವೈದ್ಯರನ್ನು ಗುರುತಿಸಿ ನಿರ್ಮೂಲನೆ ಮಾಡುವುದು ಸರಕಾರದ ಕರ್ತವ್ಯವಾಗುತ್ತದೆ. ಆದರೆ ಸರ್ಕಾರ ಇಲ್ಲಿಯವರೆಗೆ ಮಾಡಿದ ಪ್ರಯತ್ನಗಳೇನು ?

**ಕುಟುಂಬ ವೈದ್ಯ :** ನಮ್ಮ ಆರೋಗ್ಯ ವ್ಯವಸ್ಥೆಯಲ್ಲಿ ಎಲ್ಲ ವೈದ್ಯರಿಗೆ ಹೋಲಿಸಿದಲ್ಲಿ ಕುಟುಂಬ ವೈದ್ಯರ ಸಂಖ್ಯೆ ಅತಿ ಹೆಚ್ಚಾಗಿದೆ. ಇವರುಗಳು ಖಾಸಗೀ ವೈದ್ಯರು. ಇವರಲ್ಲಿ ಹೆಚ್ಚಿನ ಸಂಖ್ಯೆಯ ವೈದ್ಯರು ಸರಕಾರಿ ಮಟ್ಟದಲ್ಲಿ ತರಬೇತಿ ಪಡೆದವರು. ಒಮ್ಮೆ ತರಬೇತಿಯಿಂದ ಹೊರಬಂದರೆ ಸರಕಾರ ಅವರನ್ನು ಮರೆತುಬಿಡುತ್ತದೆ. ಸರಕಾರ ಅವರಿಗೆ ತರಬೇತಿ ಕೊಡುವ ಜವಾಬ್ದಾರಿ ಹೊತ್ತಿರುವುದು ಸರಿಯೇ, ಆದರೆ ಅದಕ್ಕೆ ಪ್ರತಿಫಲವನ್ನು ಇಚ್ಛಿಸುವುದು ತಪ್ಪೇನಲ್ಲ. ಖಾಸಗೀ ಕುಟುಂಬ ವೈದ್ಯರನ್ನು ಸರಕಾರ ಗುರುತಿಸಿ, ಅವರೊಂದಿಗೆ ಸಂಪರ್ಕ ಇಟ್ಟುಕೊಂಡು, ಅವರಿಂದ ಸಮಾಜಕ್ಕೆ ಉಪಯೋಗವಾಗುವ ಕೆಲವು ಕಾರ್ಯಗಳನ್ನು ರೂಪಿಸುವುದು ಅತ್ಯಗತ್ಯ. ಸಾಮಾನ್ಯವಾಗಿ ಈ ವೈದ್ಯರು ಪ್ರಾಥಮಿಕ ಆರೋಗ್ಯ ಪಾಲನೆಯಲ್ಲಿ ತೊಡಗಿದ ವೈದ್ಯರು ಹಾಗೂ ಇವರು ಅತಿ ಹೆಚ್ಚು ಜನರಿಗೆ ಚಿಕಿತ್ಸೆ ನೀಡುತ್ತಾರೆ. ಇವರು ಕೇವಲ ಗುಣಪಡಿಸುವ ಚಿಕಿತ್ಸೆ ಮಾಡುತ್ತಿದ್ದು, ಇದು ಅವೈಜ್ಞಾನಿಕ ಹಾಗೂ ಶೋಷಣೆಯುಳ್ಳದ್ದಾಗಿದೆ. ಇಂದು ಪ್ರತಿಬಂಧಕ ಚಿಕಿತ್ಸಾ ವಿಜ್ಞಾನ ಲಭ್ಯವಿದ್ದರೂ ಅದನ್ನು ಕಡೆಗಣಿಸಲಾಗುತ್ತಿದೆ. ಇವರುಗಳು ಸಮಗ್ರ ಚಿಕಿತ್ಸೆ ಮಾಡುವಂತೆ ಪ್ರೋತ್ಸಾಹಿಸಬೇಕು. ಈ ವೈದ್ಯರುಗಳ ಸಂಖ್ಯೆಯನ್ನು ತಿಳಿದುಕೊಳ್ಳಲು ಸರಕಾರ ಒಂದು ಅಧ್ಯಯನ ಕೈಗೊಳ್ಳಬೇಕಾಗಿದೆ ಹಾಗೂ ಈ ವೈದ್ಯರುಗಳು ಸಮಾಜಕ್ಕೆ ಹೇಗೆ ಹೆಚ್ಚು ಉಪಯುಕ್ತರಾಗಬಹುದು ಎಂಬುದನ್ನು ತೀರ್ಮಾನಿಸಬಹುದಾಗಿದೆ.

**ಔದ್ಯೋಗಿಕ ಆರೋಗ್ಯ :** ಕಾರ್ಮಿಕ ವರ್ಗದ ಬೆಳವಣಿಗೆ ಅಪಾರವಾಗಿದೆ. ಕಾರ್ಮಿಕರ ಆರೋಗ್ಯ ಸಮಸ್ಯೆಗಳು ಭಿನ್ನವಾಗಿವೆ. ಕಾರ್ಮಿಕರ ಆರೋಗ್ಯ ಸಮಸ್ಯೆಗಳನ್ನು ಗುರುತಿಸಿ, ಸರಿಪಡಿಸುವ ಪ್ರಯತ್ನ ವ್ಯಾಪಕವಾಗಿಲ್ಲ. ಹೆಚ್ಚಿನ ಕಾರ್ಮಿಕರು ಖಾಸಗೀ ಅಸಂಘಟಿತ ಕ್ಷೇತ್ರದಲ್ಲಿರುವುದರಿಂದ ಸರಿಯಾದ ಚಿಕಿತ್ಸೆಯಿಂದ ವಂಚಿತರಾಗಿದ್ದಾರೆ. ಮಾಲೀಕರ ದೌರ್ಜನ್ಯಕ್ಕೆ ಬಲಿಯಾಗಿದ್ದಾರೆ. ಅಪಾಯಕಾರಿ ಉದ್ದಿಮೆಯಲ್ಲಿ ಕೆಲಸ ಮಾಡುತ್ತಾ, ಜೀವ-ಮರಣದ ಮಧ್ಯದಲ್ಲಿ ತೊಳಲಾಡುತ್ತಿದ್ದಾರೆ. ಬಾಲಕಾರ್ಮಿಕರು ಹಾಗೂ ಮಹಿಳೆಯರು ಅತಿ ಹೆಚ್ಚು ಶೋಷಣೆಗೆ ಒಳಗಾಗಿದ್ದಾರೆ. ಹೊಸ ಹೊಸ ಉದ್ದಿಮೆಗಳಲ್ಲಿ ಕಂಡುಬರುವ ಆರೋಗ್ಯ ಸಮಸ್ಯೆಗಳು ಕಾರ್ಮಿಕರಿಗೆ ಸವಾಲಾಗಿದೆ. ಈ ಔದ್ಯೋಗಿಕ ಆರೋಗ್ಯದ ಸಮಗ್ರ ಅಧ್ಯಯನವನ್ನು ಸರಕಾರ ಮಾಡಬೇಕಾಗಿದೆ ಹಾಗೂ ಪರಿಹಾರವನ್ನು ಸೂಚಿಸಬೇಕಾಗಿದೆ.

**ವೈದ್ಯಕೀಯ ಸಂಶೋಧನೆ :** ಇಂದು ವೈದ್ಯಕೀಯ ಸಂಶೋಧನೆ ನಮ್ಮ ಆರೋಗ್ಯ ಸಮಸ್ಯೆಗಳತ್ತ ಗಮನ ಕೊಡುವುದು ಅಗತ್ಯ. ಇಂದು ಹಲವಾರು ವೈದ್ಯಕೀಯ ಸಂಸ್ಥೆಗಳಿದ್ದರೂ ವೈದ್ಯಕೀಯ ಸಂಶೋಧನೆಯನ್ನು ಕಡೆಗಣಿಸಲಾಗಿದೆ. ಕೆಲವು ವೈದ್ಯಕೀಯ ಸಂಶೋಧನೆಗಳಾಗುತ್ತಿದ್ದರೂ ಅವು ಆಧುನಿಕ ರೋಗಗಳಾದ ಕ್ಯಾನ್ಸರ್, ಹೃದಯ ರೋಗಗಳತ್ತ ಗಮನಹರಿಸಿವೆ; ಜನಸಾಮಾನ್ಯರ ಆರೋಗ್ಯ ಸಮಸ್ಯೆಗಳನ್ನು ಕಡೆಗಣಿಸಿವೆ. ಔಷಧಿ ಕಂಪೆನಿಗಳು ಸಂಶೋಧನೆಯ ಹೆಸರಿನಲ್ಲಿ ತಮ್ಮ ಔಷಧಿಯನ್ನು ಹೇಗೆ ಮಾರಾಟ ಮಾಡಿ ಲಾಭ ಹೆಚ್ಚಿಸಬಹುದೆಂಬುದನ್ನು ತಿಳಿಯುವ ಸಂಶೋಧನೆ ಮಾಡುತ್ತಿವೆ. ಆಧುನಿಕ ವೈದ್ಯಶಾಸ್ತ್ರದ ಒಂದು ಮುಖ್ಯ ವಿಭಾಗ ಸಂಶೋಧನೆ. ಈ ಸಂಶೋಧನೆ ಇಲ್ಲದೆ ವೈದ್ಯಶಾಸ್ತ್ರದ ಬೆಳವಣಿಗೆ ಅಸಾಧ್ಯ. ಸಂಶೋಧನೆಗಳನ್ನು ಕೈಗೊಂಡು ಅದರ ಪ್ರತಿಫಲವನ್ನು ಜನಸಾಮಾನ್ಯರಿಗೆ ತಲುಪಿಸುವ ವ್ಯವಸ್ಥೆಯಾಗಬೇಕಾಗಿದೆ.

**ವಿದೇಶೀ ಯೋಜನೆಗಳು :** ಆರೋಗ್ಯ ಇಲಾಖೆ ಅನೇಕ ದೇಶಗಳ ಸಹಾಯವನ್ನು ಹಾಗೂ ಸಾಲವನ್ನು ಪಡೆಯುತ್ತಾ ಬಂದಿದೆ. ಸಾಲ ಹೊರದೇಶದ್ದಾಗಿದ್ದಲ್ಲಿ ನಾವು ಅದರ ಬಗ್ಗೆ ಜಾಗರೂಕತೆ ವಹಿಸಬೇಕಾಗುತ್ತದೆ. ಈ ಹೊರದೇಶದ ಸಾಲದ ವಿವರ ಮತ್ತು ಅದರ ತುಲನಾತ್ಮಕ ಅಧ್ಯಯನದ ಅಗತ್ಯವಿದೆ. ಸಾಮಾನ್ಯವಾಗಿ ಹೊರದೇಶದ ಸಾಲ ಜನರಿಗೆ ಪ್ರಯೋಜಕವಾಗದೆ, ಮಧ್ಯದಲ್ಲೇ ಸೋರಿಹೋಗುವ ಸಾಧ್ಯತೆ ಇರುತ್ತದೆ. ಆರೋಗ್ಯಪಡೆ ಈ ಯೋಜನೆಗಳ ಅಧ್ಯಯನವನ್ನು ಕೈಗೊಳ್ಳಬೇಕಾಗಿತ್ತು.

**ಭ್ರಷ್ಟಾಚಾರ :** ನಮ್ಮ ಸಾಮಾಜಿಕ ಜಾಡ್ಯಗಳಲ್ಲಿ ಇದೊಂದು ಬಹುಮುಖ್ಯವಾದ ಜಾಡ್ಯ. ಇದು ಆರೋಗ್ಯ ಕ್ಷೇತ್ರಕ್ಕೂ ಅಂಟಿಕೊಂಡಿದೆ. ಈ ವಿಷಯವನ್ನು ಕಾರ್ಯಪಡೆ ವರದಿ ಮಾಡಿದೆ.

ದಿನಪತ್ರಿಕೆಗಳಲ್ಲಿ ಹಾಗೂ ದೂರದರ್ಶನದಲ್ಲಿ ಲೈಂಗಿಕ ರೋಗಗಳು, ಸಕ್ಕರೆ ಕಾಯಿಲೆ, ಏಡ್ಸ್, ಆಸ್ತಮಾ ಇತ್ಯಾದಿ ರೋಗಗಳನ್ನು ಗುಣಪಡಿಸುವುದಾಗಿ ಜಾಹೀರಾತುಗಳು ಕಂಡುಬರುತ್ತವೆ. ಇದೇನೂ ಹೊಸ ವಿಚಾರವಲ್ಲವಾದರೂ ಇದನ್ನು ತಡೆಹಿಡಿಯಬೇಕಾಗಿದೆ. ಈ ರೋಗಗಳನ್ನು ಯಾವುದೇ ಪದ್ಧತಿಯಲ್ಲಿ ಸಂಪೂರ್ಣ ಗುಣಪಡಿಸಲು ಇಂದು ಸಾಧ್ಯವಿಲ್ಲ. ಈ ಜಾಹೀರಾತುಗಳು ಜನರಲ್ಲಿ ಭ್ರಮೆ ಹುಟ್ಟಿಸಿ ಹಣ ದೋಚುತ್ತಿವೆ. ವೈದ್ಯಕೀಯ ವೃತ್ತಿ ಇದರ ಬಗ್ಗೆ ವಿರೋಧ ವ್ಯಕ್ತಪಡಿಸಿದರೂ ಅವರ ಧ್ವನಿ ಪ್ರಭಾವ ಬೀರುತ್ತಿಲ್ಲ. ಸರಕಾರ ಈ ಜಾಹೀರಾತುಗಳ ಮೇಲೆ ತಡೆಯಾಜ್ಞೆ ತರಬೇಕಾಗಿದೆ.

ಒಟ್ಟಾರೆ ಹೇಳುವುದಾದರೆ, ಈ ವರದಿ ಜನಾರೋಗ್ಯ ಸುಧಾರಣೆಯ ಇತಿಹಾಸದಲ್ಲಿ ಒಂದು ಮೈಲುಗಲ್ಲೆಂದೇ ಹೇಳಬಹುದು. ಈ ವರದಿಯು ತಾಂತ್ರಿಕವಲ್ಲದ ಸರಳ ಭಾಷೆಯಲ್ಲಿ ನಿರೂಪಣೆಗೊಂಡಿದೆ. ಈ ವರದಿಯಲ್ಲಿರುವ ಅಂಕಿಸಂಖ್ಯೆಗಳು ಬಹಳ ಉಪಯುಕ್ತವಾಗಲಿವೆ. ಈ ವರದಿ ವೈದ್ಯರಿಗೆ, ಆಡಳಿತಗಾರರಿಗೆ, ಪತ್ರಕರ್ತರಿಗೆ, ಆರೋಗ್ಯ ಕಾರ್ಯಕರ್ತರಿಗೆ, ವಿದ್ಯಾರ್ಥಿಗಳಿಗೆ ಪ್ರಯೋಜನವಾಗಬಲ್ಲದು. ಈ ವರದಿ ಆಧಾರದ ಮೇಲೆ ಇತರೇ ರಾಜ್ಯಗಳೂ ತಮ್ಮ ಆರೋಗ್ಯ ಪರಿಸ್ಥಿತಿಯನ್ನು ಸುಧಾರಿಸುವ ಪ್ರಯತ್ನ ಮಾಡಬಹುದು. ಈ ವರದಿಯ ಶಿಫಾರಸುಗಳನ್ನು ಸರಕಾರ ಅನುಷ್ಠಾನಕ್ಕೆ ತರುವುದೇ ಎಂಬುದನ್ನು ಸಮಿತಿ ಮೇಲ್ವಿಚಾರಣೆ ನಡೆಸುತ್ತದೆ. ಆದರೆ ಈ ವರದಿ ಅನುಷ್ಠಾನಕ್ಕೆ ಬರಬೇಕಾದರೆ ಆಸಕ್ತ ಜನರ ಗುಂಪುಗಳಲ್ಲಿ ಚರ್ಚೆಯಾಗಬೇಕು. ಈ ಚರ್ಚೆ ಸರಕಾರದ ಮೇಲೆ ಒತ್ತಡ ತರಲು ಸಹಾಯಕವಾಗಬಹುದು. ಈ ವರದಿಯ ಶಿಫಾರಸುಗಳನ್ನು ಸರಕಾರ ಈಗಾಗಲೇ ಜಾರಿಗೊಳಿಸಲು ಪ್ರಾರಂಭಿಸಿದೆ ಎಂದು ಕಾರ್ಯಪಡೆ ಸಮಿತಿ ಅಭಿಪ್ರಾಯಪಟ್ಟಿದೆ. ಸಂಪೂರ್ಣ ಜಾರಿಯಾಗುವುದೇ ಎಂದು ಕಾದುನೋಡಬೇಕಾಗಿದೆ !

**ಡಾ॥ ಪ್ರಕಾಶ್ ಸಿ. ರಾವ್**
೭೩/೨, ಮೊದಲನೇ 'ಆರ್' ಬಡಾವಣೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

## ಒಳ್ಳೆಯ ಓದು



**ಬದುಕಿನ ಮೌಲ್ಯದೊಳಗೊಂದು ಶೂನ್ಯ** (ಕಥಾ ಸಂಕಲನ)

*ಕೇಶವ ಉಮರ್ಜಿ*

**ಪುಟ : 132** **ಬೆಲೆ : ರೂ. 60**

**ಶ್ರೀಗಂಧ ಸಾಹಿತ್ಯ ಪ್ರಕಾಶನ,** ಹುನ್ನೂರು-587 119 ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ

*ಬದುಕಿನ ಮೌಲ್ಯಗಳನ್ನು ಪರಿಚಯಿಸುವಂಥ, ಬುದ್ಧಿವಂತಿಕೆಗೆ ಸವಾಲೆಸೆಯುವಂಥ ಕಥಾವಸ್ತುವನ್ನೊಳಗೊಂಡ ಬದುಕಿನ ವಾಸ್ತವಗಳನ್ನೇ ಲೇಖಕರು ಕಥೆಗಳನ್ನಾಗಿಸಿದ್ದಾರೆ. ಕಾಲ್ಪನಿಕ ಅತಿರಂಜಿತ ಶೈಲಿಗಳನ್ನು ಕೈಬಿಟ್ಟು ಬದುಕಲ್ಲಿ ಸಂಭವನೀಯ ನೆಲೆಗಳನ್ನು ಮಾತ್ರ ಹುಡುಕಿ ಗುರುತಿಸುತ್ತಾ ಕಥೆಗಳ ಚೌಕಟ್ಟನ್ನು ಅರ್ಥಪೂರ್ಣಗೊಳಿಸಿದ್ದಾರೆ. ಬದುಕಿನ ಮೌಲ್ಯದೊಳಗೊಂದು ಶೂನ್ಯ ಹುಡುಕುವ ಪ್ರಯತ್ನ.*

**ಜಾಗತೀಕರಣದ ಹತ್ತು ವರ್ಷಗಳು**

*ಸಿ. ಆರ್. ಭಟ್*

**ಪುಟ : 68** **ಬೆಲೆ : ರೂ. 15**

**ಕರ್ನಾಟಕ ಸಮಾಜ ವಿಜ್ಞಾನ ಕೇಂದ್ರ,** ಧಾರವಾಡ

*ಜಾಗತಿಕ ಸಾಲ ನೀಡಿಕೆಯ ಸಂಸ್ಥೆಗಳಿಂದ ಉದಾರೀಕರಣ-ಖಾಸಗೀಕರಣ-ಜಾಗತೀಕರಣಗಳೆಂಬ ಮೂರು ಅನಿಷ್ಟಗಳ ಸಿದ್ಧಾಂತದ ಪರಿಕಲ್ಪನೆಯ ನಂತರದಲ್ಲಿ ಜಗತ್ತಿನ ಆರ್ಥಿಕ ಅಭಿವೃದ್ಧಿ ಯಾವ ವರ್ಗಗಳ ಮೇಲೆ ಹೇಗೆ ಆಗಿದೆ ಎಂಬ ಪಕ್ಷಿನೋಟ ಈ ಪುಟ್ಟ ಪುಸ್ತಕದಲ್ಲಿದೆ. ಸುಧಾರಣೆಯ ಹೆಸರಿನಲ್ಲಿ ಬಹುರಾಷ್ಟ್ರೀಯ ಕಂಪೆನಿಗಳೊಂದಿಗೆ ಕೈಜೋಡಿಸುವ ಸರಕಾರಗಳ ಬಗ್ಗೆಯೂ ಇಲ್ಲಿ ಪ್ರಸ್ತಾಪಿಸಲಾಗಿದೆ.*



**ಹೋರಾಟದ ಹಾಡುಗಳು** (ಸಂಗ್ರಹ)

**ಪುಟ : 86** **ಬೆಲೆ : ರೂ. 12**

**ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್,** ಶೇಷಾದ್ರಿಪುರಂ ಅಂಚೆ ಕಚೇರಿ ಎದುರು, ಬೆಂಗಳೂರು - 560 020

*ಎಲ್ಲ ವರ್ಗದ ಶೋಷಿತ ಜನಸಮುದಾಯಗಳಿಂದ ಒಂದೊಂದು ಹನಿಯಂತೆ ಹೊರಟು ಹಳ್ಳ ಹೊಳೆ ಸಾಗರಗಳಾಗಿ ಭೋರ್ಗರೆಯುತ್ತ ಸಾಗುವ ಇಲ್ಲಿನ ಹೋರಾಟದ ಹಾಡುಗಳ ಗಾಂಭೀರ್ಯವೇ ಬೇರೆ. ಇವು ಶೋಷಕರಿಗೆ ಎಚ್ಚರಿಕೆಯ ಮಾತುಗಳೂ ಹೌದು. ಅಮಾನವೀಯ ಕೃತ್ಯಗಳನ್ನು ಖಂಡಿಸುತ್ತ ಜಾಗೃತಿಯನ್ನುಂಟುಮಾಡುವ ನ್ಯಾಯಯುತ ಹೋರಾಟಕ್ಕೆ ಕರೆ ನೀಡುವಂಥ ಹಾಡುಗಳು ಇಲ್ಲಿವೆ. ಬೇರೆ ಬೇರೆ ಜಾಥಾಗಳಲ್ಲಿ, ಜನ ಚಳುವಳಿಗಳಲ್ಲಿ ಕೇಳುಗರ ಎದೆಯುಬ್ಬುವಂತೆ ಮಾಡಿದ ಹಾಡುಗಳ ಸಂಗ್ರಹ.*



**ಬಾಳೆಗಿಡ ಗೊನೆ ಹಾಕಿತು** (ಕಥೆಗಳು)

*ಬಿ. ಎಂ. ಬಶೀರ್*

**ಪುಟ : 68** **ಬೆಲೆ : ರೂ. 30**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - 583 103

*ಕೌಟುಂಬಿಕ ಹಿನ್ನೆಲೆಯಿರುವ ಸಾಮಾಜಿಕ ನಿಷ್ಠುರ ಸತ್ಯಗಳನ್ನು ಬಿಡಿಸಿಡುವ ಏಳು ಸಣ್ಣ ಕಥೆಗಳು ಈ ಸಂಕಲನದಲ್ಲಿವೆ. ಶೈಲಿ ಅತಿರಂಜಿತವೂ ನೀರಸವೂ ಅಲ್ಲದಂಥ ಹದವಾದ ಬರವಣಿಗೆ. ಮನೆ ಮನೆಗಳಲ್ಲಿ ತನ್ನ ಛಾಪು ಒತ್ತಿ ಬದುಕನ್ನು ಅಸಹನೀಯಗೊಳಿಸುವ ಬಡತನವನ್ನು ಮೀರಿ ಮಾನವೀಯತೆಯೊಂದು ಎದ್ದುನಿಂತು ಎಲ್ಲವನ್ನೂ ಸಂಭಾಳಿಸಿಕೊಂಡು ಹೋಗುತ್ತದೆ. ಕಥೆಗಳಲ್ಲಿನ ಪಾತ್ರಗಳೆಲ್ಲ ಒಂದು ಪರಿಧಿಯನ್ನು ಸುತ್ತುತ್ತಾ ಹೊರಬರಲು ದಾರಿ ಕಾಣದೆ ಚಡಪಡಿಸುತ್ತವೆ.*



**ರಚನಾತ್ಮಕ ಚಿಂತನೆಗಳು** (ಲೇಖನ ಸಂಗ್ರಹ)

*ಪ್ರೊ॥ ಲಲಿತಾಂಬ ವೃಷಭೇಂದ್ರಸ್ವಾಮಿ*

**ಪುಟ : 130** **ಬೆಲೆ : ರೂ. 45**

**ಪ್ರಸಾದ ಪ್ರಕಾಶನ,** 'ಶಿವಪ್ರಸಾದ', 8ನೇ ಕ್ರಾಸ್, ಕಲ್ಯಾಣ ನಗರ, ಧಾರವಾಡ - 580 007

*ಸಾಹಿತ್ಯ ರಚನೆಯಿಂದ ಸಮಾಜಕ್ಕೆ ಒಳ್ಳೆಯದಾಗಬೇಕೆಂಬ ಹಂಬಲ ಹೊತ್ತಿರುವ ಲೇಖಕಿ ಮೂವತ್ತು ಲೇಖನಗಳಲ್ಲಿ ತಮ್ಮ ಅಮೂಲ್ಯ ಚಿಂತನೆಗಳ ಧಾರೆಯನ್ನು ಹರಿಸಿದ್ದಾರೆ. ಸಭ್ಯ ನಡತೆ, ಉತ್ತಮ ಮೌಲ್ಯಗಳಿಂದ ನಾವು ಶ್ರೇಷ್ಠತೆಯ ತುತ್ತ ತುದಿಗೇರಲು ಸಾಧ್ಯವೆಂದು ಈ ಲೇಖನಗಳು ನಿರೂಪಿಸುತ್ತವೆ. ಉತ್ತಮ ವಿಚಾರಗಳು ಎಳೆಯರ ಮನದಲ್ಲಿ ಪರಿಣಾಮಕಾರಿಯಾಗಿ ಮೂಡುವಂತೆ ಹಿರಿಯರು ಶ್ರಮಿಸಬೇಕಾದ ಅಗತ್ಯದ ಬಗ್ಗೆ ಒತ್ತಿ ಹೇಳಲಾಗಿದೆ.*



**ವಿಚಾರ ಸೌರಭ** (ಲೇಖನಗಳು)

*ಎ. ಆರ್. ನಾರಾಯಣ ಘಟ್ಟ*

**ಪುಟ : 96** **ಬೆಲೆ : ರೂ. 40**

**ಗೀತಾ ಕುಟೀರ,** ನಂ. 1, ಎಚ್. ಬಿ. ಸಮಾಜ ಲಿಂಕ್ ರಸ್ತೆ, ಬಸವನಗುಡಿ, ಬೆಂಗಳೂರು - 560 004

*ವಿಚಾರ ಮಾಡುವ ಅಪೂರ್ವ ಶಕ್ತಿಯಿಂದಾಗಿ ಮಾನವ ಇತರ ಜೀವಿಗಳಿಗಿಂತ ಭಿನ್ನವಾಗಿ ನಿಲ್ಲುತ್ತಾನೆ. ಅದರಲ್ಲೂ ಸದ್ವಿಚಾರ-ಸದಾಚಾರ ಇರುವಲ್ಲಿ ಆತನ ಏಳಿಗೆ ಮತ್ತಷ್ಟು ಬೇಗ ನಿಶ್ಚಿತ. ಇಲ್ಲಿನ ಲೇಖನಗಳಲ್ಲಿ ಮಾನವನಿಗೆ ಬೇಕಾದ ಭಾವನಾತ್ಮಕ-ಮಾನಸಿಕ ಸಂತೋಷವನ್ನು ಪಡೆಯಲು ಮಾರ್ಗದರ್ಶನವಿದೆ. ತಮ್ಮ ನಡೆ- ನುಡಿಗಳನ್ನು ವಿಚಾರವಂತಿಕೆಯಿಂದ ಶ್ರೀಮಂತಗೊಳಿಸಬೇಕೆಂದು ತಿಳಿಹೇಳುವ ಲೇಖಕರು ಉತ್ತಮ ಶಿಕ್ಷಕ ಪುರಸ್ಕೃತರು.*



**ಗಾಂಧೀ ಗಿಡ** (ಕವನಗಳು)

*ಸತೀಶ ಕುಲಕರ್ಣಿ*

**ಪುಟ : 82** **ಬೆಲೆ : ರೂ. 35**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ-583 103

*ನಮ್ಮ ದೇಶದ ಏಳ್ಗೆಗಾಗಿ ಮಹಾತ್ಮಾ ಗಾಂಧಿಯವರು ಉಪದೇಶಿಸಿದ ತತ್ವಾದರ್ಶಗಳನ್ನು ಲೆಕ್ಕಿಸದೆ ಮುನ್ನಡೆದ ನಾವು ಬಹಳಷ್ಟು ಕಡೆ ಎಡವಿದ್ದೇವೆ. ಪ್ರಸ್ತುತ ಸಂದರ್ಭದಲ್ಲಿ ಗಾಂಧಿ ಮತ್ತೆ ನೆನಪಾಗುತ್ತಾರೆ. ಸ್ವಾತಂತ್ರ್ಯದ ದೀಪ ಹಚ್ಚಿಟ್ಟು ದಾರಿ ತೋರಿದ ಮಹಾತ್ಮನ ಹೆಜ್ಜೆಗಳನ್ನು ಗುರುತಿಸಿ ಮುನ್ನಡೆಯುವ ಹಂಬಲ ಮನದಾಳದಿಂದ ಕವಿತೆಗಳಾಗಿ ಹೊರಹೊಮ್ಮಿವೆ. ನೀರುಣಿಸಿ ಬೆಳೆಸಿದಲ್ಲಿ ಮತ್ತೆ ಈ ಗಿಡ ಚಿಗುರಿ ಬೆಳೆದು ಫಲ ಸಿಗುವುದೆಂಬ ಆಕಾಂಕ್ಷೆ ಇದೆ.*

**ಬಗೆ** (ಲೇಖನ ಸಂಗ್ರಹ)

*ಸಬಿಹಾ ಭೂಮಿಗೌಡ*

**ಪುಟ : 128** **ಬೆಲೆ : ರೂ. 60**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - 583 103

*ದಕ್ಷಿಣ ಕನ್ನಡದ ಲೇಖಕಿಯರ ಸಾಹಿತ್ಯಕ್ಕಷ್ಟೇ ಸೀಮಿತವಾಗಿ ಇರುವ ವಿವಿಧ ವಿಚಾರಗೋಷ್ಠಿಗಳಲ್ಲಿ ಈಗಾಗಲೇ ಮಂಡಿಸಿರುವ ಪ್ರಬಂಧಗಳ ಸಂಕಲನ. ಅಲ್ಲಿನ ಮಹಿಳಾ ಸಾಹಿತ್ಯದ ನಿಲುವುಗಳನ್ನು ಅಧ್ಯಯನ ಮಾಡಿ ವಿಶ್ಲೇಷಣೆಯನ್ನು ತಮ್ಮ ತಾತ್ವಿಕ ನೆಲೆಯಲ್ಲಿ ಮಂಡಿಸಲಾಗಿದ್ದು ಆ ಬಗೆಗೆ ಒಂದು ಸ್ಥೂಲ ಪರಿಚಯವನ್ನು ಮಾಡಿಕೊಡಲಾಗಿದೆ. ಸಂಪ್ರದಾಯದ ಸಂಕೋಲೆಯಿಂದ ಹೊರಬಂದು ಹೊಸ ವ್ಯವಸ್ಥೆಯೊಂದಿಗೆ ಸ್ಪಂದಿಸಿದ ಸಾಹಿತ್ಯದ ಬಗ್ಗೆ ವಿವರಗಳಿವೆ.*

- ಇಂದಿರಾ ಕುಮಾರಿ



# ಕಾಶ್ಮೀರ ಸಮಸ್ಯೆಗೆ ಮಿಲಿಟರಿ ಪರಿಹಾರ ಸಾಧ್ಯವಿಲ್ಲ – ಎಂ. ಯೂಸುಫ್ ತರಿಗಾಮಿ

*ಜಮ್ಮು-ಕಾಶ್ಮೀರವನ್ನು ಆತಂಕದ ಪರಿಸ್ಥಿತಿ ಇರುವ ಪ್ರದೇಶವೆಂದು ಘೋಷಿಸಿದ ದಿನದಂದು ಆ ರಾಜ್ಯದ ವಿಧಾನಸಭೆಯ ಸದಸ್ಯ ಮತ್ತು ಅಲ್ಲಿನ ಸಿಪಿಐ(ಎಂ) ಪಕ್ಷದ ರಾಜ್ಯ ಕಾರ್ಯದರ್ಶಿ ಶ್ರೀ ಎಂ. ಯೂಸುಫ್ ತರಿಗಾಮಿ ಅವರು ಬೆಂಗಳೂರಿನಲ್ಲಿದ್ದರು. ಕಾಶ್ಮೀರದ ಜನರ ಹಾಗೂ ಸಂಸ್ಕೃತಿಯ ಪ್ರತಿನಿಧಿಯಾಗಿರುವ ಅವರು ಜಮ್ಮು-ಕಾಶ್ಮೀರದಲ್ಲಿ ನೆಲೆಸಿರುವ ಪ್ರಕ್ಷುಬ್ಧ ಪರಿಸ್ಥಿತಿ ಕುರಿತು, ಅಲ್ಲಿನ ಜನರು ಎದುರಿಸುತ್ತಿರುವ ಅಪಾರ ಕಷ್ಟ ಸಂಕಟಗಳ ಕುರಿತು, ಮತ್ತು ಪರಿಹಾರ ಕ್ರಮಗಳ ಕುರಿತು ತಮ್ಮ ಹಾಗೂ ಪಕ್ಷದ ಅಭಿಪ್ರಾಯಗಳನ್ನು 'ಹೊಸತು' ಜೊತೆಗೆ ಹಂಚಿಕೊಂಡರು. ಅವರ ಮಾತುಗಳು ಭಾರತದಲ್ಲಿ ಮತ್ತು ಜಮ್ಮು-ಕಾಶ್ಮೀರ ಪ್ರಾಂತದಲ್ಲಿ ಶಾಂತಿಯನ್ನು ಬಯಸುವ ಎಲ್ಲ ಜನರ ಕಳಕಳಿಯನ್ನು ಧ್ವನಿಸುವಂತಿದ್ದವು. 'ಹೊಸತು' ಸಂಪಾದಕ ಡಾ|| ಜಿ. ರಾಮಕೃಷ್ಣ ಎಸ್. ಸುರೇಂದ್ರ ಹಾಗೂ ಕೆ. ಪಿ. ಸ್ವಾಮಿ ಮಾತುಕತೆಯಲ್ಲಿ ಭಾಗವಹಿಸಿದ್ದರು. ಈ ಸಂದರ್ಶನ ಲೇಖನವನ್ನು ಸಿದ್ಧಗೊಳಿಸಿದವರು ಎಸ್. ಸುರೇಂದ್ರ ಮತ್ತು ಕೆ. ಪಿ. ಸ್ವಾಮಿ.*

**ಹೊಸತು** : ತರಿಗಾಮಿಯವರೇ, ಬೆಂಗಳೂರಿನಲ್ಲಿ ಹಲವು ಬಿಡುವಿಲ್ಲದ ಕಾರ್ಯಕ್ರಮಗಳ ಮಧ್ಯೆ 'ಹೊಸತು' ಸಂದರ್ಶನಕ್ಕೆ ಅವಕಾಶ ನೀಡಿದ್ದಕ್ಕಾಗಿ ನಮಗೆ ಸಂತೋಷವಾಗಿದೆ. ಅಲ್ಲಿ ಸಕ್ರಿಯ ರಾಜಕೀಯ ಕಾರ್ಯಕರ್ತರಾಗಿರುವ ನಿಮ್ಮಿಂದ ಅಲ್ಲಿನ ಪರಿಸ್ಥಿತಿ ತಿಳಿದುಕೊಳ್ಳುವುದು ನಮ್ಮ ಉದ್ದೇಶ. ಮೊದಲನೆಯದಾಗಿ, ಹಲವು ದಶಕಗಳಿಂದ ಮುಂದುವರಿಯುತ್ತಿರುವ ಜನಾಭಿಪ್ರಾಯ ಸಂಗ್ರಹದ ಕೇಳಿಕೆಯನ್ನು ಕುರಿತು ನಿಮ್ಮ ಅಭಿಪ್ರಾಯವೇನು ? ೧೯೪೭ರಲ್ಲಿ ಈ ಪ್ರಶ್ನೆಯನ್ನು ವಿಶ್ವಸಂಸ್ಥೆಗೆ ಕೊಂಡೊಯ್ಯುವ ಮೂಲಕ ಜವಾಹರಲಾಲ ನೆಹರೂ ತಪ್ಪು ಮಾಡಿದರೆಂದು, ಇಂದಿನ ಎಲ್ಲ ಸಮಸ್ಯೆಗಳಿಗೆ ಅದೇ ಮೂಲ ಕಾರಣವೆಂದು ಮಾಧ್ಯಮಗಳಲ್ಲಿ ಆಗಾಗ್ಗೆ ಚಿತ್ರಿಸಲಾಗುತ್ತಿದೆ. ನೀವೇನೆನ್ನುವಿರಿ ?

**ತರಿಗಾಮಿ** : ಜನಾಭಿಪ್ರಾಯ ಸಂಗ್ರಹ ಕುರಿತ ನಿರ್ಣಯದ ಬಗ್ಗೆ ಅಷ್ಟು ಸರಳವಾದ ತೀರ್ಮಾನಕ್ಕೆ ಬರುವುದು ಸರಿಯಾಗದು. ನೆಹರೂ ಅವರನ್ನು ನಿಂದನೆಗೆ ಗುರಿಮಾಡಲಾಯಿತು ಅಷ್ಟೆ. ಅಂದಿನ ಪರಿಸ್ಥಿತಿಯನ್ನು ಗಣನೆಗೆ ತೆಗೆದುಕೊಳ್ಳಬೇಕು: ದೇಶ ಸ್ವಾತಂತ್ರ್ಯ ಗಳಿಸುವಾಗ ಮತಧರ್ಮದ ಆಧಾರದ ಮೇಲೆ ಪಾಕಿಸ್ತಾನ ಉದಯವಾಯಿತು. ಕಾಶ್ಮೀರ ಬಹುಸಂಖ್ಯಾತ ಮುಸ್ಲಿಮರು ಬಾಳುತ್ತಿದ್ದ ಪ್ರದೇಶವಾದ್ದರಿಂದ ಪಾಕಿಸ್ತಾನ ಅದರ ಮೇಲೆ ಹಕ್ಕು ಸಾಧಿಸಿತು. ಮತಧರ್ಮವನ್ನು ಆಧರಿಸಿ ಭಾರತದ ಮೇಲೆ ಮೇಲುಗೈ ಸಾಧಿಸಬಹುದೆಂದು ಹಾಗೂ ಕಾಶ್ಮೀರವನ್ನು ಹೇಗೂ ತನಗೆ ಬಳುವಳಿಯಾಗಿ ನೀಡಲಾಗುತ್ತದೆ ಎಂದು ಪಾಕಿಸ್ತಾನ ಭಾವಿಸಿತ್ತು.

೧೯೪೭ರಲ್ಲಿ ಮಹಾರಾಜ ಹರಿ ಸಿಂಗ್ ಕಾಶ್ಮೀರದ ರಾಜರಾಗಿದ್ದರು. ಹಿಂದು ಧರ್ಮದವರಾಗಿದ್ದರೂ ಹಲವು ಕಾರಣಗಳಿಂದಾಗಿ ಭಾರತದೊಂದಿಗೆ ಸೇರಲು ಹಿಂಜರಿಯುತ್ತಿದ್ದರು. ಇದು ಇತಿಹಾಸದ ಒಂದು ಭಾಗವಾಗಿದೆ. ಜನರ ಗಮನವನ್ನು ಬೇರೆಡೆಗೆ ತಿರುಗಿಸಲು ಉದ್ದೇಶಪೂರ್ವಕ ಪ್ರಯತ್ನ ನಡೆಸಲಾಯಿತು. ಇದಕ್ಕೆಲ್ಲ ಮುಸ್ಲಿಮರೇ ಕಾರಣವೆಂದು ಅಪಪ್ರಚಾರ ಮಾಡಲಾಯಿತು. ಮಹಾರಾಜ ಹರಿ ಸಿಂಗರು ಪಾಕಿಸ್ತಾನದ ನಾಯಕತ್ವದೊಂದಿಗೆ ಒಂದು ತಾಟಸ್ಥ್ಯದ ಒಪ್ಪಂದ ಮಾಡಿಕೊಂಡಿದ್ದರೆಂಬುದನ್ನು ಅರ್ಥಮಾಡಿಕೊಳ್ಳಬೇಕು. ಡಾ|| ಶಾಮ್‌ಪ್ರಸಾದ್ ಮುಖರ್ಜಿಯವರ ನಾಯಕತ್ವದಲ್ಲಿದ್ದ ರಾಜಕೀಯ ಸಂಘಟನೆ ಪ್ರಜಾ ಪರಿಷತ್ – ಮುಂದೆ ಇದು 'ಜನಸಂಘ'ವಾಯಿತು. ಅನಂತರ 'ಭಾಜಪ' ಆಗಿದೆ – ರಾಜಾ ಹರಿ ಸಿಂಗರ ಬೆಂಬಲಕ್ಕೆ ನಿಂತಿತು. ಜನರು ಇದನ್ನು ಹೇಗೆ ಎದುರಿಸಿ ನಿಂತರು ? ಅದು ಎಲ್ಲರಿಗೂ ಗೊತ್ತಿದೆ. ಕಾಶ್ಮೀರ ಭಾರತದೊಂದಿಗೆ ಸ್ವಯಮಿಚ್ಛೆಯಿಂದ ಸೇರಿಕೊಳ್ಳಲು ಶಾಮಪ್ರಸಾದ್ ಮುಖರ್ಜಿ ರೂವಾರಿಯಾಗಿದ್ದರು ಎಂದು ಹೇಳಲಾಗುವುದು ಮಹಾನ್ ವ್ಯಂಗ್ಯವಾಗಿದೆ.

**ಹೊ** : ಹರಿ ಸಿಂಗರ ಯೋಜನೆಗಳೇನಿದ್ದುವು ?

**ತ** : ತನ್ನ ಸ್ವಂತ ಸ್ಥಾನ ಕಾಯ್ದುಕೊಳ್ಳುವುದರಲ್ಲಿ ಆಸಕ್ತರಾಗಿದ್ದರಲ್ಲದೆ ಕಾಶ್ಮೀರದ ಜನತೆಯ ಹಿತಾಸಕ್ತಿಗಳಲ್ಲಿ ಅವರಿಗೆ ಆಸಕ್ತಿಯಿರಲಿಲ್ಲ. ಆಗ ಶೇಕ್ ಅಬ್ದುಲ್ಲಾರ ನಾಯಕತ್ವದಲ್ಲಿ ನ್ಯಾಷನಲ್ ಕಾನ್ಫರೆನ್ಸ್ 'ಕಾಶ್ಮೀರ ಬಿಟ್ಟು ತೊಲಗಿ' ಚಳುವಳಿಯನ್ನು ಪ್ರಾರಂಭಿಸಿತು. ಈ ಚಳುವಳಿ ಬ್ರಿಟಿಷರ ವಿರುದ್ಧ ಮಾತ್ರವಲ್ಲದೆ ರಾಜಾ ಹರಿ ಸಿಂಗರು ಪ್ರತಿನಿಧಿಸುತ್ತಿದ್ದ ಜಮೀನುದಾರರ ವಿರುದ್ಧವೂ ಆಗಿತ್ತು. ಇದು ಕಾಶ್ಮೀರದ ಇತಿಹಾಸದಲ್ಲಿ ಒಂದು ಮಹತ್ವದ ಸಂದರ್ಭವಾಗಿದೆ. 'ಭಾರತ ಬಿಟ್ಟು ತೊಲಗಿ' ಚಳುವಳಿ ಭಾರತದಲ್ಲಿ ನಡೆಯುತ್ತಿದ್ದ ಸಂದರ್ಭದಲ್ಲೇ ನ್ಯಾಷನಲ್ ಕಾನ್ಫರೆನ್ಸ್ 'ಕಾಶ್ಮೀರ ಬಿಟ್ಟು ತೊಲಗಿ' ಚಳವಳಿ ನಡೆಸುತ್ತಿತ್ತು. ಕಾಶ್ಮೀರದ ಬಹುಸಂಖ್ಯಾತ ಮುಸ್ಲಿಮರು ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಟಕ್ಕೋಸ್ಕರ ಮುಸ್ಲಿಂ ಪಾರ್ಟಿಯಲ್ಲಿ ಸೇರಿಕೊಳ್ಳುವ ಮೂಲಕ ಜಿನ್ನಾರನ್ನು ತಿರಸ್ಕರಿಸಿದರು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಮಹಾತ್ಮ ಗಾಂಧಿ ನಾಯಕತ್ವದ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನೊಂದಿಗೆ ಸೇರಿಕೊಂಡರು. ಇದು ದ್ವಿ-ರಾಷ್ಟ್ರಗಳ ಸಿದ್ಧಾಂತದ ಸಂಪೂರ್ಣ ನಿರಾಕರಣೆಯಾಗಿತ್ತು. ಆದುದರಿಂದ, ಭಾರತದೊಂದಿಗೆ ಸ್ವ-ಇಚ್ಛೆ ಯಿಂದ ಸೇರಿಕೊಂಡ ವಿಷಯ ಇದ್ದಕ್ಕಿದ್ದಂತೆ ಸಂಭವಿಸಿದುದಲ್ಲ ಮತ್ತು ಯಾರದೇ ಒತ್ತಡದಿಂದ ಸಂಭವಿಸಿದುದಲ್ಲ. ಆದರೆ ಪಾಕಿಸ್ತಾನದೊಂದಿಗೆ ಸೇರಿಕೊಳ್ಳಲು ರಾಜಾ ಹರಿ ಸಿಂಗರ ಮೇಲೆ ಪಾಕಿಸ್ತಾನ ಸಾಕಷ್ಟು ಒತ್ತಡ ತಂದಿತು. ಅವರು ಒತ್ತಡಕ್ಕೆ ಬಲಿಯಾಗಲಿಲ್ಲ ಅಥವಾ ಸ್ವತಃ ಹೋರಾಡಲೂ ಇಲ್ಲ. ಪಾಕಿಸ್ತಾನದ ಹಲ್ಲೆ ಆರಂಭವಾಯಿತು. ಆಗ, ಸಹಾಯಕ್ಕಾಗಿ ಭಾರತ ಸರ್ಕಾರಕ್ಕೆ ಮನವಿ ಮಾಡಿಕೊಂಡರು. ಇದಕ್ಕೆ ಪ್ರತಿಯಾಗಿ ಭಾರತ ಸರಕಾರ ಕಾಶ್ಮೀರದ ಜನರ ಅಭಿಪ್ರಾಯ ಕೋರುವಂತೆ ಹರಿ ಸಿಂಗರಿಗೆ ಸಲಹೆ ಮಾಡಿತು. ಕಾಶ್ಮೀರದ ಜನಪ್ರಿಯ ನಾಯಕ ಶೇಕ್ ಅಬ್ದುಲ್ಲ ಮತ್ತು ಭಾರತ ಸರ್ಕಾರದ ಮಧ್ಯೆ ಒಪ್ಪಂದವಾದದ್ದು ಹೀಗೆ. ಕಾಶ್ಮೀರ ಭಾರತದೊಂದಿಗೆ **ಸ್ವ ಇಚ್ಛೆಯಿಂದ ಸೇರಿದುದು** ಇಂಥ ಪರಿಸ್ಥಿತಿಗಳಲ್ಲಿ. ಈ ಕಾರಣಗಳು ಜನರಿಗೆ ತಿಳಿದಿಲ್ಲ ಅಥವಾ ಉದ್ದೇಶಪೂರ್ವಕ ವಾಗಿಯೇ ವಿವರಿಸಿಲ್ಲ. ಇತರ ರಾಜ್ಯಗಳು ಭಾರತ ದೊಂದಿಗೆ **ಐಕ್ಯಗೊಂಡವು**. ಇದಕ್ಕೂ **ಸ್ವ ಇಚ್ಛೆಯಿಂದ ಸೇರಿಕೊಳ್ಳುವುದಕ್ಕೂ** ವ್ಯತ್ಯಾಸವಿದೆ. ಇದರ ಹಿನ್ನೆಲೆಯಲ್ಲಿ ಐತಿಹಾಸಿಕ ಕಾರಣಗಳಿವೆ. ಕಾಶ್ಮೀರದ ಬಹುಸಂಖ್ಯಾತರು ಮುಸ್ಲಿಮರಾಗಿರುವುದರಿಂದ ಅವರು ಪಾಕಿಸ್ತಾನದೊಂದಿಗೆ **ಸ್ವ ಇಚ್ಛೆಯಿಂದ ಸೇರಿಕೊಳ್ಳಬೇಕೆಂದು** ವಾದಿಸಲಾಯಿತು. ಆಗ ನೆಹರೂ **ಜನಾಭಿಪ್ರಾಯದ** ವಿಷಯವನ್ನು ಮುಂದಿರಿಸಿದರು. ಈ ವಿಷಯದಲ್ಲಿ ನೆಹರೂ ಅವರನ್ನು ಪ್ರಶ್ನೆ ಮಾಡುವವರೊಂದಿಗೆ ತಕರಾರು ಎಬ್ಬಿಸುವ ಉದ್ದೇಶ ನನಗಿಲ್ಲ. ನೆಹರು ತಪ್ಪು ಮಾಡಿದರೆಂದು ಅವರು ಹೇಳುತ್ತಾರೆ. ಅವರು ಒಂದು ನಿರ್ದಿಷ್ಟ ಸಂದರ್ಭದಲ್ಲಿ,

ಪರಿಸ್ಥಿತಿಯಲ್ಲಿ ಇಂಥ ಕ್ರಮ ಕೈಗೊಂಡರು. ಇದನ್ನು ತಪ್ಪಿಸಬಹುದಿತ್ತೆ ಎಂಬುದರ ಬಗ್ಗೆ ತೀರ್ಮಾನಿಸುವುದು ಕಠಿಣ. ನೆಹರು ವಿವಾದವನ್ನು ವಿಶ್ವ ಸಂಸ್ಥೆಗೆ ಕೊಂಡೊಯ್ದು, ಅದು ಸಮಸ್ಯೆಯನ್ನು ಮತ್ತಷ್ಟು ಸಂಕೀರ್ಣಗೊಳಿಸಿತು ಎಂಬುದು ಮಾತ್ರವಲ್ಲ. ಪೂರ್ವ ಮತ್ತು ಪಶ್ಚಿಮದ ಎಲ್ಲ ಮುಸ್ಲಿಮರು ಒಂದುಗೂಡಬೇಕು ಎಂದು ಪಾಕಿಸ್ತಾನ ಮುಂದಿರಿಸಿದ ಅಪಾಯಕಾರಿ ಹಾಗೂ ವಿಚಿತ್ರ ಸಿದ್ಧಾಂತ ಈ ಎಲ್ಲ ಸಮಸ್ಯೆಗಳಿಗೆ ಕಾರಣವಾಯಿತು. ಬಾಂಗ್ಲಾ ದೇಶದ ಉದಯದೊಂದಿಗೆ ಈ ಮಿಥ್ ನುಚ್ಚುನೂರಾಗಿದೆ. ಭಾರತದ ಹಸ್ತಕ್ಷೇಪದಿಂದಲೇ ಬಾಂಗ್ಲಾ ದೇಶ ಉದಯವಾಯಿತು ಎಂದು ನಂಬುವ ಅನೇಕ ಮಂದಿ ಧಾರ್ಮಿಕ ಉಗ್ರರು ಈಗಲೂ ಇದ್ದಾರೆ.

೧೯೪೭ರ ಸಂದರ್ಭದಲ್ಲಿ ಭಾರತದ ಅನೇಕ ಭಾಗಗಳಲ್ಲಿ ರಕ್ತದ ಕೋಡಿ ಹರಿದಿತ್ತು. ಹಿಂದುಗಳು, ಮುಸ್ಲಿಮರು, ಸಿಖ್ಖರು ಹತ್ಯೆಗೀಡಾಗುತ್ತಿದ್ದರು. ಆಗ ಸೆಕ್ಯುಲರ್ ಭಾರತದ ನಿಜವಾದ ಪ್ರತೀಕ ಕಾಶ್ಮೀರದಲ್ಲಿದೆ ಎಂಬ ವಾಸ್ತವವನ್ನು ಗುರುತಿಸಿದವರು ಮಹಾತ್ಮ ಗಾಂಧಿ. ಎಲ್ಲ ಧರ್ಮದವರು ಶಾಂತಿಯಿಂದ ಒಗ್ಗಟ್ಟಾಗಿ ಬಾಳುತ್ತಿರುವುದನ್ನು ಅವರು ಕಂಡರು. ಅದೊಂದು ಆಶಾಕಿರಣವಾಗಿ ಕಾಣಿಸಿತು. ಜನರು ಪಾಕ್ ಸೈನ್ಯಕ್ಕೆ ಬೆಂಬಲ ನೀಡಬಹುದಿತ್ತು. ಭಾರತದ ಸೈನ್ಯ ಅವರನ್ನು ತಡೆಯಲು ಸಾಧ್ಯವಿರಲಿಲ್ಲ. ವಿಶ್ವಸಂಸ್ಥೆಯ ನಿರ್ಣಯವಿರಲಿ, ಇಲ್ಲದಿರಲಿ, ಕಾಶ್ಮೀರದ ಜನರು ಸ್ವ-ಇಚ್ಛೆಯಿಂದ ಭಾರತದೊಂದಿಗೆ ಸೇರಿಕೊಂಡುದು ಸೆಕ್ಯುಲರ್ ಭಾರತಕ್ಕೆ ದೊರಕಿದ ಗೆಲುವಾಗಿತ್ತು. ಭಾರತದ ಸೈನ್ಯವಿಲ್ಲದಿದ್ದರೆ ಕಾಶ್ಮೀರದ ಜನರು ಪಾಕಿಸ್ತಾನದೊಂದಿಗೆ ಸೇರಿಕೊಳ್ಳುತ್ತಿದ್ದರು ಎಂದು ತಪ್ಪಾಗಿ ಹೇಳಲಾಗುತ್ತದೆ. ಈ ಸಿದ್ಧಾಂತವನ್ನು ಬೆಂಬಲಿಸುವುದಾದರೆ ಮತ್ತೆ ದ್ವಿ-ರಾಷ್ಟ್ರ ಸಿದ್ಧಾಂತವನ್ನು ಬೆಂಬಲಿಸಿದಂತೆಯೇ ಆಗುತ್ತದೆ. ರಾಜಾ ಹರಿ ಸಿಂಗ್, ಶೇಖ್ ಅಬ್ದುಲ್ಲಾರ ನಾಯಕತ್ವದಲ್ಲಿ ಭಾರತದೊಂದಿಗೆ ಸೇರಿಕೊಳ್ಳಲು ಕಾಶ್ಮೀರದ ಜನರ ಸ್ವತಂತ್ರ ಇಚ್ಛೆಯೇ ಕಾರಣವಾಗಿತ್ತು.

**ಹೊ :** ಎಲ್. ಕೆ. ಅದ್ವಾನಿಯವರು ಸಹ ಆಗಿನ ಸಂದರ್ಭದಲ್ಲೇ ಭಾರತದ ಸೈನ್ಯಕ್ಕೆ ಅವಕಾಶ ನೀಡಿದ್ದ ಪಕ್ಷದಲ್ಲಿ ಪಾಕ್ ಸೈನ್ಯವನ್ನು ಸೋಲಿಸಿಬಿಡುತ್ತಿತ್ತು, ಇಂದಿನ ಪಾಕಿಸ್ತಾನವೇ ಉಳಿದಿರುತ್ತಿರಲಿಲ್ಲ ಎಂದು ವಾದಿಸುತ್ತಿದ್ದರು. ನಿಯಂತ್ರಣ ರೇಖೆ ಇಲ್ಲದಿರುತ್ತಿದ್ದರೆ ಉಗ್ರರು ನುಗ್ಗಿ ಬರುವ ಸಂಭವವೇ ಇರುತ್ತಿರಲಿಲ್ಲ ಎಂದು ಕೆಲವು ಮತೀಯವಾದಿಗಳು ವಾದಿಸುತ್ತಾರೆ. ಆಗಲೂ ಉಗ್ರರನ್ನು ನೇರವಾಗಿ ಪಾಕಿಸ್ತಾನದಿಂದಲೇ ಕಳಿಸಬಹುದಿತ್ತು ಎಂಬುದನ್ನು ಅವರು ಮರೆಯುತ್ತಾರೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು ?

**ತ :** ಇದು ಮತ್ತೆ ಕಾಶ್ಮೀರದಲ್ಲಿನ ಸಮಸ್ಯೆಯನ್ನು ಕಡೆಗಣಿಸುವ ಪ್ರಯತ್ನವಾಗಿದೆ. ಪಾಕ್ ಆಕ್ರಮಿತ ಪ್ರದೇಶದಿಂದ ಚಟುವಟಿಕೆ ನಡೆಸುತ್ತಿರುವ ಉಗ್ರರನ್ನು ನಿರ್ಬಂಧಿಸಲು ಅದ್ವಾನಿಯವರಿಗೆ, ಅವರ ಪರಿವಾರದವರಿಗೆ ಅಡ್ಡಿಯಾಗಿರುವವರು ಯಾರು ? ಮೊದಲು, ಕಾಶ್ಮೀರಿ ಜನಸಾಮಾನ್ಯರ ಆಶೋತ್ತರಗಳನ್ನು ಗಣನೆಗೆ ತೆಗೆದುಕೊಳ್ಳಲು ಸಮರ್ಥರಾಗಬೇಕು. ರಾಜಕೀಯ ಪ್ರಶ್ನೆಯನ್ನು ಸೈನ್ಯದ ಸಹಾಯದಿಂದ ಬಗೆಹರಿಸಲು ಎಂದಿಗೂ ಸಾಧ್ಯವಿಲ್ಲ. ಜಮ್ಮು-ಕಾಶ್ಮೀರದ ಜನರ ಕುರಿತು ಹೇಳುವುದಾದರೆ, ವಿಶೇಷ ಸಂದರ್ಭಗಳ ಕಾರಣ ಅವರು ಭಾರತದೊಂದಿಗೆ ಸೇರಲು ಸಮ್ಮತಿಸಿದರು. ಪ್ರತಿಯಾಗಿ ಅವರ ಅನನ್ಯತೆಯನ್ನು ಉಳಿಸಿಕೊಳ್ಳಲು ಸವಲತ್ತುಗಳನ್ನು ನೀಡಲಾಯಿತು. ಈಗ ಆಡಳಿತ ನಡೆಸುತ್ತಿರುವ ಸರಕಾರದಲ್ಲಿರುವ ಕೆಲವರು ಸಂವಿಧಾನದ ೩೭೦ನೇ ವಿಧಿಯನ್ನು ರದ್ದುಪಡಿಸಿದರೆ ಕಾಶ್ಮೀರವನ್ನು ಭಾರತದ ಇತರ ಭಾಗಗಳೊಂದಿಗೆ ಐಕ್ಯಗೊಳಿಸಿಕೊಳ್ಳುವ ಪ್ರಕ್ರಿಯೆ ಮುಕ್ತಾಯವಾಗುತ್ತಿತ್ತು ಎಂದು ಆಗಾಗ ಹೇಳುತ್ತ ಬಂದಿದ್ದಾರೆ. ದೇಶದ ಇತರ ಭಾಗಗಳಲ್ಲಿ ಇಂಥ ನಿಬಂಧನೆ ಇಲ್ಲ. ೩೭೦ನೇ ವಿಧಿ ಕಾಶ್ಮೀರವನ್ನು ಭಾರತದಲ್ಲಿ ಸೇರಿಸಿಕೊಳ್ಳುವುದಕ್ಕಾಗಿ ಒಂದು ವಿಶೇಷ ಐತಿಹಾಸಿಕ ಸಂದರ್ಭದಲ್ಲಿ ನೀಡಲಾದ ಒಂದು ಅವಕಾಶ.

ಈ ಸಾಮರಸ್ಯ ಭಾವನೆಯನ್ನು ದಿಲ್ಲಿಯ ನಾಯಕತ್ವ ಉಳಿಸಿಕೊಳ್ಳಲಿಲ್ಲ. ೧೯೪೭ರ ಅವಧಿಯಲ್ಲಿ ನಿಮ್ಮ ಅನನ್ಯತೆಯನ್ನು ರಕ್ಷಿಸಲಾಗುವುದು, ನೀವು ವಿಭಿನ್ನ ಸಂಸ್ಕೃತಿಗಳ ದೇಶವಾದ ಸೆಕ್ಯುಲರ್ ಭಾರತದ ಒಂದು ಭಾಗವಾಗಿದ್ದೀರಿ ಎಂಬ ಭರವಸೆಯನ್ನು ಜನರಿಗೆ ನೀಡಲಾಯಿತು. ಅದೇ ವೇಳೆ ಮತಧರ್ಮದ ಆಧಾರದ ಮೇಲೆ ರೂಪುಗೊಂಡ ಪಾಕಿಸ್ತಾನದ ವಿಷಯದಲ್ಲಿ ಹಾಗೆ ಹೇಳಲು ಬರುವುದಿಲ್ಲ. ಕಾಶ್ಮೀರದ ಜನತೆ ಭಾರತದೊಂದಿಗೆ ಸೇರಿಕೊಳ್ಳಲು ಇದು ಸೈದ್ಧಾಂತಿಕ ಆಧಾರವಾಯಿತು. ಅನಂತರ ನಡೆದುದೇನು ?



ಜನರ ಆಶೋತ್ತರಗಳಿಗೆ ಬೆಂಬಲವಾಗುವ ಯಾವುವೇ ಸಂವೈಧಾನಿಕ ಕ್ರಮಗಳನ್ನು ಸ್ವಾಗತಿಸಬೇಕು. ಅದೇ ಪ್ರಕಾರ ಜಮ್ಮು-ಕಾಶ್ಮೀರದ ಜನರು ತಮ್ಮ ಪ್ರತಿನಿಧಿಗಳ ಮೂಲಕ ತಮಗೆ ಕೆಲವು ಹಕ್ಕುಗಳನ್ನು ನೀಡಿಕೊಂಡರು. ಕೇಂದ್ರ ಸರಕಾರ ಆ ಹಕ್ಕುಗಳಿಗೆ ಸಂವೈಧಾನಿಕ ಅಂಗೀಕಾರ ನೀಡಿತು. ಜವಾಹರಲಾಲ ನೆಹರೂ ಸೇರಿದಂತೆ ದಿಲ್ಲಿಯಲ್ಲಿ ಆಡಳಿತ ನಡೆಸಿದ ಎಲ್ಲ ಕಾಂಗ್ರೆಸ್ ಸರಕಾರಗಳು ಈ ಮುಖ್ಯ ವಿಷಯವನ್ನು ಮರೆಯುತ್ತಾ ಹೋದವು. ೩೭೦ನೇ ವಿಧಿಯನ್ನು ಶಿಥಿಲಗೊಳಿಸಲು ನಡೆಸಿದ ಪ್ರಯತ್ನಗಳು ದಿಲ್ಲಿ ಮತ್ತು ಶ್ರೀನಗರ ನಡುವಣ ಸಂಬಂಧಗಳನ್ನು ಹದಗೆಡಿಸಿದವು. ಇದನ್ನು ನಿರೀಕ್ಷಿಸದಿದ್ದ ಕಾಶ್ಮೀರದ ಜನ ಸಾಕಷ್ಟು ಉದ್ವಿಗ್ನಗೊಂಡರು, ನಿರಾಶೆ ಹೊಂದಿದರು. ಕೇಂದ್ರ ಸರಕಾರ ಕಾಶ್ಮೀರದ ಜನರ ಭಾವನೆಗಳನ್ನು ಕಡೆಗಣಿಸಿತು. ಅವರಿಗೆ ನೀಡಿದ್ದ ಭರವಸೆಗಳನ್ನು ಈಡೇರಿಸಲಿಲ್ಲ. ನಮ್ಮ ಸೈನ್ಯ ಗಡಿ ನಿಯಂತ್ರಣ ರೇಖೆ ದಾಟಬೇಕಾಗಿತ್ತು ಎಂಬುದಲ್ಲ, ಅದು ಸಮಸ್ಯೆಗೆ ಪರಿಹಾರವಾಗುತ್ತಿರಲಿಲ್ಲ. ಮುಖ್ಯವಾಗಿ ಗಮನಿಸಬೇಕಾದ್ದು ನಾವು ಪರಸ್ಪರ ನಂಬಿಕೆಯ ಎಲ್ಲೆಗಳನ್ನು ದಾಟಿ ಹೋದೆವು ಎಂಬುದು. ಇದರಿಂದ ಸರಿಪಡಿಸಲಾಗದಂಥ ಬಿರುಕು ಉಂಟಾಯಿತು. ಅದನ್ನು ಬೆಸೆಯುವ ಬದಲು ದೊಡ್ಡದಾಗುವಂತೆ ಕುಖ್ಯಾತ ನೀತಿಗಳು, ಕ್ರಿಯೆಗಳು ಬಹುವಾಗಿ ಬಂದವು.

**ಹೊ :** ಕಾಶ್ಮೀರದಲ್ಲಿ ನಡೆದ ಚುನಾವಣೆಗಳು ಎಷ್ಟರಮಟ್ಟಿಗೆ ಪ್ರಾತಿನಿಧಿಕವಾಗಿದ್ದವು ?

**ತ :** ಕೇಂದ್ರ ಮತ್ತು ರಾಜ್ಯ ಸರಕಾರಗಳ ಮಧ್ಯೆ ಪರಸ್ಪರ ನಂಬಿಕೆ ಕಳೆದುಹೋದುದರ ಬಗ್ಗೆ ನಾನು ಹೇಳುತ್ತಿದ್ದೆನಷ್ಟೆ. ನಡೆದ ಚುನಾವಣೆಗಳು ಭಾರಿ ಸೋಲಿನ ಸಂಕೇತಗಳಾಗಿದ್ದವು. ದೇಶದ ಇತರ ಭಾಗದ ಜನರಿಗಿದ್ದ ಜನತಾಂತ್ರಿಕ ಅವಕಾಶಗಳು ಜಮ್ಮು-ಕಾಶ್ಮೀರ ಜನರ ಪಾಲಿಗಿರಲಿಲ್ಲ. ಸೋಲಿಗೆ ಮತ್ತೊಂದು ಕಾರಣ ಹೇಳಬೇಕೆಂದರೆ, ಈ ಜನರನ್ನು ಹೇಗೂ ಮೋಸಗೊಳಿಸಬಹುದು ಎಂದು ಕೇಂದ್ರ ಸರಕಾರ ಭಾವಿಸಿದ್ದು. ೩೭೦ನೇ ವಿಧಿಯನ್ನು ರದ್ದುಗೊಳಿಸಿ ಜನತಾಂತ್ರಿಕ ಹಕ್ಕುಗಳನ್ನು ನಿರಾಕರಿಸುವ ಮೂಲಕ ಕಾಶ್ಮೀರಿಗಳನ್ನು ನಿಯಂತ್ರಿಸಬಹುದು, ಪಾಕಿಸ್ತಾನವನ್ನು ಹಿಮ್ಮೆಟ್ಟಿಸಬಹುದು ಎಂದು ಆಳುವ ವರ್ಗ ಭಾವಿಸಿತು. ಶೇಖ್ ಅಬ್ದುಲ್ಲಾರನ್ನು ಸೆರೆಗೆ ಕಳಿಸಲಾಯಿತು. ಕಾಶ್ಮೀರ ಭಾರತದೊಂದಿಗೆ ಸೇರಲು ಮುಖ್ಯ ಕಾರಣವಾಗಿದ್ದ ಅವರನ್ನು ಸರಕಾರ ತುಚ್ಛವಾಗಿ ನಡೆಸಿಕೊಂಡಿತು. ಪದೇಪದೇ ಜೈಲಿಗೆ ಅಟ್ಟಲಾಯಿತು. ಇದಕ್ಕೆ ಯಾರು ಹೊಣೆ ? ಅಂದಿನಿಂದಲೇ ಕಾಶ್ಮೀರಿ ಜನರಲ್ಲಿ ಅಪನಂಬಿಕೆ ಪ್ರಾರಂಭವಾಯಿತು. ವರ್ಷಗಳು ಉರುಳಿದಂತೆ ಅದು ಹೆಚ್ಚುತ್ತಲೇ ಹೋಯಿತು.

**ಹೊ :** ಅವರ ಮೇಲಿದ್ದ ಆಪಾದನೆಗಳು ಯಾವುವು ?

**ತ :** ಏನೇ ಇರಲಿ, ಶೇಕ್ ಅಬ್ದುಲ್ಲ ಜನರ ಪ್ರೀತಿ ಗಳಿಸಿದ್ದ, ಜನರಿಂದ ಚುನಾಯಿತರಾಗಿದ್ದ ಜನನಾಯಕರಾಗಿದ್ದರು. ಭಾರತದೊಂದಿಗೆ ಸೇರುವ ವಿಷಯದಲ್ಲಿ

ಅವರು ಮುಖ್ಯ ಸಕಾರಾತ್ಮಕ ಪಾತ್ರ ವಹಿಸಿದ್ದರು. ಪಾಕಿಸ್ತಾನವನ್ನು ಎದುರಿಸಿ ನಿಲ್ಲಲು ಸಮರ್ಥರಾಗಿದ್ದರು. ಅವರು ಭಾರತ - ಕಾಶ್ಮೀರಗಳ ನಡುವೆ ಒಂದು ಸುಭದ್ರ ಸೇತುವೆ ಎಂದು ಹೇಳಲಾಗುತ್ತಿತ್ತು. ಅಮೆರಿಕದೊಂದಿಗೆ ಶಾಮೀಲಾಗಿ ಭಾರತದ ವಿರುದ್ಧ ಸಂಚು ನಡೆಸಿದ್ದರು ಎಂಬ ಆಪಾದನೆಯಿತ್ತು. ಅವರೊಂದಿಗೆ ಮಾತುಕತೆಯಾಡಿ ಅವರ ಮನವೊಲಿಸಬಹುದಿತ್ತು. ಕುಂದುಕೊರತೆಗಳನ್ನು ನಿವಾರಿಸ ಬಹುದಿತ್ತು. ಆದರೆ, ಭಾರತ ಸರಕಾರ ಅವರನ್ನು ಸೆರೆಮನೆಗೆ ದೂಡಿತು. ಎಡಪಂಥೀಯರೂ ಸೇರಿದಂತೆ ಬೇರೆ ಬೇರೆ ಜನವಿಭಾಗಗಳು ಈ ವಿಷಯದಲ್ಲಿ ವಿವೇಚನೆ ತೋರಿಸುವಂತೆ ಭಾರತ ಸರ್ಕಾರವನ್ನು ಕೋರಿದ್ದು ನಿಮಗೆ ನೆನಪಿರಬಹುದು. ಕಟ್ಟಕಡೆಗೆ, ೧೯೭೪ರಲ್ಲಿ ಇಂದಿರಾ ಗಾಂಧಿಯವರು ಶೇಕ್ ಅಬ್ದುಲ್ಲಾರನ್ನು ಭೇಟಿ ಮಾಡಿದರು. ಶಾಸನ ಸಭೆಯಲ್ಲಿದ್ದ ಕಾಂಗ್ರೆಸ್ ಸದಸ್ಯರ ಬೆಂಬಲದಿಂದ ಅವರನ್ನು ನಾಯಕರನ್ನಾಗಿ ಆಯ್ಕೆ ಮಾಡಲಾಯಿತು. ಮುಂದೆ ಮುಖ್ಯಮಂತ್ರಿಯಾದರು. ಅದೊಂದು ಬೇರೆಯೇ ಪ್ರಕರಣ.

**ಹೊ** : ಆಗಿನ ಕಾಂಗ್ರೆಸ್ಸಿನ ಹಂಚಿಕೆ ಏನಾಗಿದ್ದಿರಬಹುದು ?

**ತ** : ಕಾಂಗ್ರೆಸ್ಸನ್ನು ಮತೀಯವಾದಿ ಪಾರ್ಟಿಯೆಂದು ನಾವು ಹೇಳಲಾರೆವಾದರೂ, ಕಾಶ್ಮೀರಕ್ಕೆ ಸಂಬಂಧಿಸಿದಂತೆ ಅದಕ್ಕೆ ಪ್ರಯೋಜನವಾಗುವಂತಿದ್ದ ಕಡೆಯಲ್ಲಿ ಅದು ಮತೀಯವಾದವನ್ನು ಬಳಸಿಕೊಂಡಿದೆ ಎಂಬುದನ್ನು ಹೇಳಲೇಬೇಕು. ೧೯೮೩ರಲ್ಲಿ ಇಂದಿರಾ ಗಾಂಧಿಯವರು ಜಮ್ಮುಗೆ ಭೇಟಿ ನೀಡಿದಾಗ ಮತೀಯವಾದಿ ಘೋಷಣೆಗಳು ಧಾರಾಳವಾಗಿ ಮೊಳಗಿದವು. ಕಾಂಗ್ರೆಸ್ಸಿನ ಇಂಥ ನಡೆವಳಿಕೆಯಿಂದ ಅಲ್ಲಿ ಭಾಜಪ ಬೆಳೆಯಲು ಕಾರಣವಾಯಿತು. ಎಲ್ಲ ಬಗೆಯ ಮತೀಯ ಶಕ್ತಿಗಳು ತಲೆದೋರಿದವು. ಅವುಗಳ ಸಂಖ್ಯೆಯೂ ಹೆಚ್ಚಿತು. ಇದರಿಂದ ಪರಿಸ್ಥಿತಿ ವಿಷಮಗೊಂಡು ಕಾಶ್ಮೀರ ಕಣಿವೆ ಮತ್ತು ಜಮ್ಮು ಮಧ್ಯೆ ಒಂದು ಬಗೆಯ ದ್ವೇಷಭಾವನೆ ಉಂಟಾಯಿತು. ಕಾಂಗ್ರೆಸ್ ಇಡೀ ದೇಶದ ಹಿತಾಸಕ್ತಿಯನ್ನು ಗಣನೆಗೆ ತೆಗೆದುಕೊಳ್ಳುವ ಬದಲು, ತನ್ನ ಪಕ್ಷದ ಹಿತಾಸಕ್ತಿಯನ್ನಷ್ಟೇ ಗಣನೆಗೆ ತೆಗೆದುಕೊಂಡಿತು. ಅದೂ ಸಿದ್ಧಿಸಲಿಲ್ಲವೆಂಬುದು ಗೊತ್ತೇ ಇದೆ. ಕೇಂದ್ರ ಸರ್ಕಾರದಿಂದ ಹಣ ಪಡೆದು ನುಂಗುವ ಭ್ರಷ್ಟರನ್ನು ಪೋಷಿಸಿದ್ದು ಆ ಪಕ್ಷಕ್ಕೂ ಮುಳುವಾಯಿತು. ಕಾಶ್ಮೀರದ ಪ್ರಶ್ನೆ ಕಗ್ಗಂಟಾಗುವಂತೆಯೂ ಆಯಿತು. ಮತೀಯ ಭಾವನೆಗಳನ್ನು ಕೆರಳಿಸುವ ವಿಷಯದಲ್ಲಿ ಕಾಂಗ್ರೆಸ್ ಸೌಮ್ಯ ಮಾರ್ಗ ಅನುಸರಿಸಿದರೆ, ಭಾಜಪ ಆಕ್ರಮಣಕಾರಿ ನಡೆವಳಿಕೆಯನ್ನು ಅನುಸರಿಸಿತು. ೩೭೦ನೇ ವಿಧಿಯನ್ನು ರದ್ದುಪಡಿಸಬೇಕೆಂದು ಭಾಜಪ ಉಚ್ಚಕಂಠದಲ್ಲಿ ಬೊಬ್ಬಿರಿಯತೊಡಗಿತು. ಇದು ಕಾಶ್ಮೀರದ ಜನರ ಮೇಲೆ ಸಾರಿದ **ಧರ್ಮಯುದ್ಧವಾಗಿತ್ತು**.

ಇಂದಿನ ಕಾಶ್ಮೀರದ ಪರಿಸ್ಥಿತಿಗೂ ಹಿಂದಿನ ಪೂರ್ವ ಪಾಕಿಸ್ತಾನದಲ್ಲಿದ್ದ ಪರಿಸ್ಥಿತಿಗೂ ಹೆಚ್ಚಿನ ವ್ಯತ್ಯಾಸವೇನೂ ಇಲ್ಲ. ಜನರ ಬೇಡಿಕೆಗಳನ್ನು ಪರಿಶೀಲಿಸಲು, ಅವರ ನಾಯಕರಾಗಿದ್ದ ಮುಜೀಬುರ್ ರಹಮಾನ್ ಅವರೊಂದಿಗೆ ಮಾತುಕತೆಯಾಡಲು ಅಂದಿನ ಪಾಕಿಸ್ತಾನ ಸರಕಾರ ನಿರಾಕರಿಸಿತು. ಈ ಹಟಮಾರಿ ನಡೆವಳಿಕೆಯ ವಿರುದ್ಧ ಜನರು ಹೋರಾಟ ನಡೆಸಿದರು. ಬಾಂಗ್ಲಾ ದೇಶದ ಉದಯವಾಯಿತು.

ದಿಲ್ಲಿಯಲ್ಲಿ ಈವರೆಗೆ ಆಡಳಿತ ನಡೆಸಿದ ಸರಕಾರಗಳು ಕಾಶ್ಮೀರದ ಜನರ ಜನತಾಂತ್ರಿಕ ಹಕ್ಕುಗಳನ್ನು ನಿರಾಕರಿಸುವ ಕ್ರಮ ಅನುಸರಿಸಿದವು. ಜನರ ಮನಸ್ಸಿನಲ್ಲಿ ಅಪನಂಬಿಕೆಯ ಭಾವನೆ ಬೆಳೆಯತೊಡಗಿತು. ಜಮ್ಮು-ಕಾಶ್ಮೀರ ವಿಧಾನಸಭೆ ಕೈಗೊಂಬೆ ಸಭೆಯೆಂದು ಪಾಕಿಸ್ತಾನ ಹೇಳುತ್ತದೆ. ಆದರೆ ಅದು ನಿಜವಾದ ಅಧಿಕಾರ ಹೊಂದಿರುವ ಸಭೆಯೆಂದು ಭಾರತ ಹೇಳುತ್ತದೆ. ಈಗಿನ ರಾಷ್ಟ್ರೀಯ ಜನತಾಂತ್ರಿಕ ರಂಗದಲ್ಲಿ (ಎನ್.ಡಿ.ಎ.) ಫಾರುಕ್ ಅಬ್ದುಲ್ಲರ ನ್ಯಾಷನಲ್ ಕಾನ್ಫರೆನ್ಸ್‌ಗೆ ಸದಸ್ಯತ್ವವಿದೆ. ''ಅಧಿಕಾರ ಪಡೆದ ವಿಧಾನ ಸಭೆ'' ಕಾಶ್ಮೀರಕ್ಕೆ ಸ್ವಾಯತ್ತತೆ ನೀಡಬೇಕೆಂದು ಅಂಗೀಕರಿಸಿದ ನಿರ್ಣಯವನ್ನು ಸಾರಾಸಗಟು ತಿರಸ್ಕರಿಸಲಾಯಿತು. ಆ ನಿರ್ಣಯದ ಚರ್ಚೆಯೂ ನಡೆಯಲಿಲ್ಲ. ಕೇಂದ್ರ ಸಚಿವ ಸಂಪುಟ ಅದನ್ನು ಒಮ್ಮೆಗೇ ಬುಟ್ಟಿಗೆ ಹಾಕಿತು ! ಇದು ಏನನ್ನು ಸೂಚಿಸುತ್ತದೆ ? ನಾವು ಕಾಶ್ಮೀರದಲ್ಲಿ ಕಷ್ಟ ಅನುಭವಿಸುತ್ತಿದ್ದೇವೆ. ಅದೇ ರೀತಿ ದೇಶದ ಇತರ ಭಾಗಗಳಿಗೂ ಈ ಬಾಧೆ ತಟ್ಟಿದೆ. ಕೇಂದ್ರದಲ್ಲಿರುವ ಸರಕಾರ ಸೈನ್ಯದ ಸಹಾಯದಿಂದ ಕಾಶ್ಮೀರ ಸಮಸ್ಯೆಯನ್ನು ಬಗೆಹರಿಸಬಹುದೆಂದು ಕನಸು ಕಾಣುತ್ತಿದೆ. ಕಾಶ್ಮೀರದಲ್ಲಿರುವ ಸೈನಿಕರ ಸಂಖ್ಯೆ ಆರು ಲಕ್ಷಕ್ಕೂ ಹೆಚ್ಚಾಗಿದೆಯೆಂಬುದು ಹೆಚ್ಚಿನವರಿಗೆ ತಿಳಿದಿರಲಾರದು. ಅದೇ ರೀತಿ ಕೆಲವು ಸಾವಿರ ಮಂದಿ ಉಗ್ರಗಾಮಿಗಳು ಚಟುವಟಿಕೆ ನಡೆಸುತ್ತಿದ್ದಾರೆ. ಆದರೆ ಸೈನ್ಯಕ್ಕೆ ಈ ಉಗ್ರಗಾಮಿಗಳನ್ನು ಹೊರ ದಬ್ಬಲು ಸಾಧ್ಯವಾಗಿಲ್ಲ. ಅವರ ಸಂಖ್ಯೆ ಅಬ್ಬಬ್ಬಾ ಎಂದರೆ ಐದಾರು ಸಾವಿರ ! ಆರು ಲಕ್ಷ ಸೈನಿಕರು ಜನರನ್ನು ಹಿಂಸಿಸಲು ಸಮರ್ಥರು, ಉಗ್ರಗಾಮಿಗಳನ್ನು ನಿಯಂತ್ರಿಸುವುದರಲ್ಲಿ ಅಲ್ಲ !

ಭಾಜಪ ದೊಡ್ಡ ದುಸ್ಸಾಹಸವೊಂದನ್ನು ಕೈಗೊಂಡಿತು. ಅದು ಪೊಖ್ರಾನ್. ನಮಗೆಲ್ಲ ತಿಳಿದಿರುವಂತೆ ಪಾಕಿಸ್ತಾನ ಅದಕ್ಕೆ ಕ್ಷಿಪ್ರ ಪ್ರತಿಕ್ರಿಯೆ ತೋರಿಸಿತು. ಅಲ್ಲಿಂದೀಚೆಗೆ ಕಾಶ್ಮೀರದ ಪ್ರಶ್ನೆ ಬೃಹದಾಕಾರ ತಳೆದು ಇಡೀ ಜಗತ್ತಿನ ಗಮನ ಸೆಳೆಯಿತು.

**ಹೊ** : ಕಾಶ್ಮೀರದ ಆರ್ಥಿಕ ಚಟುವಟಿಕೆಗಳಲ್ಲಿ ಜನರು ಹೆಚ್ಚು ಅರ್ಥಪೂರ್ಣವಾಗಿ ಭಾಗವಹಿಸುವಂತೆ ಮಾಡುವಲ್ಲಿ ಮಧ್ಯಪ್ರವೇಶ ಅವಶ್ಯಕವೆಂದಾದರೆ ಭಾರತ ಸರಕಾರಕ್ಕೆ ಯಾವ ಅವಕಾಶವಿದೆ ?

**ತ** : ೧೯೯೬ರಲ್ಲಿ ಅಮೆರಿಕದ ರಾಯಭಾರಿ ಹೇಳಿದಂತೆ ಐಕ್ಯರಂಗದ ಸರಕಾರದ ಅವಧಿಯಲ್ಲಿ ಸ್ವಲ್ಪ ಅವಕಾಶವಿತ್ತು. ದೇವೇಗೌಡರು ಪ್ರಧಾನಿಗಳಾಗಿದ್ದಾಗ ಸ್ವಲ್ಪ ಚಟುವಟಿಕೆ ನಡೆಯಿತು. ಮುಂದೆ ರಾಷ್ಟ್ರೀಯ ಜನತಾಂತ್ರಿಕ ರಂಗ ಮತ್ತು ಭಾಜಪ ಕಾಶ್ಮೀರದ ಜನರ ಆಕಾಂಕ್ಷೆಗಳ ವಿರುದ್ಧದ ದಿಕ್ಕಿನಲ್ಲಿ ಚಲಿಸುತ್ತಿವೆ. ಕಾಶ್ಮೀರದಲ್ಲಿ ಎಲ್ಲ ಕಡೆ ಭ್ರಷ್ಟಾಚಾರ ತುಂಬಿ ತುಳುಕುತ್ತಿದೆ. ಕಾಶ್ಮೀರದ ಆರ್ಥಿಕ ಪರಿಸ್ಥಿತಿ ನಿರಾಶಾಜನಕವಾಗಿದೆ. ಉಗ್ರರ ದೌರ್ಜನ್ಯಕ್ಕೊಳಗಾದ ಕುಟುಂಬಗಳ ಪುನರ್ವಸತಿಗೂ ಹಣವಿಲ್ಲ. ಉಗ್ರರ ಚಟುವಟಿಕೆಗಳ ಕಾರಣ ನಮ್ಮ ಮುಖ್ಯ ಉದ್ಯಮವಾಗಿದ್ದ ಪ್ರವಾಸೋದ್ಯಮ ಭಾರಿ ಹಾನಿಗೊಳಗಾಗಿದೆ. ಕೃಷಿ ಕ್ಷೇತ್ರದಲ್ಲಿ ಸ್ವಲ್ಪಮಟ್ಟಿನ ಚಟುವಟಿಕೆ ನಡೆಯುತ್ತಿದೆ. ಕೇಸರೀಕರಣಕ್ಕೆ ಹೆಸರಾಗಿರುವ ಆರ್.ಎಸ್.ಎಸ್. ಕಾಶ್ಮೀರದ ಜನತೆ ಕೇಸರಿ ಹೂ ಬೆಳೆಸುವುದಕ್ಕೂ ಅಡ್ಡಿಯಾಗುತ್ತಿದೆ ! ಹೇಗೆಂದರೆ, ಅವರು ಶಾಂತಿಮಾರ್ಗಕ್ಕೆ ಅಗತ್ಯವಾದ ಮೂಲಭೂತ ನೀತಿಗೆ ವಿರೋಧಿಗಳು. ಒಟ್ಟಿನಲ್ಲಿ, ಜನರು ಹತಾಶರಾಗಿದ್ದಾರೆ. ಇಂದು ಕಾಶ್ಮೀರದಲ್ಲಿ ಎರಡು ಶಕ್ತಿಗಳು ಕಾರ್ಯನಿರತವಾಗಿವೆ. ಒಂದು ಪರಸ್ಪರ ಸಂವಾದವನ್ನು ಅಪೇಕ್ಷಿಸುತ್ತದೆ. ಮತ್ತೊಂದು ಘರ್ಷಣೆಯನ್ನು ಅಪೇಕ್ಷಿಸುತ್ತದೆ. ಕಾಶ್ಮೀರದ ಸೆಕ್ಯುಲರ್ ವಿಭಾಗ ಶಾಂತಿಯನ್ನು ಬಯಸುತ್ತದೆ. ಭಾರತದೊಂದಿಗಿರಲು ಬಯಸುತ್ತದೆ. ಆರ್ಥಿಕ ಕ್ರಮಗಳೇನೋ ಮುಖ್ಯವೇ. ಆದರೆ ರಾಜಕೀಯಮಟ್ಟದಲ್ಲಿ ತೆಗೆದುಕೊಳ್ಳುವ ಕ್ರಮಗಳು ಅವುಗಳಿಗೆ ಒತ್ತಾಸೆಯಾಗಿರಬೇಕು. ಅದೇ ರೀತಿ ಮಾನವ ಹಕ್ಕುಗಳು ಸಹ.

M.Yousuf Tarigami

T-28, Tulsibagh, Srinagar
A-12, Ghandinagar, Jammu
Ph/Fax: 0194-430611/0191-430079
Date: 09-01-2001

**FRESH INITIATIVES REQUIRED**

It is gratifying that the level of violence in the wake of Ramzan cease-fire, has come down to a certain extent but the continuing violent activities of some of the armed groups operating from across the border continue to cause serious concern. Nevertheless, it is to be noted that an environment free from violence can activate all sets of dialogues and open up a new space for substantive negotiations. Time has come when Ramzan initiative and its extension must lead to comprehensive and meaningful dialogue for the settlement of issues.

All the concerned and involved should avail this breathing space to use their authority and influence in order to move forward. The overwhelming response to this cease-fire in and outside the State must serve as a pointer to all those who speak on behalf of the people

FOR MOVING AHEAD, IT IS SUGGESTED THAT -

1. **The Government of Pakistan** which seems to have shown an interest in the current cease-fire, should come forward to -
   a) Effectively use its authority and influence in persuading the armed groups operating from its soil, to desist from violent activities,
   b) Release of all political prisoners and ensuring democratic rights in Pak administered Kashmir including Northern areas
2. The Government of India should:
   a) While making cease-fire a permanent feature, gradually reduce the size of security forces involved in the internal security
   b) Initiate measures to -
      i) Provide fair and prompt trial to all detenues, languishing in various Prisons and release all those against whom no evidence has been found at the trial.
      ii) Provide substantive relief to the victims of violence, irrespective of their affiliations
      iii) Facilitate the return of youth to their homes from the other side of LOC, who want to lead a peaceful life
3. **Both the governments of India and Pakistan should** create conducive conditions for people living in two sides of LOC to meet each other without undue hurdles. Suitable mechanism for [illegible] travel [illegible] be evolved. Besides this, exchange of cultural groups and [illegible] between the people living in each side of the Line of Control be encouraged [illegible] ensured
4. **All political parties/groups, particularly APHC and such other platforms should**
   a) Initiate effective steps for dignified return of migrants, particularly Pundits
   b) Raise their voice against the killings of innocent, unarmed, uninvolved, and political activists of all shades

ಭಾರತ ಸರಕಾರ ರಮಜಾನ್ ಕದನವಿರಾಮ ಘೋಷಿಸಿದಾಗ ಕಾಶ್ಮೀರದಲ್ಲಿ ಹಬ್ಬದ ವಾತಾವರಣ ನೆಲಸಿತು ! ಶಾಂತಿಪ್ರಿಯ ಕಾಶ್ಮೀರಿ ಜನರು ನೆಮ್ಮದಿಯಿಂದ ಉಸಿರಾಡಿದರು. ಆ ಪ್ರಕ್ರಿಯೆ ಮುಂದುವರಿಯಲು ತುರ್ತಾಗಿ ಕೈಗೊಳ್ಳಬೇಕಾದ ಕ್ರಮಗಳು ಕುರಿತು ನಾನೇ ಒಂದು ವಿಜ್ಞಾಪನಾ ಪತ್ರ ಅರ್ಪಿಸಿದ್ದೆ. ಶ್ರೀನಗರಕ್ಕೆ ಬಂದಿದ್ದ ಅದ್ವಾನಿಯವರು ಅದನ್ನು ಪರಿಶೀಲಿಸಲು ಒಪ್ಪಿದರು. ಆದರೆ ಸಂಧಾನಕಾರರಾಗಿ ಪಂತರನ್ನು ಕಳಿಸಲು ಐದು ತಿಂಗಳು ಕಾಲಹರಣ ಮಾಡಿದರು ! ಇದರ ಮಧ್ಯೆ ಸಂಘಪರಿವಾರದ ಒತ್ತಡಕ್ಕೆ ಮಣಿದು ವಾಜಪೇಯಿಯವರು ಕದನವಿರಾಮವನ್ನು ಹಿಂತೆಗೆದುಕೊಂಡರು. ಅದೇ ಸಭೆಯಲ್ಲಿ ಜ॥ ಮುಷರಫ್‌ರನ್ನು ಮಾತುಕತೆಗೂ ಆಹ್ವಾನಿಸಿದರು. ಆಗ್ರಾ ಶೃಂಗಸಭೆ ಅದ್ದೂರಿಯಾಗಿ ನಡೆಯಿತು. ಮುಷರಫ್ ವಿಜೃಂಭಿಸಿದರು. ನಮ್ಮ ನಾಯಕರು ಏನೂ ತೋಚದಂತೆ ಸಪ್ಪೆ ಮುಖ ಹಾಕಿಕೊಂಡದ್ದಷ್ಟೇ ಸಭೆಯ ಫಲಿತಾಂಶ. ಕಾಶ್ಮೀರ ಪ್ರಶ್ನೆ ಮತ್ತೆ ಯಥಾಸ್ಥಿತಿಗೆ ಮರಳಿದೆ. ಉಗ್ರರಿಂದ ಹತ್ಯೆ, ಸೈನ್ಯದಿಂದ ಜನರ ಮರ್ದನ ಮತ್ತು ಇಡಿಯಾಗಿ ಅಸಹಾಯಕತೆ, ಹತಾಶೆ, ಸಿಟ್ಟು .

**ಹೊ** : ಹಲವು ಪಾರ್ಟಿಗಳ ಮಿಶ್ರಣವಾದ ಹುರಿಯತ್ ಕಾನ್ಫರೆನ್ಸ್ ಕುರಿತು ನಿಮ್ಮ ಅಭಿಪ್ರಾಯವೇನು ? ಆ ಪಾರ್ಟಿಗಳು ಎಷ್ಟು ದೊಡ್ಡವು ? ಎಷ್ಟು ಪ್ರಭಾವ ಹೊಂದಿವೆ ?

**ತ** : ಹುರಿಯತ್ ರೂಪುಗೊಂಡದ್ದು ಒಂದಂಶದ ಕಾರ್ಯಕ್ರಮದ ಆಧಾರದ ಮೇಲೆ. ಭಾರತ-ವಿರೋಧಿ ಭಾವನೆಗಳನ್ನು ಕೆರಳಿಸುವುದೇ ಆ ಕಾರ್ಯಕ್ರಮ. ಅದರಲ್ಲೊಂದು ಸಣ್ಣ ಭಾಗ ಪಾಕ್ ಆಕ್ರಮಿತ ಕಾಶ್ಮೀರದೊಂದಿಗೆ ಸೇರಲು ಅಪೇಕ್ಷಿಸುತ್ತದೆ. ಉಳಿದ ಭಾಗದ ಗುರಿ ಸ್ವತಂತ್ರ ಕಾಶ್ಮೀರ. ಹುರಿಯತ್ ಕಾಶ್ಮೀರದ ಇಡೀ ಜನರ ಪ್ರತಿನಿಧಿಯೆಂದು ಹೇಳಲಾಗುತ್ತಿದೆ. ಅದು ಸರಿಯಲ್ಲ. ಅದು ಯಾವ ಚುನಾವಣೆಯಲ್ಲೂ ಭಾಗವಹಿಸಿದ್ದಿಲ್ಲ. ಅಧಿಕಾರದ ಭಾರ ಹೊರಬಹುದಾದ ಶಕ್ತಿಯೂ ಅದಕ್ಕಿಲ್ಲ. ಆದರೆ ಅದು ಕಾಶ್ಮೀರದ ರಾಜಕೀಯದಲ್ಲಿ ಒಂದು ಮುಖ್ಯ ಭಾಗವಾಗಿದೆ. ಮಾತುಕತೆಗಳನ್ನು ಹುರಿಯತ್ ಒಂದರ ಜತೆಗೇ ನಡೆಸುವುದಲ್ಲ. ಮಾತುಕತೆಯಲ್ಲಿ ಇಡೀ ಕಾಶ್ಮೀರದ ಜನತೆ ಭಾಗಿಯಾಗಬೇಕು. ಜಮ್ಮು-ಕಾಶ್ಮೀರವೇ ಕಾಶ್ಮೀರ ಪ್ರಾಂತವೆಂಬ ತಪ್ಪು ಕಲ್ಪನೆಯೊಂದಿದೆ. ಐತಿಹಾಸಿಕವಾಗಿ ಜಮ್ಮು, ಕಾಶ್ಮೀರ, ಲಡಾಕ್ ಮತ್ತು ನಿಯಂತ್ರಣ ರೇಖೆಯಾಚೆಗಿನ ಭಾಗಗಳು ಜಮ್ಮು-ಕಾಶ್ಮೀರದಲ್ಲಿ ಸೇರುತ್ತವೆ. ಆ ಭಾಗದ ಗಿಲ್ಗಿಟ್ ಮತ್ತು ಬಲ್ಟಿಸ್ತಾನಗಳಲ್ಲಿ ಜನ ಅನುಭವಿಸುತ್ತಿರುವ ಹಿಂಸೆ ಅಪಾರವಾದದ್ದು.

**ಹೊ** : ಕಾಶ್ಮೀರಿ ಪಂಡಿತರ ಕುರಿತ ನಿಮ್ಮ ಅಭಿಪ್ರಾಯವೇನು ? ಭಾರತದ ಪತ್ರಿಕೆಗಳಲ್ಲಿ ಅವರನ್ನು ಉದ್ದೇಶಪೂರ್ವಕವಾಗಿ ಹೊರದಬ್ಬಲಾಗುತ್ತದೆ ಎಂಬ ಸುದ್ದಿಗಳು ಪ್ರಕಟವಾಗುತ್ತಿವೆ. ನಿಜವೆ ?

**ತ**: ಇದೊಂದು ದುರಂತ. ಕಾಶ್ಮೀರದ ಇತಿಹಾಸದಲ್ಲಿ ೧೯೪೭ರ ಅವಧಿಯಂತಹ ದುರ್ಧರ ದಿನಗಳಲ್ಲಿಯೂ ಸಹ ಜನರು ತಮ್ಮ ಮತೀಯ ಸೌಹಾರ್ದ ಭಾವನೆಯನ್ನು ಉಳಿಸಿಕೊಂಡಿದ್ದರು. ಆದರೆ ಈ ಬಾರಿ ಅವರು ವಲಸೆ ಹೋಗಲೇಬೇಕಾದಂತಹ ಪರಿಸ್ಥಿತಿಯನ್ನು ಉಗ್ರಗಾಮಿಗಳು ಸೃಷ್ಟಿಸಿದ್ದರು. ಕಾಶ್ಮೀರಿಗಳು ಇಂಥ ಪರಿಸ್ಥಿತಿಯನ್ನು ಊಹಿಸಲೂ ಸಾಧ್ಯವಿದ್ದಿರಲಿಲ್ಲ. ನಿಮಗೆ ಗೊತ್ತೆ, ಹಳ್ಳಿಗಳಿಂದ ಪಂಡಿತ ಕುಟುಂಬಗಳು ಹೊರಡುವುದು ನಿಶ್ಚಯವಾದಾಗ ಇಡೀ ಹಳ್ಳಿ ದುಃಖದಿಂದ ಅವರನ್ನು ಬೀಳ್ಕೊಡಲು ಸಮಾರಂಭಗಳನ್ನು ಏರ್ಪಡಿಸುತ್ತಿದ್ದವು ! ಆ ಸಂದರ್ಭದಲ್ಲಿ ಸರಕಾರ ತುರ್ತು ಕ್ರಮ ಕೈಗೊಳ್ಳುವ ಬದಲು, ವಲಸೆ ಹೋಗಲು ಒತ್ತಾಸೆಯಾಗುವ ರೀತಿಯಲ್ಲಿ ನಡೆದುಕೊಂಡಿತು. ಪರಿಸ್ಥಿತಿಯನ್ನು ತನ್ನ ಸಂಕುಚಿತ ಉದ್ದೇಶಕ್ಕಾಗಿ ಬಳಸಿಕೊಂಡಿತು.

ಉಗ್ರರು ಪಂಡಿತ ಸಮುದಾಯದ ಅನೇಕರನ್ನು ದೌರ್ಜನ್ಯಕ್ಕೆ ಗುರಿಪಡಿಸಿದರೆಂಬುದು ನಿಜ. ಅದಕ್ಕಿಂತಲೂ ಹೆಚ್ಚು ಹೆಚ್ಚು ಸಂಖ್ಯೆಯ ಮುಸ್ಲಿಮರು ಉಗ್ರರ ಕೈಗಳಲ್ಲಿ ಹತರಾಗಿದ್ದಾರೆ. ಕಾಶ್ಮೀರದ ಸ್ವಭಾವಕ್ಕೇ ತೀರಾ ಅಪರಿಚಿತವಾದ ಪರಿಸ್ಥಿತಿಯಲ್ಲಿ ಮುಸ್ಲಿಮರು ವಲಸೆ ಹೋಗಲು ಅವಕಾಶ ಇರಲಿಲ್ಲ. ಹೋಗುವುದಾದರೂ ಎಲ್ಲಿಗೆ ? ಆದರೂ ಸಾವಿರಾರು ಮುಸ್ಲಿಮರು ವಲಸೆ ಹೋಗಿದ್ದಾರೆ. ಉಗ್ರರ ಭಯದಿಂದಾಗಿ ಅವರು ಇದನ್ನು ದಾಖಲಿಸಿಲ್ಲ. ಅವರಲ್ಲಿ ಎಷ್ಟೋ ಮಂದಿ ಜಮ್ಮುವಿನಲ್ಲಿ ನೆಲೆಸಿದ್ದಾರೆ, ತಲೆ ಮರೆಸಿಕೊಂಡು. ಪ್ರಮುಖ ಮುಸ್ಲಿಂ ಧಾರ್ಮಿಕ ಮುಖಂಡರು, ಖ್ಯಾತ ವೈದ್ಯರು, ಶಿಕ್ಷಣ ತಜ್ಞರು, ಕಮ್ಯುನಿಸ್ಟ್ ಪಾರ್ಟಿಯ ನಾಯಕರು, ಕಾರ್ಯಕರ್ತರು, ನ್ಯಾಷನಲ್ ಕಾನ್ಫರೆನ್ಸಿನ ಅನೇಕ ನಾಯಕರು, ಕಾರ್ಯಕರ್ತರು, ವಿಧಾನಸಭಾ ಸದಸ್ಯರು ಉಗ್ರರ ಚಿತ್ರಹಿಂಸೆಗಳಿಗೆ ಬಲಿಯಾಗಿದ್ದಾರೆ. ಉಗ್ರರು ಕಾಶ್ಮೀರದ ಹಿಂದುಗಳನ್ನು ಮಾತ್ರವೇ ಕೊಲೆ ಮಾಡುತ್ತಿರುವುದಾಗಿ ಆರ್.ಎಸ್.ಎಸ್. ಮತ್ತು ಪರಿವಾರದವರು ಪ್ರಚಾರ ಮಾಡುತ್ತಾರೆ. ನನ್ನ ಮಾವನ ಹತ್ಯೆಯಾಗಿದೆ. ಅದೊಂದು ಉದಾಹರಣೆ ಎಂದಷ್ಟೇ ಹೇಳುತ್ತಿದ್ದೇನೆ. ಜಮಾತ್-ಎ-ಇಸ್ಲಾಮಿಯ ಪ್ರತಿಪ್ರಚಾರ ಮಾಡುತ್ತದೆ. ಇಂಥ ಹುನ್ನಾರಗಳನ್ನು ಪರಿಣಾಮಕಾರಿಯಾಗಿ ಎದುರಿಸುವಲ್ಲಿ ದೇಶದ ಸೆಕ್ಯುಲರ್ ಶಕ್ತಿಗಳು ವಿಫಲವಾಗಿವೆ. ಮುಸ್ಲಿಂ ಮೂಲಭೂತವಾದಿಗಳು ಕೆಲವು ಅತೃಪ್ತ ಮುಸ್ಲಿಂ ಯುವಕರನ್ನು ಬಳಸಿಕೊಂಡು ಕಾಶ್ಮೀರವನ್ನೇ ಪಾಕಿಸ್ತಾನಕ್ಕೆ ದಾನ ಮಾಡಲು ಪ್ರಯತ್ನಿಸಿದರೆ, ಹಿಂದು ಮೂಲಭೂತವಾದಿಗಳು ಅತೃಪ್ತ ಹಿಂದು ಯುವಕರನ್ನು ಬಳಸಿಕೊಂಡು ಕಾಶ್ಮೀರದ ಸೆಕ್ಯುಲರ್ ತಳಹದಿಯನ್ನೇ ಬುಡಮೇಲು ಮಾಡಲು ಪ್ರಯತ್ನಿಸುತ್ತಾರೆ. ಪರಸ್ಪರ ಪೂರಕವಾಗಿ ಕೆಲಸ ಮಾಡುತ್ತಿರುವ ಈ ಎರಡೂ ಶಕ್ತಿಗಳನ್ನು ಎಲ್ಲ ಎಡಪಂಥೀಯ ಹಾಗೂ ಸೆಕ್ಯುಲರ್ ಶಕ್ತಿಗಳು ಪರಿಣಾಮಕಾರಿಯಾಗಿ ಎದುರಿಸಿ ವಿಫಲಗೊಳಿಸಬೇಕಿದೆ.

**ಹೊ** : ಈ ಪಂಡಿತರೇನು ಜಮೀನುದಾರರೆ ?

**ತ** : ಕಾಶ್ಮೀರದಲ್ಲಿ ಜಮೀನ್ದಾರಿ ಪದ್ಧತಿಯನ್ನು ಬಹಳ ಹಿಂದೆಯೇ ರದ್ದುಪಡಿಸಲಾಗಿದೆ. ಪಂಡಿತರು ಸಣ್ಣ ಹಿಡುವಳಿಯುಳ್ಳ ಭೂಮಾಲಿಕರು, ಸುಶಿಕ್ಷಿತರು, ವೃತ್ತಿಜೀವಿಗಳು, ಮಧ್ಯಮ ವರ್ಗದವರು – ಅವರೇ ಹೆಚ್ಚು. ಕಾಶ್ಮೀರದ ಬಹುಸಂಖ್ಯೆಯ ಜನರಿಗೆ ಪಂಡಿತರ ಮೇಲೆ ಸದಭಿಪ್ರಾಯವಿದೆ. ಪಂಡಿತ ಸಮೂಹ ಗೌರವಯುತವಾಗಿ ಹಿಂದಿರುಗಿ ಮತ್ತೆ ಕಾಶ್ಮೀರಿ ವಾಹಿನಿಯಲ್ಲಿ ಬದುಕಬೇಕೆಂಬುದು ಅವರೆಲ್ಲರ ಅಭಿಲಾಷೆಯಾಗಿದೆ. ಪ್ರತಿಯೊಬ್ಬ ಮುಸ್ಲಿಮನೂ ಉಗ್ರವಾದಿಯೆಂಬ ಭಾವನೆ ತೀರಾ ಅಸಂಬದ್ಧವಾದ ಮಾತು.

**ಹೊ** : ರಾಜ್ಯದಲ್ಲಿ ಶಿಕ್ಷಣದ ಪರಿಸ್ಥಿತಿ ಹೇಗಿದೆ ?

**ತ** : ಏನೇನೂ ಚೆನ್ನಾಗಿಲ್ಲ. ವಿದ್ಯಾರ್ಥಿಗಳು ಯಾವ ಆತಂಕವೂ ಇಲ್ಲದೆ ಕಲಿಯುವಂಥ ಪರಿಸ್ಥಿತಿ ಇಲ್ಲ. ಇತ್ತೀಚೆಗಷ್ಟೆ ಮೈಸೂರಿನ ಶಿಕ್ಷಣವೇತ್ತರೊಬ್ಬರನ್ನು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ನೇಮಿಸಲಾಗಿದೆ. ೯೩-೯೪ರ ಅವಧಿಗಿಂತ ಈಗ ಸ್ವಲ್ಪ ಉತ್ತಮ ಎನ್ನಬಹುದು.

**ಹೊ** : ನಿಮ್ಮ ರಾಜ್ಯದಲ್ಲಿ ಕಮ್ಯುನಿಸ್ಟರು ಎಷ್ಟು ಪ್ರಭಾವಶಾಲಿಗಳಾಗಿದ್ದಾರೆ?

**ತ** : ಉಗ್ರವಾದಿಗಳು ಮತ್ತು ಪ್ರತ್ಯೇಕತಾವಾದಿಗಳ ವಿರುದ್ಧ ನಾವು ಹೋರಾಡುತ್ತಿದ್ದೇವೆ. ಸಾಮಾನ್ಯ ಜನರನ್ನು ಸಂಘಟಿಸುತ್ತಿದ್ದೇವೆ. ಸೆಕ್ಯುಲರ್ ಸಿದ್ಧಾಂತಕ್ಕೆ ಮರುಚೈತನ್ಯ ನೀಡಲು ಪ್ರಯತ್ನಿಸುತ್ತಿದ್ದೇವೆ. ನಾವೇನೂ ದೊಡ್ಡ ಪ್ರಮಾಣದಲ್ಲಿಲ್ಲ. ಆದರೆ ನಮ್ಮನ್ನು ಅಮುಖ್ಯ ಎನ್ನುವಂತೆಯೂ ಇಲ್ಲ.

**ಹೊ** : ಈ ದೇಶದಲ್ಲಿ ಏನು ನಡೆದರೂ ಅದು ಐ.ಎಸ್.ಐ. ಕೈವಾಡ ಎನ್ನಲಾಗುತ್ತದೆ. ನೀವೇನೆನ್ನುವಿರಿ ?

**ತ** : ಅದು ಭಾರಿ ಸಮಸ್ಯೆಗಳನ್ನು ಉಂಟುಮಾಡುತ್ತಿದೆ. ಈ ವಿಷಯದಲ್ಲಿ ನಮ್ಮ ಸೈನ್ಯ, ನಮ್ಮ ಬುದ್ಧಿಜೀವಿಗಳು ಸೋತಿದ್ದಾರೆ ಎನ್ನಬಲ್ಲೆ. ಐ.ಎಸ್.ಐ. ನಮ್ಮ ಆಂತರಿಕ ಬಿಕ್ಕಟ್ಟಿನ ಫಲ. ಈ ಶಕ್ತಿಗಳನ್ನು ಹತ್ತಿಕ್ಕಲು ಸರಕಾರ ದಿಟ್ಟ ಕ್ರಮ ಕೈಗೊಳ್ಳಬೇಕು. ದುರದೃಷ್ಟವಶಾತ್ ಆಳುವ ವರ್ಗದ ರಾಜಕೀಯ ಶಕ್ತಿಗಳು ಇದೇ ಐ.ಎಸ್.ಐ. ಅನ್ನು ಬಳಸಿಕೊಳ್ಳುತ್ತಿವೆ.

**ಹೊ** : ಕಾಶ್ಮೀರದ ವಿಷಯದಲ್ಲಿ ಅಮೆರಿಕದ ಆಸಕ್ತಿಗಳೇನು ? ಅದರ ಒಳಸಂಚುಗಳು ಏನಿರಬಹುದು ?

**ತ** : ಸೋವಿಯತ್ ಒಕ್ಕೂಟ ಒಡೆದ ನಂತರ ಜಗತ್ತಿನ ರಾಜಕೀಯ ಕ್ಷೇತ್ರದಲ್ಲಿ ಅನೇಕ ಬೆಳವಣಿಗೆಗಳಾಗುತ್ತಿವೆ. ಪಾಕಿಸ್ತಾನವನ್ನು ಅಮೆರಿಕ ತನ್ನ ಹಿಂಬಾಲಕ ದೇಶವೆಂದು ಪರಿಗಣಿಸಿತ್ತು. ಈಗ ಭಾರತದತ್ತ ಆಸಕ್ತಿ ತೋರಿಸುತ್ತಿದೆ. ಅಮೆರಿಕ ಕಾಶ್ಮೀರವನ್ನು ಆಯಕಟ್ಟಿನ ಪ್ರದೇಶವಾಗಿ ಪರಿಗಣಿಸುತ್ತದೆ. ನಮ್ಮ ವಿದೇಶ ನೀತಿಯಲ್ಲಿ ಈಗ ಸ್ಪಷ್ಟ ಬದಲಾವಣೆಗಳಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಅಮೆರಿಕದ ಪ್ರಭಾವಕ್ಕೆ ಭಾರತ ಹೆಚ್ಚು ಹೆಚ್ಚು ಸಮೀಪವಾಗುತ್ತಿದೆ. ದಿಲ್ಲಿಯಲ್ಲಿ ಅಮೆರಿಕದ ಎಫ್.ಬಿ.ಐ.ಗೆ (ಪೊಲೀಸ್‌ದಳ) ಚಟುವಟಿಕೆ ನಡೆಸಲು ಅವಕಾಶ ನೀಡಲಾಗಿದೆ. ಅಮೆರಿಕದೊಂದಿಗೆ ಮಿಲಿಟರಿ ಸಖ್ಯದ ಮಾತುಗಳೂ ಕೇಳಿಬರುತ್ತಿವೆ. ಇದರಿಂದ ಅಮೆರಿಕ ಹಸ್ತಕ್ಷೇಪ ನಡೆಸಲು ಅವಕಾಶವಾಗಬಹುದು. ನಮ್ಮ ಸಾರ್ವಭೌಮತೆಗೇ ಗಂಡಾಂತರ ಒದಗಬಹುದು. ದೇಶಾಭಿಮಾನಿ ಶಕ್ತಿಗಳು ಈ ಅಪಾಯದ ವಿರುದ್ಧ ಹೋರಾಡಬೇಕಿದೆ. ಅಮೆರಿಕದ ಸಂಚುಗಳನ್ನು ವಿಫಲಗೊಳಿಸಬೇಕಿದೆ.

ಕೊನೆಯದಾಗಿ, ಕಾಶ್ಮೀರದ ಸಮಸ್ಯೆ ಬಗೆಹರಿಯಬೇಕಾದರೆ ಭಾರತ ಮತ್ತು ಪಾಕಿಸ್ತಾನ ಪರಸ್ಪರ ಮಾತುಕತೆಗಳನ್ನು ಮುಂದುವರಿಸಬೇಕು. ನಮ್ಮ ದೇಶಗಳು ಅಸ್ತಿತ್ವಕ್ಕೆ ಬಂದ ಕಳೆದ ೫೪ ವರ್ಷಗಳು ಪರಸ್ಪರ ವೈರ ಸಾಧಿಸುತ್ತಲೇ ಕಳೆದುಹೋಗಿವೆ. ಇದೊಂದು [illegible]. ಎರಡೂ ದೇಶಗಳ ಜನರು ಶಾಂತಿ ಸೌಹಾರ್ದತೆ ಬಯಸುತ್ತಾರೆ. ಈ ಪ್ರಕ್ರಿಯೆಗೆ ಒತ್ತಾಸೆ ನೀಡಲು ಸೆಕ್ಯುಲರ್ ಶಕ್ತಿಗಳು ಮುಂದಾಗಲು ಇದು ತಕ್ಕ ಸಮಯ. ಭಾರತ-ಪಾಕಿಸ್ತಾನಗಳ ಮಧ್ಯೆ ಶಾಂತಿ ನೆಲೆಸುವಂತೆ ಮಾಡುವ ಸಕಾರಾತ್ಮಕ ಕ್ರಮ ಇಂದಿನ ಅಗತ್ಯ. ಇದು ಏಷ್ಯಾದ ಸಮಗ್ರ ಪ್ರದೇಶಗಳ ಜನರ ಹಿತಾಸಕ್ತಿಗಳಿಗೆ ಅನುಗುಣವಾಗಿದೆ.

OOO

# ಮಕ್ಕಳ ಮೇಲೆ ಜಾಹೀರಾತುಗಳ ಪರಿಣಾಮ

**ಪ್ರ**ತಿದಿನ ಸಂಜೆ ಉತ್ಸಾಹದಿಂದ ಪುಟಿಯುತ್ತಾ ಆಟವಾಡುತ್ತಿದ್ದ ಪಕ್ಕದ ಮನೆಯ ಹುಡುಗ ರಾಜು, ಇನ್ನು ಮೂರು ತಿಂಗಳು ಶಾಲೆಗೂ ಹೋಗುವಂತಿಲ್ಲ; ಆಡುವಂತಿಲ್ಲ. ಯಾಕೆ ಹೀಗಾಯಿತು ? ಸೈಕಲಿನಿಂದ ಬಿದ್ದ ರಾಜು ಕಾಲು ಮುರಿದುಕೊಂಡು ಆಸ್ಪತ್ರೆಯಲ್ಲಿ ಮಲಗಿದ್ದಾನೆ. ರಾಜುವಿನ ತಂದೆ ಇತ್ತೀಚೆಗಷ್ಟೇ ಅವನಿಗೊಂದು ಸೈಕಲ್ ತೆಗೆಸಿಕೊಟ್ಟಿದ್ದರು. ಕೆಲವೇ ದಿನಗಳಲ್ಲಿ ಸೈಕಲ್ ಓಡಿಸಲು ಕಲಿತ ರಾಜು, ವೇಗವಾಗಿ ಸೈಕಲ್ ಓಡಿಸತೊಡಗಿದ್ದ; ಬೀದಿಯವರಿಗೆಲ್ಲ ತನ್ನ ಬ್ಯಾಲೆನ್ಸ್ ಪ್ರದರ್ಶಿಸತೊಡಗಿದ್ದ. ನಾಯಿಯೊಂದು ಪಕ್ಕನೆ ಸೈಕಲ್ಲಿಗೆ ಅಡ್ಡಬಂದಾಗ ರಾಜು ಕೆಳಗುರುಳಿ ಬಿದ್ದ. ''ಯಾಕೆ ಹೀಗೆ ಮಾಡಿದಿ, ರಾಜು ?'' ಅಂತ ಕೇಳಿದಾಗ ಅವನ ಉತ್ತರ : ''ಟೀವಿಯಲ್ಲಿ ನನಗಿಂತ ಜೋರಾಗಿ ಸೈಕಲ್ ಓಡಿಸ್ತಿದ್ದರು. ಅವರಿಗೇನೂ ಆಗ್ಲಿಲ್ಲ''



**ಬೆಟ್ಟದಿಂದ ಜಿಗಿದಂತೆ ಮಹಡಿಯಿಂದ ಜಿಗಿದರೆ....**

ಇದೇ ರೀತಿ ಟೆಲಿವಿಷನ್ ಜಾಹೀರಾತಿನ ಮೋಡಿಗೆ ಮರುಳಾಗಿ ದೆಹಲಿಯ ಬಾಲಕಿಯೊಬ್ಬಳು ಜೀವವನ್ನೇ ಕಳಕೊಂಡಳು ! ಅವಳನ್ನು ಮರುಳು ಮಾಡಿದ್ದು ಲಘು ಪಾನೀಯವೊಂದರ ದಂಗು ಬಡಿಸುವ ಟೆಲಿವಿಷನ್ ಜಾಹೀರಾತು. ಅದರಲ್ಲಿ ಕಾಲಿಗೆ ಹಗ್ಗ ಬಿಗಿದುಕೊಂಡ ಯುವಕನೊಬ್ಬ ಬೆಟ್ಟದ ತುದಿಯಿಂದ ತಲೆಕೆಳಗಾಗಿ ಕೆಳಕ್ಕೆ ಜಿಗಿಯುತ್ತಾನೆ. ಬೆಟ್ಟದ ಕೊಳ್ಳದ ಹಾದಿಯಲ್ಲಿ ಸಾಗುತ್ತಿರುವ ಟ್ರಕ್‌ನಿಂದ ಲಘು ಪಾನೀಯವೊಂದರ ಬಾಟಲಿಯೊಂದನ್ನು ಆತ ಸೆಳೆದುಕೊಳ್ಳುತ್ತಾನೆ. ಒಡನೆಯೇ ಕಾಲಿನ ಹಗ್ಗದ ಬಲದಿಂದ ಗುಡ್ಡದ ತುದಿಗೆ ಸೆಳೆಯಲ್ಪಡುತ್ತಾನೆ. ತನ್ನ ಸಂಗಡಿಗರೊಂದಿಗೆ ಉಲ್ಲಾಸದಿಂದ ಕುಣಿಯುತ್ತ ಆ ಲಘು ಪಾನೀಯವನ್ನು ಗಟಗಟನೆ ಕುಡಿಯುತ್ತಾನೆ. ಮಕ್ಕಳನ್ನು ಭ್ರಮಾಲೋಕಕ್ಕೆ ಸೆಳೆಯುವ ಈ ಜಾಹೀರಾತು, ಆ ಬಾಲಕಿಯನ್ನು ಮಹಡಿಯಿಂದ ಕೆಳಕ್ಕೆ ಜಿಗಿಯಲು ಪ್ರೇರೇಪಿಸಿತು. ನೆಲಕ್ಕೆ ಅಪ್ಪಳಿಸಿದ ಆಕೆ, ಜೀವ ಸಹಿತ ಮೇಲಕ್ಕೆ ಜಿಗಿಯಲಿಲ್ಲ; ತಲೆಯೊಡೆದು ಸತ್ತಳು.

ಮುಗ್ಧ ಬಾಲಕಿ ಬಲಿಯಾದ ಬಳಿಕವಾದರೂ ಆ ಜಾಹೀರಾತನ್ನು ನಿಷೇಧಿಸಲಾಯಿತೇ ? ಇಲ್ಲ, ಬದಲಾಗಿ ಆ ಜಾಹೀರಾತಿಗೊಂದು ಪುಟ್ಟ ವಾಕ್ಯ ಸೇರಿಸಲಾಯಿತು: ''ಈ ಜಾಹೀರಾತಿನಲ್ಲಿ ಕಸರತ್ತು ಮಾಡುವವನು ತರಬೇತಾದ ವ್ಯಕ್ತಿ; ಇದನ್ನು ಇತರರು ಅನುಸರಿಸಿದರೆ ಅಪಾಯವಾದೀತು'' ಎಂಬರ್ಥದ ವಾಕ್ಯ. ಆದರೆ ಈ ವಾಕ್ಯವನ್ನು ಟೀವಿ ವೀಕ್ಷಕರಾರೂ ಓದುವಂತಿಲ್ಲ. ಯಾಕೆಂದರೆ ಅದು ಟೀವಿ ಪರದೆಯಲ್ಲಿ ತೀರ ಸಣ್ಣ ಅಕ್ಷರಗಳಲ್ಲಿ ಮಿಂಚಿ ಮಾಯವಾಗುತ್ತದೆ.

ಬಾಲಕಿ ತಲೆಯೊಡೆದು ಸತ್ತರೇ ನಂತೆ ? ಆ ಜಾಹೀರಾತಿನಿಂದಾಗಿ ಲಘು ಪಾನೀಯದ ಮಾರಾಟವಂತೂ ವೇಗವಾಗಿ ಹೆಚ್ಚಿತು.

ಮಕ್ಕಳನ್ನು ಮರುಳು ಮಾಡುವ ಜಾಹೀರಾತುಗಳ ಪ್ರವರ್ತಕರು, ಮಕ್ಕಳು ಬಲಿಯಾದರೂ ತಮ್ಮ ಜವಾಬ್ದಾರಿಯಿಂದ ಹೇಗೆ ನುಣುಚಿಕೊಳ್ಳುತ್ತಾರೆ ಎಂಬುದಕ್ಕೆ ಈ ಪ್ರಕರಣ ಒಂದು ನಿದರ್ಶನ.

**ಡಿಟರ್ಜೆಂಟ್‌ಗಳ ಬಣ್ಣದಾಟ**

ವಿವಿಧ ಡಿಟರ್ಜೆಂಟ್‌ಗಳು ಉಡುಪುಗಳನ್ನು ಸ್ವಚ್ಛ ಮಾಡುವ ಬಗ್ಗೆ ಅಬ್ಬರದ ಟೀವಿ ಮತ್ತು ರೇಡಿಯೋ ಜಾಹೀರಾತುಗಳನ್ನು ಗಮನಿಸಿದ್ದೀರಿ ತಾನೇ ? ದಿನಪತ್ರಿಕೆಗಳ ಹಾಳೆಗಳಿಗೆ ಬಟ್ಟೆ ತುಂಡುಗಳನ್ನೇ ಅಂಟಿಸಿ ಡಿಟರ್ಜೆಂಟ್‌ಗಳ ಉಪಯೋಗವನ್ನು ತೋರಿಸಿಕೊಡುವ ಜಾಹೀರಾತುಗಳೂ ಪ್ರಕಟವಾಗಿವೆ. ಆದರೆ ಮಕ್ಕಳ ಮೇಲೆ ಡಿಟರ್ಜೆಂಟ್‌ಗಳ ದುಷ್ಪರಿಣಾಮಗಳ ಬಗ್ಗೆ ? ಅಹ್ಮದಾಬಾದಿನ ಕನ್ಸೂಮರ್ ಎಜುಕೇಷನ್ ಅಂಡ್ ರೀಸರ್ಚ್ ಸೆಂಟರಿನ ಪ್ರೀತಿ ಷಾ ಅವರು ಇದರ ಬಗ್ಗೆ ಹೀಗೆ ಪ್ರಕಟಿಸಿದ್ದಾರೆ:

''ಎಳೆ ಮಕ್ಕಳ ಉಡುಪು ತೊಳೆಯಲು ಡಿಟರ್ಜೆಂಟ್‌ಗಳ ಬಳಕೆ ನಿಲ್ಲಿಸಿದೊಡನೆಯೇ, ಎಳೆ ಮಕ್ಕಳ ಶೇಕಡಾ ೮೦ರಷ್ಟು ಚರ್ಮದ ತೊಂದರೆಗಳು ನಿವಾರಣೆಯಾದವು.''

ಎಳೆಯ ಮಕ್ಕಳ ಚರ್ಮ ಪ್ರಾಯದ ವ್ಯಕ್ತಿಗಳ ಚರ್ಮಕ್ಕಿಂತ ತೆಳುವು. ಹಾಗಾಗಿ, ಮಕ್ಕಳ ಚರ್ಮ ಬ್ಯಾಕ್ಟೀರಿಯಾ ಧಾಳಿಗೆ ಬಲಿಯಾಗುವ ಸಂಭವವೇ ಹೆಚ್ಚು.

*ಟೀವಿ ಮತ್ತಿತರ ಮಾಧ್ಯಮಗಳಲ್ಲಿ ರಾರಾಜಿಸುತ್ತಿರುವ ಬಣ್ಣಬಣ್ಣದ ಜಾಹೀರಾತುಗಳು ಸಮಾಜದ ಮೇಲೆ ಕೆಟ್ಟ ಪರಿಣಾಮವನ್ನುಂಟುಮಾಡುತ್ತಿವೆ. ಬಹಳಷ್ಟು ಜಾಹೀರಾತುಗಳು ಅಪ್ರಾಮಾಣಿಕ ಹಾಗೂ ಸುಳ್ಳು ಅಂಶಗಳಿಂದ ಕೂಡಿರುತ್ತವೆ. ಈ ಜಾಹೀರಾತುಗಳ ಸಮ್ಮೋಹಿನಿಗೆ ಅಮಾಯಕ ಮಕ್ಕಳು, ಯುವಕರು ಮತ್ತು ವಯಸ್ಕರು ಬಲಿಯಾಗದಂತೆ ತಡೆಯಲು ಜನ ಜಾಗೃತಿಯನ್ನು ಮೂಡಿಸಬೇಕಾಗಿದೆ. ಲಾಭಗಳಿಕೆಯನ್ನೇ ಪ್ರಧಾನ ಅಂಶವನ್ನಾಗಿಸಿಕೊಂಡು ಮೆರೆಯುತ್ತಿರುವ ಮಾರುಕಟ್ಟೆಯ ಮೌಲ್ಯಗಳು ಸಮಾಜಕ್ಕೆ ದೊಡ್ಡ ಪಿಡುಗಾಗಿ ಪರಿಣಮಿಸುತ್ತಿವೆ. ಕೊಳ್ಳುಬಾಕತನಕ್ಕೆ ಜನಸಾಮಾನ್ಯರು ಅರಿವಿದ್ದೋ ಇಲ್ಲದೆಯೋ ಬಲಿಪಶುಗಳಾಗುತ್ತಿದ್ದಾರೆ. ಇದರಿಂದಾಗಿ ಜಾಹೀರಾತುಗಳ ಜಗತ್ತು ಈಗ ವಿಜೃಂಭಿಸುತ್ತಿದೆ. ಇದೊಂದು ದುಷ್ಪರಿಣಾಮಕರ ಹಾಗೂ ಅಪಾಯಕಾರಿ ಬೆಳವಣಿಗೆ ಎನ್ನುವುದರಲ್ಲಿ ಎರಡು ಮಾತಿಲ್ಲ.*

**ಅಡ್ಡೂರು ಕೃಷ್ಣರಾವ್**

**ಸಾಬೂನುಗಳ ನೊರೆಯಲ್ಲಿ....**

ಸಾಬೂನುಗಳ ಜಾಹೀರಾತುಗಳೂ ಹಾಗೆಯೇ. ಅವು ಮಕ್ಕಳ ಆರೋಗ್ಯಕ್ಕೆ ಮಾರಕವಾಗಬಲ್ಲವು. ಲಕ್ಸ್, ಲೈಫ್ ಬಾಯ್, ಮಾರ್ಗೋ, ಪಿಯರ್ಸ್, ನಿರ್ಮಾ, ಚಂದ್ರಿಕ ಇತ್ಯಾದಿ ಸಾಬೂನುಗಳ ಹೆಸರುಗಳು ಜಾಹೀರಾತುಗಳಿಂದಾಗಿ ಮನೆಮಾತಾಗಿವೆ. ಆದರೆ, ಈ ಸಾಬೂನುಗಳು ಮಕ್ಕಳ ಬಳಕೆಗೆ ಸುರಕ್ಷಿತವೇ ? ಅಲ್ಲವೇ ? ಎಂದು ಯಾವ ಜಾಹೀರಾತಿನಲ್ಲೂ ತಿಳಿಸುವುದಿಲ್ಲ. ಎಳೆಯ ಮಗುವಿಗೆ ಸಾಬೂನಿನಿಂದ ಸ್ನಾನ ಮಾಡಿಸುವ, ಸಾಬೂನಿನ ಸ್ಪರ್ಶದಿಂದ ಮಗು ಕಿಲಕಿಲನೆ ನಗುವ, ಸಾಬೂನಿನ ನೊರೆಯಲ್ಲಿ ಎಳೆಯ ಮಗು




ಆಟವಾಡುವ ದೃಶ್ಯಗಳು ಅಂಥ ಸಾಬೂನು ಮಗುವಿಗೆ ಸುರಕ್ಷಿತ ಎಂಬ ಭಾವನೆ ಮೂಡಿಸುತ್ತವೆ. ಆದರೆ, ಸತ್ಯಸಂಗತಿ ಏನು ? ಐ.ಎಸ್.ಐ. ಅಂಕಿತ ನೀಡುವ ಬ್ಯೂರೋ ಆಫ್ ಇಂಡಿಯನ್ ಸ್ಟಾಂಡರ್ಡ್ಸ್ ಮಕ್ಕಳ ಸಾಬೂನಿಗಾಗಿ ಒಂದು ಪ್ರತ್ಯೇಕ ಮಾನಕವನ್ನೇ ನಿಗದಿಪಡಿಸಿದೆ. ಅದರ ಪ್ರಕಾರ, ಮಕ್ಕಳ ಸಾಬೂನಿನಲ್ಲಿ ರೆಸಿನ್ ಬಳಸಬಾರದು. ಯಾಕೆಂದರೆ ಅದು ಮಕ್ಕಳ ಚರ್ಮದಲ್ಲಿ ಉರಿ ಉಂಟು ಮಾಡಬಹುದು. ಜೊತೆಗೆ, ಮಕ್ಕಳ ಸಾಬೂನಿನಲ್ಲಿ ಕಾಸ್ಟಿಕ್ ಹಾಗೂ ಕಾರ್ಬನೇಟೆಡ್ ಆಲ್ಕಲಿಗಳ ಮತ್ತು ಭಾರ ಲೋಹಗಳಾದ ನಿಕ್ಕಲ್, ತಾಮ್ರ ಮತ್ತು ಕಬ್ಬಿಣದ ಬಳಕೆಗೆ ಮಿತಿಗಳನ್ನು ಹೇರಿದೆ.

ಈ ಬಗ್ಗೆ ಸಾಬೂನಿನ ಜಾಹೀರಾತುಗಳಲ್ಲಿ ಉತ್ಪಾದಕರು ಮಾಹಿತಿ ನೀಡುವುದಿಲ್ಲ. ಇದರಿಂದಾಗಿ ತೊಂದರೆಗೆ ಒಳಗಾಗುವವರು ಅಮಾಯಕ ಮಕ್ಕಳು. ಉದಾಹರಣೆಗೆ, ಹಲವು ವರುಷಗಳ ಮುನ್ನ ಜನಪ್ರಿಯ ಸಾಬೂನೊಂದು ಭಾರೀ ಪ್ರಚಾರ ನೀಡಿತು- ಆದರಲ್ಲಿ ಮೈ ವಾಸನೆ ಹೋಗಲಾಡಿಸುವ ಹೆಕ್ಸಾಕ್ಲೋರೋಫೀನ್ ಎಂಬ ಅದ್ಭುತ ವಸ್ತುವಿದೆ ಅಂತ. ಅನಂತರ [illegible]ನಲ್ಲಿ ನಡೆದ ದುರ್ಘಟನೆಯೊಂದರಲ್ಲಿ ಮೂವತ್ತು ಎಳೆಯ ಮಕ್ಕಳು ಸತ್ತುಹೋದರು. ಆ ಮಕ್ಕಳ ಮೈಗೆ ಚಿಮುಕಿಸಿದ ಪೌಡರಿನಲ್ಲಿದ್ದ ಹೆಕ್ಸಾಕ್ಲೋರೋಫೀನ್ ಚರ್ಮದ ಮೂಲಕ ರಕ್ತಕ್ಕೆ ಹೀರಲ್ಪಟ್ಟು ಪ್ರಾಣಾಂತಿಕವಾಗಿತ್ತು. ಅನಂತರ ಅದರ ಬಳಕೆಯನ್ನು ನಿಷೇಧಿಸಲಾಯಿತು.

**ಪೌಡರಿನ ನಾಜೂಕು**

''ಉರಿ ಸೆಕೆಯ ತುರಿಕೆ ಅತ್ಯಂತ ಶೀಘ್ರ ಶಮನವಾಗಲಿಕ್ಕಾಗಿ ನೈಸಿಲ್ ಪೌಡರ್ ಬಳಸಿ'' ಎಂದು ಘೋಷಿಸುವ ನೈಸಿಲ್‌ನ ಜಾಹೀರಾತಿನಲ್ಲಿ ಪ್ರಧಾನವಾಗಿ ಕಾಣುವ ಚಿತ್ರವನ್ನು ಗಮನಿಸಿದ್ದೀರಾ ? ಅದು ಮುಳ್ಳುಗಳ ಕಂತೆ ಚುಚ್ಚಿರುವ ತನ್ನ ಬೆನ್ನನ್ನು ತುರಿಸಿಕೊಳ್ಳುತ್ತಿರುವ ಬಾಲಕನ ಚಿತ್ರ. ಅಲ್ಲೇ ಕೆಳಭಾಗದಲ್ಲಿ ಪುಟ್ಟ ಚಿತ್ರದಲ್ಲಿ ಅದೇ ಬಾಲಕ ತನ್ನ ತಂದೆ ತಾಯಿಗಳೊಂದಿಗೆ ಮುಗುಳ್ನಗುತ್ತಿದ್ದಾನೆ; ಪಕ್ಕದಲ್ಲೇ ನೈಸಿಲ್ ಪೌಡರ್ ಡಬ್ಬವಿದೆ. ಜಾಹೀರಾತಿನಲ್ಲಿ ಇದನ್ನು ನೋಡಿದ ಮಕ್ಕಳು ಸೆಕೆಗಾಲದಲ್ಲಿ ಪೌಡರ್ ಹಾಕಬೇಕೂಂತ ಹೆತ್ತವರನ್ನು ಒತ್ತಾಯಿಸುತ್ತಾರೆ. ಹಾಗಂತ ಮಕ್ಕಳಿಗೆ ಪೌಡರ್ ಹಾಕಿದಿರೋ ಜೋಕೆ ! ಯಾಕೆಂದರೆ, ಆ ಪೌಡರ್ ಡಬ್ಬದ ಲೇಬಲ್‌ನಲ್ಲಿ ಈ ಎಚ್ಚರಿಕೆ ಮುದ್ರಿಸಲಾಗಿದೆ: ''ಈ ಪೌಡರ್ ಎಳೆಯ ಮಕ್ಕಳಿಗೆ ಸೂಕ್ತವಲ್ಲ.'' ಹೇಗಿದೆ ಜಾಹೀರಾತಿನ ತಂತ್ರ ! ಅದಕ್ಕಾಗಿಯೇ, ಲೇಬಲ್‌ಗಳಲ್ಲಿ ಸೂಕ್ಷ್ಮ ಅಕ್ಷರಗಳಲ್ಲಿ ಮುದ್ರಿಸಿದ್ದನ್ನು ಜೋಪಾನವಾಗಿ ಓದಿ ಅನುಸರಿಸಬೇಕು.

**ಟೂತ್‌ಪೇಸ್ಟ್‌ನ ಗುಟ್ಟು**

ಟೂತ್‌ಪೇಸ್ಟ್‌ಗಳ ಅನೇಕ ಜಾಹೀರಾತುಗಳನ್ನು ಕೇಳದವರುಂಟೇ, ನೋಡದವರುಂಟೇ ? ದಂತ ವೈದ್ಯರ ಉಡುಪು ಧರಿಸಿದ ವ್ಯಕ್ತಿ ''ನಿಮ್ಮ ಹಲ್ಲಿನ ಆರೋಗ್ಯಕ್ಕಾಗಿ ಈ ಟೂತ್‌ಪೇಸ್ಟ್'' ಎಂದು ಕಾಲ್ಗೇಟ್ ಟೂತ್‌ಪೇಸ್ಟನ್ನು ತೋರಿಸುವ ಜಾಹೀರಾತು, ಆ ಟೂತ್‌ಪೇಸ್ಟನ್ನು ಬಳಸಿ ಉತ್ಸಾಹದಿಂದ ಚಿಮ್ಮಿ ನೆಗೆಯುವ ಯುವಕರ ಸಮೂಹ- ಇಂಥ ಜಾಹೀರಾತುಗಳು ಮಕ್ಕಳ ನೆನಪಿನಲ್ಲಿ ದೀರ್ಘಕಾಲ ಉಳಿಯುತ್ತವೆ.

ಇಂಥ ಜಾಹೀರಾತುಗಳ ಮಾಯಾಲೋಕದಿಂದ ಹೊರಬಂದರೆ ಮಾತ್ರ ನಮಗೆ ಸತ್ಯ ತಿಳಿಯುತ್ತದೆ. ಟೂತ್‌ಬ್ರಷ್‌ನಿಂದ ಉಜ್ಜಿಕೊಳ್ಳುವುದರಿಂದಾಗಿಯೇ ನಮ್ಮ ಹಲ್ಲುಗಳು ಶುಚಿಯಾಗುತ್ತವೆಯೇ ಹೊರತು ಟೂತ್ ಪೇಸ್ಟಿನಿಂದಾಗಿ ಅಲ್ಲ ಎಂಬ ಸತ್ಯ ನಮಗೆಲ್ಲರಿಗೂ ಗೊತ್ತು. ಆದರೆ ಟೂತ್‌ಪೇಸ್ಟಿನಲ್ಲಿರುವ ಫ್ಲೋರೈಡಿನ ಅಪಾಯಗಳ ಬಗ್ಗೆ ನಮ್ಮಲ್ಲಿ ಹಲವರಿಗೆ ಗೊತ್ತಿರಲಿಕ್ಕಿಲ್ಲ.

ಅಹ್ಮದಾಬಾದಿನ ಕನ್ಸೂಮರ್ ಅಂಡ್ ರೀಸರ್ಚ್ ಸೆಂಟರ್ ರಾಷ್ಟ್ರೀಯ ಬಳಕೆದಾರರ ದೂರು ಪರಿಹಾರ ಕಮಿಷನಿನಲ್ಲಿ ದಾವೆ ಹೂಡಿದೆ. ಸಿಗರೇಟಿನ ಅಪಾಯಕಾರಿ ಪರಿಣಾಮಗಳ ಬಗ್ಗೆ ''ಶಾಸನಬದ್ಧ ಎಚ್ಚರಿಕೆ''ಯನ್ನು ಪ್ರಕಟಿಸುವ ರೀತಿಯಲ್ಲಿಯೇ ಫ್ಲೋರೈಡಿನ ಅಪಾಯಕಾರಿ ಪರಿಣಾಮಗಳ ಬಗ್ಗೆಯೂ ಶಾಸನಬದ್ಧ ಎಚ್ಚರಿಕೆಯನ್ನು ಟೂತ್‌ಪೇಸ್ಟಿನ ಪ್ಯಾಕೆಟಿನಲ್ಲಿ ಪ್ರಕಟಿಸಬೇಕೆಂದು ಆದೇಶಿಸುವಂತೆ ಆ ದಾವೆಯಲ್ಲಿ ಕೋರಲಾಗಿದೆ.

**ಭ್ರಮೆ ಮೂಡಿಸುವ ಜಾಹಿರಾತುಗಳು**

''ಐ ಲವ್ ಯು ರಸ್ನಾ'', ''ರಸ್ನಾಕ್ಕಾಗಿ ಏನು ಬೇಕಾದರೂ ಮಾಡುವೆ'' ಎಂಬ ಜಾಹೀರಾತುಗಳಿಂದ ಕೃತಕ ರುಚಿಯ ರಾಸಾಯನಿಕ ಪಾನೀಯ ರಸ್ನಾ ಮನೆ ಮಾತಾದದ್ದನ್ನು ಯಾರೂ ಮರೆಯುವಹಾಗಿಲ್ಲ. ಮ್ಯಾಗೀ ಇನ್‌ಸ್ಟಂಟ್ ನೂಡಲ್‌ನಲ್ಲಿ ಮೋನೋಸೋಡಿಯಂ ಗ್ಲುಟಮೇಟನ್ನು (ಎಂ.ಎಸ್.ಜಿ) ಸೇರಿಸಿದೆ. ಬಳಕೆ ವಸ್ತುಗಳ ಬಣ್ಣ ಮತ್ತು ಪರಿಮಳ ಕಾಪಾಡುವ ಎಂ.ಎಸ್.ಜಿ.ಯನ್ನು ಸೂಪ್, ಪೌಡರ್, ಬಿಸ್ಕತ್ತು, ಉಪ್ಪೇರಿ ಮುಂತಾದ ತಿನಿಸುಗಳ ತಯಾರಿಕೆಯಲ್ಲಿ ಉಪಯೋಗಿಸಲಾಗುತ್ತದೆ. ಎಂ.ಎಸ್.ಜಿ. ಮೆದುಳಿನ ಹಾನಿಗೆ, ಷಂಡತನ ಮತ್ತಿತರ ಕಾಯಿಲೆಗಳಿಗೆ ಕಾರಣವಾಗುತ್ತಿದೆಂಬುದು ಈಗೀಗ ಬಹಿರಂಗವಾಗುತ್ತಿದೆ. ಚೂಯಿಂಗ್‌ಗಮ್ಮಿನಲ್ಲಿರುವ ಸಕ್ಕರೆ ಮತ್ತು ಪೆಟ್ರೋಲಿಯಂ ಉತ್ಪನ್ನಗಳೂ ಹಾಗೆಯೇ. ದಿಢೀರ್ ಶಕ್ತಿಗಾಗಿ ಗ್ಲೂಕೋಸ್ ಪೌಡರ್, ಅಧಿಕ ಶಕ್ತಿಗಾಗಿ ಬೋರ್ನ್‌ವಿಟಾ, ಬೂಸ್ಟ್, ಕಾಂಪ್ಲಾನ್, ಕಾಂಪ್ಲಾನ್ ಕಂಪ್ಲೀಟ್ ಫುಡ್, ಹಾರ್ಲಿಕ್ಸ್, ಜೂನಿಯರ್ ಹಾರ್ಲಿಕ್ಸ್, ತರಾವರಿ ಟೂತ್‌ಪೇಸ್ಟುಗಳು.... ಹೀಗೆ ಈ ಪಟ್ಟಿಗೆ ಕೊನೆಯೇ ಇಲ್ಲ. ಇವುಗಳ ತಯಾರಿಕೆಯಲ್ಲಿ ಬಳಸುವ ಎಷ್ಟೋ ರಾಸಾಯನಿಕ ವಸ್ತುಗಳನ್ನು ನಿಷೇಧಿಸಲಾಗಿದೆ. ಅಹ್ಮದಾಬಾದಿನ ಕನ್ಸೂಮರ್ ಎಜುಕೇಷನ್ ಅಂಡ್ ರೀಸರ್ಚ್ ಸೆಂಟರ್ ಅವರು ಹೊರತರುವ 'ಇನ್‌ಸೈಡ್'ನಂತಹ ದ್ವೈಮಾಸಿಕ ಮತ್ತಿತರ ಪ್ರಕಟಣೆಗಳು, ಅನೇಕ ಸ್ವಯಂ ಸೇವಾ ಸಂಘಟನೆಗಳು ಹಮ್ಮಿಕೊಳ್ಳುವ ಗ್ರಾಹಕಪರ ಕಾರ್ಯಕ್ರಮಗಳು ಈ ಜಾಹೀರಾತುಗಳ ಹಿಂದಿರುವ ನಿಜ ಬಣ್ಣವನ್ನು ಬಯಲು ಮಾಡುವುದೇ ಅಲ್ಲದೆ ವಿವಿಧ ಆಧಾರಯುತ ಮಾಹಿತಿಗಳ ಲೋಕವನ್ನೇ ನಮ್ಮೆದುರು ತೆರೆದಿಡುತ್ತವೆ.

**ಅಡ್ಡೂರು ಕೃಷ್ಣರಾವ್**
ಮ್ಯಾನೇಜರ್, ಕಾರ್ಪೊರೇಷನ್ ಬ್ಯಾಂಕ್, ಎಂ.ಜಿ. ರಸ್ತೆ
ಚಿಕ್ಕಮಗಳೂರು - ೫೭೭ ೧೦೧

# ಶರದ್ವೈಭವ



**ಪು**ಷ್ಪಕ ವಿಮಾನದಲ್ಲಿ ಕುಳಿತ ರಾಮ ತನ್ನೊಡನಿದ್ದ ಸೀತೆಗೆ ಸಮುದ್ರವನ್ನೂ ಅದರ ಮೇಲಿನ ಸೇತುವೆಯನ್ನೂ ತೋರಿಸಿದ ಸಂದರ್ಭ. ಇಲ್ಲಿ ಕಾಳಿದಾಸ ಬಳಸಿರುವ ಉಪಮೆ – ''ಶರತ್ ಆಕಾಶದಲ್ಲಿ ನಕ್ಷತ್ರಗಳಿಂದ ನಿರ್ಮಿತವಾದ ಛಾಯಾಪಥದಂತೆ ಕಾಣುತ್ತಿದೆ'' (ರಘುವಂಶ). ಶರತ್ಕಾಲದ ಆಕಾಶ ನಿಜವಾಗಿಯೂ ಮನೋಹರವಾದದ್ದು. ಮೋಡಗಳು ಬಿಡುವುಕೊಟ್ಟಾಗ, ಚಂದ್ರನ ಬೆಳಕೂ ಇಲ್ಲದಿದ್ದರೆ, ಬರಿಗಣ್ಣಿನಿಂದ ಈ ಸೊಬಗನ್ನು ಆಸ್ವಾದಿಸಬಹುದು. ಕೆಂಪಗೆ ಹೊಳೆಯುತ್ತಿರುವ ಮಂಗಳ ಗ್ರಹವನ್ನೇ ಆರಂಭದ ಬಿಂದುವನ್ನಾಗಿ ಇಟ್ಟುಕೊಳ್ಳಿ. ನೆಬ್ಯುಲಗಳು, ನಕ್ಷತ್ರಗಳಿಂದ ತುಂಬಿದ ಧನುರಾಶಿಯಲ್ಲಿದೆ ಮಂಗಳ. ಪಕ್ಕದ ವೃಶ್ಚಿಕ ರಾಶಿಯ ದಕ್ಷಿಣ ತುದಿ ಅಂದರೆ ಚೇಳಿನ ಬಾಲದ ಭಾಗದಿಂದ ಆರಂಭಿಸಿ, ಮಂಗಳದ ಆಸುಪಾಸಿನ ಧನುರಾಶಿಯನ್ನು ದಾಟಿ ನೆತ್ತಿಯವರೆಗೂ ದೃಷ್ಟಿ ಹರಿಸಿ. ಅಲ್ಲಿದೆ ಶ್ರವಣ ನಕ್ಷತ್ರ. ಅದು ಇರುವ ಪುಂಜ ಅಕ್ವಿಲಾ (ಗರುಡ). ಹಾಗೆಯೇ ಮುಂದುವರೆದು ನೆತ್ತಿಯನ್ನು ದಾಟಿ ವಾಯವ್ಯದವರೆಗೂ ದೃಷ್ಟಿ ಹರಿಸಿ. ಸಿಗ್ನಸ್ (ರಾಜಹಂಸ) ಮುಂದೆ ಕಾಸಿಯೋಪಿಯಾ (ಕುಂತಿ) - ಇವೆಲ್ಲವೂ ಆಕಾಶಗಂಗೆಯ ವ್ಯಾಪ್ತಿಯಲ್ಲಿವೆ. ಅಂದರೆ ಉಳಿದ ನಕ್ಷತ್ರಗಳು ಆಕಾಶಗಂಗೆಗೆ ಸೇರಿಲ್ಲ ಎಂದರ್ಥವಲ್ಲ. ಆಕಾಶದ ಇತರ ಭಾಗಗಳಿಗೂ ಈಗ ಸೂಚಿಸಿದ ಭಾಗಕ್ಕೂ (ನೈಋತ್ಯದಿಂದ ವಾಯವ್ಯದವರೆಗಿನದೊಂದು ಪಟ್ಟಿ) ನಕ್ಷತ್ರಗಳ ಹಂಚಿಕೆಯಲ್ಲಿ ಅಗಾಧ ವ್ಯತ್ಯಾಸವಿದೆ. ಇದು ಬರಿಗಣ್ಣಿಗೇ ಸ್ಪಷ್ಟವಾಗಿ ಗೋಚರಿಸುತ್ತದೆ. ತಟ್ಟೆಯಂತಿರುವ ಆಕಾಶಗಂಗೆಯ ಒಂದು ಭಾಗ ಇದು. ಆಕಾಶಗಂಗೆಯ ಕೇಂದ್ರ ಇರುವುದು ಧನುರಾಶಿಯಲ್ಲಿ. ದುರ್ಬೀನು ಅಥವಾ ದೂರದರ್ಶಕ ಇದ್ದರೆ ನಕ್ಷತ್ರಗಳ ಸಂದಣಿಯನ್ನು ಸ್ಪಷ್ಟವಾಗಿ ನೋಡಬಹುದು. ಇದು ನಿಜಕ್ಕೂ ಬೆರಗುಗೊಳಿಸುವ ದೃಶ್ಯ. ಇದನ್ನು ಮೊದಲಬಾರಿ ದೂರದರ್ಶಕದ ಮೂಲಕ ಕಂಡ ಗೆಲಿಲಿಯೋ, ''ನಕ್ಷತ್ರಗಳ ದೊಡ್ಡ ದೊಡ್ಡ ಗುಂಪುಗಳು ಹೇರಳವಾಗಿವೆ. ಸಣ್ಣ ಸಣ್ಣ ಗುಂಪುಗಳಂತೂ ಎಣಿಕೆಗೆ ಸಿಗದಷ್ಟಿವೆ...'' ಎಂದು ವರ್ಣಿಸಿದ್ದಾನೆ. ಬರಿಗಣ್ಣಿಗೆ ಮೋಡದಂತೆ ಕಾಣುವ ಇದರಲ್ಲಿರುವ ಒಂದೊಂದು ಸಣ್ಣ ಚುಕ್ಕೆಯೂ ಒಂದೊಂದು ನಕ್ಷತ್ರ ಎಂಬ ಸತ್ಯ ಆತನನ್ನು ಮೂಕನನ್ನಾಗಿಸಿತು. ವಿಶ್ವದ ಈ ಅಗಾಧ ವಿಸ್ತಾರ, ವೇದಾಂತಿಗಳ ಚರ್ಚೆಗಳನ್ನೂ ನಿರರ್ಥಕಗೊಳಿಸುತ್ತದೆ.



ಮಂಗಳ ಗ್ರಹ ಕಳೆದ ತಿಂಗಳಿಗಿಂತ ಕ್ಷೀಣವಾಗಿದ್ದರೂ ಉಳಿದ ಕೆಲವು ನಕ್ಷತ್ರಗಳಿಗಿಂತ ಪ್ರಕಾಶಮಾನವಾಗಿದೆ. ಉದಾಹರಣೆಗೆ, ವೇಗಾ (ಅಭಿಜಿತ್, ಆಲ್ಫಾ ಲೈರಾ) ಶ್ರವಣ (ಆಲ್ಟೇರ್, ಆಲ್ಫಾ ಅಕ್ವಿಲಾ), ದೆನೆಬ್ (ಹಂಸಾಕ್ಷಿ, ಆಲ್ಫಾ ಸಿಗ್ನಸ್). ಈ ಪ್ರಕಾಶಮಾನ ''ತ್ರಿಕೋಣ''ದ ನಕ್ಷತ್ರಗಳಿಗಿಂತಲೂ ಮಂಗಳ ಪ್ರಕಾಶಮಾನವಾಗಿದೆ. ಎರಡು ತಿಂಗಳ ಹಿಂದೆ ದುರ್ಬೀನು / ದೂರದರ್ಶಕಗಳಿಂದ ಅದನ್ನು ನೋಡಿದವರು ಈಗ ನೋಡಿದರೆ, ಅದರ ಗಾತ್ರ ಮೂರುಪಟ್ಟು ಚಿಕ್ಕದಾಗಿರುವುದು ಕಾಣುತ್ತದೆ. ಅದನ್ನು ಹಿಂದೆ ಹಾಕಿ ಭೂಮಿ ಮುಂದೆ ಓಡುತ್ತಿದೆ. ಆದ್ದರಿಂದ ತಿಂಗಳಿನ ಆರಂಭದಲ್ಲಿ ಅದರ ದೂರ ೧೦೦ ಮಿಲಿಯನ್ ಕಿ.ಮೀ. ಇದ್ದದ್ದು ತಿಂಗಳಿನ ಕೊನೆಯ ಹೊತ್ತಿಗೆ ೧೩೦ ಮಿಲಿಯನ್ ಕಿ.ಮೀ.ಗಳಾಗಿರುತ್ತದೆ. ಇದೇ ಕಾರಣದಿಂದ ಅದರ ಕೋನೀಯ ಗಾತ್ರ ಚಿಕ್ಕದಾಗುತ್ತದೆ; ಪ್ರಕಾಶವೂ ಕಡಿಮೆಯಾದಂತೆ ಕಾಣುತ್ತದೆ. ೨೫ರಂದು ಚಂದ್ರ ಮಂಗಳದ ಸಮೀಪವೇ ಕಾಣುತ್ತದೆ.

ಬೆಳಗಿನ ಝಾವ ಬೇಗ ಏಳುವವರಿಗೆ ಮೂರು ಗ್ರಹಗಳು ನೋಡಲು ಸಿಗುತ್ತವೆ. ಮಧ್ಯರಾತ್ರಿಯ ಹೊತ್ತಿಗೆ ಉದಯಿಸುವ ಶನಿಗ್ರಹ, ಬೆಳಿಗ್ಗೆ ನೆತ್ತಿಯಲ್ಲಿ ವೃಷಭ ರಾಶಿಯ ರೋಹಿಣಿ ನಕ್ಷತ್ರದ ಪಕ್ಕವೇ ಕಾಣುತ್ತದೆ. ಸೆಪ್ಟೆಂಬರ್ ೧೦ರಂದು ಚಂದ್ರ ಶನಿ ಪಕ್ಕಪಕ್ಕದಲ್ಲಿ ಕಾಣುವುದು ಛಾಯಾಗ್ರಾಹಕರಿಗೆ ಸುಸಂದರ್ಭ. ಅಂದು ಅಮೆರಿಕಾದ ಕೆಲವು ಭಾಗಗಳಿಂದ ಶನಿಯನ್ನು ಚಂದ್ರ ಮರೆಮಾಡುವ ''ಗ್ರಹಣ''ವನ್ನು ನೋಡಬಹುದು. ಮಿಥುನರಾಶಿಯಲ್ಲಿರುವ ಗುರುಗ್ರಹಕ್ಕೂ ೧೨ರ ಬೆಳಗಿನಂದು ಇದೇ ಬಗೆಯ ''ಗ್ರಹಣ'' ನಡೆಯಲಿದೆ. ಈ 'ಗ್ರಹಣ'ವೂ ನಮಗೆ ಕಾಣದು. ಆದರೆ ಛಾಯಾಗ್ರಾಹಕರಿಗೆ ಒಳ್ಳೆಯ ಸಂದರ್ಭ. ಬೆಳಿಗ್ಗೆ ಸುಮಾರು ೩ ಗಂಟೆಗೆ ಗುರು ಉದಯಿಸುತ್ತದೆ. ಅತಿ ಪ್ರಕಾಶಮಾನವಾದ ಗ್ರಹ ಶುಕ್ರ ಇನ್ನೂ ತಡವಾಗಿ ಉದಯಿಸುತ್ತದೆ. ಇದರ ಸಹಾಯದಿಂದ ಪಕ್ಕದ ಪ್ರೆಸಿಪಿ ಎಂಬ ನಕ್ಷತ್ರಗುಚ್ಛವನ್ನು ಗುರುತಿಸಬಹುದು. ೨೦ನೆಯ ತಾರೀಖು ಅದರ ಸಮೀಪ ಕಾಣುವ ಪ್ರಕಾಶಮಾನ ನಕ್ಷತ್ರವೇ ಮಘ. ೧೫ರಂದು ಚಂದ್ರ, ಶುಕ್ರ ಮೂರು ಡಿಗ್ರಿ ಅಂತರದಲ್ಲಿ ಕಾಣುತ್ತವೆ.

ಬುಧಗ್ರಹ ತಿಂಗಳ ಕೊನೆಯಲ್ಲಿ ಪಶ್ಚಿಮದ ಅಂಚಿನಲ್ಲಿ ಕಾಣುತ್ತದೆ. ೧೯ರ ಬಿದಿಗೆಯ ಚಂದ್ರನಿಗೆ ಬುಧ ೮ ಡಿಗ್ರಿ ದಕ್ಷಿಣಕ್ಕಿರುತ್ತದೆ.

ಸೆಪ್ಟೆಂಬರ್ ೨೩ರ ಬೆಳಿಗ್ಗೆ ೪ ಗಂಟೆ ೩೪ ನಿಮಿಷಕ್ಕೆ ಸೂರ್ಯ ಶರದ್ ವಿಷುವ ಬಿಂದುವನ್ನು ದಾಟುತ್ತದೆ. ಆ ದಿನ ಹಗಲು ರಾತ್ರಿಗಳ ಅವಧಿ ಸಮ. ಅಂದಿನಿಂದ ಮುಂದೆ ಸೂರ್ಯ ವಿಷುವದ್ ವೃತ್ತದ ದಕ್ಷಿಣಕ್ಕೆ ಸರಿಯುತ್ತದೆ.

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಬೆಂಗಳೂರು - ೫೬೦ ೦೦೧

## ಹಬ್ಬ



ಹಬ್ಬ ಎಂದರೆ-
ಮನೆಮನೆಗೆ ಮಾವಿನ ತೋರಣ;
ಗೃಹಿಣಿಯರಿಗೆ ಪೂಜೆ ಪುನಸ್ಕಾರ,
ದೇವಾಲಯ ದರ್ಶನ;
ಗೃಹಸ್ಥರಿಗೆ ರಜೆ, ರುಚಿ ರುಚಿ ತಿಂಡಿ,
ಊಟ, ನಿದ್ದೆ;
ಮಕ್ಕಳಿಗೆ ಹೊಸ ಬಟ್ಟೆಯ ಖುಷಿ;
ಗುಡಿಯ ಪ್ರದಕ್ಷಿಣೆ;
ಪೂಜಾರಿಗಳಿಗೆ ಕೈ ತುಂಬ ದಕ್ಷಿಣೆ;
ಎಲ್ಲೆಲ್ಲೂ ದೀಪ, ಧೂಪ, ಹೊಗೆ;
ದೇವರಿಗೋ (ಇದ್ದರೆ)
ನಗೆ !

ಸಿ.ಪಿ.ಕೆ.
೨ನೇ ಮುಖ್ಯ ರಸ್ತೆ, ವಿನಾಯಕನಗರ
ಮೈಸೂರು - ೫೭೦ ೦೧೨

# ಕೀಟ ಖಾದ್ಯಗಳು - ಶಕ್ತಿಯ ಸಾಗರ

**ಈ** ಲೇಖನದ ತಲೆ ಬರಹವೇ ಅನೇಕರಿಗೆ ವಾಕರಿಗೆ ತರಬಹುದು. ಆದರೆ ಈ ಮಾತು ವೈಜ್ಞಾನಿಕ ಸತ್ಯ. ನಾನು ೧೯೯೫ರಲ್ಲಿ ಚೀನಾ ದೇಶಕ್ಕೆ ಹೋಗಿದ್ದೆ. ಚೀನಾದ ರಾಜಧಾನಿ ಬೀಜಿಂಗದಲ್ಲಿ ಒಂದು ಜಾಗತಿಕ ಸಮ್ಮೇಳನ ಇತ್ತು. ಸಮ್ಮೇಳನದ ಕಾರ್ಯಕ್ರಮಗಳು ಮುಗಿದ ಮೇಲೆ ಊರಿನ ಪೇಟೆಗಳಲ್ಲಿ ಸುತ್ತಾಡುತ್ತಿದ್ದೆ. ಅಲ್ಲಿಯ ಕೆಲವು ಅಂಗಡಿಗಳು ನನಗೆ ಸೋಜಿಗ ತರುತ್ತಿದ್ದವು. ಇಂಥ ಅಂಗಡಿಗಳಲ್ಲಿ ಗದ್ದಲವೊ ಗದ್ದಲ. ಅಂಗಡಿಗಳಲ್ಲಿ ದೊಡ್ಡ ದೊಡ್ಡ ಪೆಟ್ಟಿಗೆಗಳು, ಕಾಜಿನ ಭರಣಿಗಳು. ಈ ಪೆಟ್ಟಿಗೆಗಳಲ್ಲಿ, ಭರಣಿಗಳಲ್ಲಿ ಹಲವಾರು ಪ್ರಕಾರದ ಕೀಟಗಳು. ಉದಾಹರಣೆಗೆ ಒಂದು ದೊಡ್ಡ ಪೆಟ್ಟಿಗೆಯಲ್ಲಿ ಜೊಂಡಿಗಗಳ ರಾಶಿ. ಜೊಂಡಿಗಗಳು ನಿರ್ಮಲವಾಗಿರುತ್ತಿದ್ದವು. ಅವುಗಳನ್ನು ಚೆನ್ನಾಗಿ ಒಣಗಿಸುತ್ತಿದ್ದರು. ಕೊಳ್ಳುವವರು ಜೊಂಡಿಗಗಳನ್ನು ಕೈಯಿಂದ ಹಿಡಿದು ಪರೀಕ್ಷಿಸಿ ಅವುಗಳನ್ನು ೧/೨ ಕೆ.ಜಿ. ಅಥವಾ ೧/೪ ಕೆ.ಜಿ. ಯಷ್ಟು ಖರೀದಿಸಿ ಪೇಪರಿನ ಪಾಕೀಟುಗಳಲ್ಲಿ ಹಾಕಿಸಿಕೊಂಡು ಹೋಗುತ್ತಿದ್ದರು. ನಾವು ಸೇಂಗಾ, ಸೆಂಡಿಗೆ ಖರೀದಿಸಿ ತಂದಂತೆ. ನನಗದು ಮೋಜಿನ ಸಂಗತಿ. ವಿಚಾರಿಸಿದಾಗ ಅವರು ಹೇಳಿದರು. ಜೊಂಡಿಗ ಬಹಳ ರುಚಿಯಾದದ್ದು, ಎಲ್ಲರೂ ಅದನ್ನು ತಿಂದೆ ತಿನ್ನುತ್ತಾರೆ. ಜೊಂಡಿಗ ಇದ್ದಂತೆ, ಹಲವಾರು ಪ್ರಕಾರದ ಚಿಟ್ಟೆಗಳು, ಪಾತರಗಿತ್ತಿಗಳು, ಇರುವೆಗಳು ಸಿಗುತ್ತವೆ. ಹೀಗೆ ಒಣಗಿಸಿದ ಕೀಟಗಳಿಗೆ ಉಪ್ಪು ಖಾರ ಹಚ್ಚಿ ನಾವು ಅವಲಕ್ಕಿ, ಚುರುಮುರಿ ತಿಂದಂತೆ ಅವರು ತಿನ್ನುತ್ತಾರೆ. ಕೀಟಗಳ ಉಪ್ಪಿನಕಾಯಿಗಳೂ ಇವೆ.

**ಮಾನವ ದೇಹಕ್ಕೆ ಕೀಟಾಹಾರ ಸೂಕ್ತವೇ ?**

ಹೌದು, ಚೀನಿಯರ ಜೀವನವನ್ನು ನೋಡಿದರೆ, ಅವರು ಪಡುವ ಶ್ರಮವನ್ನು ಅಂದಾಜಿಸಿದರೆ ಕೀಟಾಹಾರ ಜಾಸ್ತಿ ಪೌಷ್ಟಿಕ ಎನಿಸುವುದು. ಅದರ ರುಚಿ ಅದನ್ನು ತಿಂದವರಿಗೆ ಗೊತ್ತು. ಭಾರತದಲ್ಲಿ ಇಂಥ ಆಹಾರಕ್ಕೆ ಆಸ್ಪದವಿಲ್ಲ. ಆಹಾರದಲ್ಲಿ ತಪ್ಪಿ ಯಾವುದೇ ಕೀಟ ಬಿದ್ದಿದ್ದರೆ ಆ ಆಹಾರ ಪದಾರ್ಥವನ್ನು ನಾವು ಚೆಲ್ಲಿಬಿಡುತ್ತೇವೆ. ಅದನ್ನು ತಪ್ಪಿ ಎಲೆಗೆ ಬಡಿಸಿದರೆ ದೊಡ್ಡ ರಾದ್ಧಾಂತ ಆಗುವುದು.

ಆದರೆ ಕೆಲವು ಚಿಕ್ಕ ಮಕ್ಕಳು ಇರುವೆ ತಿನ್ನುವುದನ್ನು ಕಂಡಿದ್ದೇವೆ. ಅವರನ್ನು ಹೆದರಿಸಿ ಬಿಡಿಸುತ್ತೇವೆ. ಅದೇನೇ ಇರಲಿ ಅದರಿಂದ ಮಕ್ಕಳಿಗೆ ಏನೂ ತೊಂದರೆ ಆಗುವುದಿಲ್ಲ. ಬೆಲ್ಲ ತಿನ್ನುವ ಮಕ್ಕಳು ಇರುವೆಗಳನ್ನು ಗೊತ್ತಾಗದಂತೆ ತಿಂದು ಮುಗಿಸಿರುತ್ತಾರೆ. ಇವೆಲ್ಲ ನಮಗೆ ಆಕಸ್ಮಿಕ ಹಾಗೂ ವಿರಳ ಸಂಗತಿಗಳು.

ಚೀನಾದಲ್ಲಿ, ಜಪಾನಿನಲ್ಲಿ, ಆಫ್ರಿಕೆಯಲ್ಲಿ ಮತ್ತು ಕೆಲವು ಯುರೋಪ ದೇಶಗಳಲ್ಲಿ ಕೀಟಾಹಾರದ ಪರಿಪಾಠ ಇದೆ. ಕೆಲವು ದೇಶಗಳಲ್ಲಿ ಚಾಕಲೇಟ್ ತಯಾರಿಸುವಾಗ ಅವುಗಳಲ್ಲಿ ಹತ್ತಾರು ಕೀಟಗಳನ್ನು ಸೇರಿಸುತ್ತಾರೆ. ಇಂಥ ಚಾಕಲೇಟ್‌ಗಳು ದುಬಾರಿ ಪದಾರ್ಥಗಳು. ಇನ್ನು ಕೆಲವು ದೇಶಗಳಲ್ಲಿ ಎರೆಹುಳುಗಳಿಗೆ ಒಗ್ಗರಣೆ ಕೊಟ್ಟು ತಿನ್ನುವ ರೂಢಿ ಇದೆ. ನಮ್ಮಲ್ಲಿಯ ಮಾಂಸಾಹಾರಿಗಳಿಗೂ ಕೀಟಾಹಾರ ಆಗುವುದಿಲ್ಲ. ಅವರು ಒಣಗಿಸಿದ ಮರಿ ಮೀನು ತಿನ್ನುವರು, ಸಮುದ್ರದ ಇತರ ಜೀವಿಗಳನ್ನು ಸೇವಿಸುವರು, ಆದರೆ ಕೀಟ ಎಂದರೆ ದೂರ ಹೋಗುವರು.

**ಜಪಾನಿನಲ್ಲಿ ನಡೆದ ಸಂಶೋಧನೆ**

ಜಪಾನ್ ದೇಶದಲ್ಲಿ ಹೊರ್ನೆಟ್ ಎಂಬ ಒಂದು ಕೀಟವಿದೆ. ಇದು ನೆಲದಲ್ಲಿ ತನ್ನ ಗೂಡು ಕಟ್ಟಿರುತ್ತದೆ. ಇದಕ್ಕೆ ಜೇನುಹುಳುವಿಗೆ ಇದ್ದಂಥ ಮುಳ್ಳಿದೆ. ಈ ಮುಳ್ಳನ್ನು ಅದು ದೇಹದಲ್ಲಿ ಚುಚ್ಚುತ್ತದೆ. ಇದರಿಂದ ಅನೇಕ ಸಲ ಮಾನವರು ಮರಣ ಹೊಂದುತ್ತಾರೆ. ಈ ಕೀಟದ ಶಕ್ತಿ ಅಗಾಧವಾದುದು. ಪ್ರತಿ ದಿನ ಇದು ಅಂದಾಜು ೬೦ ಮೈಲು ಹಾರುತ್ತದೆ. ಪ್ರತಿ ತಾಸಿಗೆ ೩೦ ಮೈಲು ವೇಗದಿಂದ ಚಲಿಸಬಲ್ಲದು. ಈ ಕೀಟದ ಜೀವನವನ್ನು ಅಧ್ಯಯನ ಮಾಡಿದಾಗ ಕೆಲವು ಸಂಗತಿಗಳು ಬೆಳಕಿಗೆ ಬಂದವು. ಈ ಕೀಟದ ಜಠರದಲ್ಲಿ ಒಂದು ಸ್ರವಿಕೆ ಇರುತ್ತದೆ. ಅದು ಹುಳಿ ಹಾಗೂ ಕಹಿ ರುಚಿ ಪಡೆದಿರುತ್ತದೆ. ಇದರಲ್ಲಿ ನೂರಾರು ಅಮೈನೋ ಆಸಿಡ್‌ಗಳು ಇರುತ್ತವೆ. ಇದರಲ್ಲಿ ಇರುವ ಶಕ್ತಿ ಬಹಳ. ಮೀನು, ಮಾಂಸಗಳಲ್ಲಿ ಇರುವ ಶಕ್ತಿಗಿಂತ ಮೂರು-ನಾಲ್ಕು ಪಟ್ಟು ಜಾಸ್ತಿ. ಇಷ್ಟು ಪೌಷ್ಟಿಕವಾದ ಆಹಾರವನ್ನು ಪರೀಕ್ಷಿಸಲು ಪ್ರಯೋಗಗಳನ್ನು ನಡೆಸಿದರು. ಮೊದಲು ಈ ಪದಾರ್ಥವನ್ನು ಇಲಿಗಳಿಗೆ ಕುಡಿಸಿ ನೀರಿನಲ್ಲಿ ಈಜಾಡಲು ಬಿಟ್ಟರು. ಪದಾರ್ಥವನ್ನು ಕುಡಿದ ಇಲಿಗಳು ಉಳಿದ ಇಲಿಗಳಿಗಿಂತ ಎರಡೂವರೆಪಟ್ಟು ಅವಧಿಯವರೆಗೆ ಈಜಿದವು. ನಂತರ ಆ ಪದಾರ್ಥವನ್ನು ಯುವಕರಿಗೆ ಕುಡಿಸಿ ಸೈಕಲ್ ಚಲಿಸಲು ಹೇಳಿದರು. ಪದಾರ್ಥ ಕುಡಿದ ಯುವಕರು ಉಳಿದವರಿಗಿಂತ ದೂರದವರೆಗೆ ಹಾಗೂ ವೇಗದಿಂದ ಚಲಿಸಿದರು. ಆ ಪದಾರ್ಥವನ್ನು ಕುಡಿದಾಗ ಶಕ್ತಿ ಇಮ್ಮಡಿಸುತ್ತದೆ. ಹುರುಪು ವೃದ್ಧಿಯಾಗುತ್ತದೆ. ಇದನ್ನು ಜಪಾನೀಯರು ಪ್ರಯೋಗದಲ್ಲಿ ತಂದರು. ಎಲ್ಲಿ ಶಕ್ತಿ ಜಾಸ್ತಿ ಬೇಕಾಗುವುದೋ ಅಂಥ ವ್ಯಕ್ತಿಗಳಿಗೆ ಈ ಪೇಯವನ್ನು ಕುಡಿಸತೊಡಗಿದರು. ಇದರಿಂದ ಆ ವ್ಯಕ್ತಿಗಳಿಗೆ ದಣಿವು ಆಗುವುದಿಲ್ಲ. ನಿರಂತರ ಶಕ್ತಿ ಉಳಿಯುವುದು. ಕಳೆದ ಬಾರಿ ಸಿಡ್ನಿಯಲ್ಲಿ ನಡೆದ ಒಲಂಪಿಕ್ ಕ್ರೀಡೆಗಳಲ್ಲಿ ಭಾಗವಹಿಸಿ ಮ್ಯಾರಥಾನ್ ಓಟದಲ್ಲಿ ಬಂಗಾರ ಪದಕ ಪಡೆದ ನಾವೊಕೊ ತಾಕಾಹಾಶಿ ಎಂಬ ತರುಣಿ ಈ ಪದಾರ್ಥ ಕುಡಿದು ಓಡಿದಳಂತೆ. ಆಕೆ ಓಡುವ ರೀತಿ ಜಗತ್ತನ್ನೇ ಅಚ್ಚರಿಗೊಳಿಸಿತು. ಅಂಥ ಅದ್ಭುತ ಶಕ್ತಿ ಅದರಲ್ಲಿ ಇದೆ.

ಈ ಪದಾರ್ಥವನ್ನು ಜಪಾನಿನ ಒಂದು ಕಂಪನಿ ಕೃತ್ರಿಮವಾಗಿ ತಯಾರಿಸಲು ಪ್ರಾರಂಭ ಮಾಡಿದೆ ಎಂಬ ಸುದ್ದಿ.

ಡಾ|| ಪ. ಜ. ನಾಗಲೋಟಿಮಠ
ವೈದ್ಯಕೀಯ ನಿರ್ದೇಶಕರು, ಬ.ವಿ.ವ ಸಂಘ
ಬಾಗಲಕೋಟ - ೫೮೭೧೦೧

## ಹೀಗೊಂದು ದಿನಚರಿ

ಸೂರ್ಯ ಜಾಡಿಸಿ ಒದ್ದಾಗ
ಹುಂಜಕ್ಕೆ ಹಗಲು, ಅಲುಗಾಡಿಸಿ
ತನ್ನ ಹೆಗಲು, ಕೂಗಿತು
ಕೊಕ್, ಕೊಕ್, ಕೋ....ಕ್
ತಾಡಪಾಲಿನಡಿಯಲಿ
ಕನಸು ಹೊದ್ದು ಮಲಗಿದ್ದ ಕರಿಯ
ವೆಂಕ್ಟ, ಸುಬ್ಬ, ಚೆನ್ನ
ಆಕಳಿಸಿ, ಪರ ಪರ, ತಲೆಯ
ಕೆರೆದು, ತೊಟ್ಟು ಶತದಿನೋತ್ಸವ
ಆಚರಿಸಿದ ಶರ್ಟು, ನಿಕ್ಕರ್ರುಗಳ
ತಡವಿ ದಿನವ ಎದುರಿಸಲು
ಸನ್ನದ್ಧ; ಯಥಾಪ್ರಕಾರ.
ಹತ್ತು - ಹನ್ನೆರಡರ ಪಡ್ಡೆ ಹೈಕಳು
ಬೀದಿ ನಲ್ಲಿಯ ಕಡೆ
ಇಟ್ಟಿಗೆ ಪುಡಿಯಲಿ ಹಲ್ಲುಜ್ಜಿ
ಕರ್ರನೆಯ ಮೊಕ ತೊಳೆದು, ಬೆಳ್ಳ
ಗಾದೆವೆಂಬ ಭ್ರಮೆಯಲ್ಲಿ ಹೊರಟರು
ಶೆಟ್ಟಿ ಅಂಗಡಿಗೆ, ಗೌಡರ
ಮಿಲ್ಲಿಗೆ, ಅಯ್ಯಂಗಾರಿ ಹೋಟಲಿಗೆ.
ದಿನಚರಿ ಆರಂಭ
ಮಟ ಮಟ ಮಧ್ಯಾಹ್ನಕ್ಕೆ
ಮುನ್ನ; ಅಪರಾಹ್ನದ
ನಂತರ ಒಂದಿಷ್ಟು ಕೂಳು
ದುಡಿಯಲು ಕಸುಪಿಗೆ
ರಾತ್ರಿ ಹತ್ತೂವರೆಗೆ; ವ್ಯಾಪಾರ
ವ್ಯವಹಾರ ಆಕಳಿಸಿದಾಗ



ಒಂದಿಷ್ಟು ಚಿಲ್ಲರೆ ಕಾಸು
ಸಾಕು ಅಪ್ಪನ ಕಳ್ಳಭಟ್ಟಿ
ತೆವಲಿಗೆ; ತಂಗಿ, ತಮ್ಮಂದಿರ
ಪೆಪ್ಪರುಮೆಂಟಿಗೆ, ಮತ್ತೆ
ಅದೇ ತಡಿಕೆ ಪೂರಾ
ಏರ್‌ಕಂಡೀಷನ್ ; ತಾಡಪಾಲು
ಮೇಲು ಹೊದಿಕೆಗೆ ; ಹುಂಜ
ಎಚ್ಚರಿಸಲು ಡ್ಯೂಟಿಗೆ.

ಎಲ್. ವಿಶ್ವನಾಥಗೌಡ
ಬಿನ್ ಸಿ. ಆರ್. ಲಕ್ಷ್ಮಣ, ವೇಮಗಲ್ - ೫೬೩ ೧೫೭ ಕೋಲಾರ ತಾ.

# ದೃಶ್ಯ ಪ್ರಪಂಚ



ನಮಗೆ ಪ್ರಪಂಚವನ್ನು ಪರಿಚಯಿಸಿಕೊಡುವ ಇಂದ್ರಿಯಗಳಲ್ಲೆಲ್ಲಾ ಕಣ್ಣೇ ಅತಿ ಮುಖ್ಯ. ಬೆಳಕಿಲ್ಲದೆ ಕಣ್ಣಿನ ವ್ಯವಹಾರವಿಲ್ಲ. ಆದ್ದರಿಂದಲೇ ಬಹು ಹಿಂದಿನಿಂದಲೂ ಬೆಳಕು ನಮ್ಮ ಹಾರೈಕೆಗಳಿಗೂ, ಕತ್ತಲೆ ನಮಗೆ ಬೇಡವಾದ, ನಾವು ದೂರಸರಿದು ಓಡಬಯಸುವ ಸನ್ನಿವೇಶಗಳಿಗೂ ಸಂಕೇತವಾಗಿದೆ. 'ತಮಸೋ ಮಾ ಜ್ಯೋತಿರ್ಗಮಯ', 'ಬಾಳೆಲ್ಲ ಬೆಳಕಾಗಲಿ' ಮುಂತಾದ ಹಾರೈಕೆಗಳು ನೂರಾರು. ಚಂದ್ರ ಬೆಳೆಯುತ್ತಾ ಹೋಗುವ ೧೫ ದಿನಗಳನ್ನು 'ಶುಕ್ಲ' ಎಂದು ಕರೆದರೆ, ಕ್ಷೀಣಿಸುವ ದಿನಗಳನ್ನು 'ಕೃಷ್ಣ', ಕಪ್ಪು ಎಂದು ಕರೆಯುತ್ತೇವೆ. ದಿನಗಳು ದೀರ್ಘವಾಗಿ, ರಾತ್ರಿ ಹ್ರಸ್ವವಾಗುವ ವರ್ಷದ ಆರು ತಿಂಗಳುಗಳನ್ನು 'ಉತ್ತರಾಯಣ' ಎನ್ನುತ್ತೇವೆ. ಈ ತಿಂಗಳುಗಳಲ್ಲಿ ಸಾಯುವುದೂ ಪುಣ್ಯವಂತೆ. ಅದೇ, ರಾತ್ರಿ ದೀರ್ಘವಾಗುವ ತಿಂಗಳುಗಳನ್ನು 'ದಕ್ಷಿಣಾಯನ' ಎನ್ನುತ್ತೇವೆ. ಯಮನ ಲೋಕವಾದ ನರಕವಿರುವುದು ದಕ್ಷಿಣದಲ್ಲೇ. ಅನ್ಯಾಯ ಮಾರ್ಗದಲ್ಲಿ ಸಂಪಾದಿಸಿದ ಹಣ 'ಕಪ್ಪು'. ಹಾಗೆಯೇ, ದುರ್ನಡತೆಯ ವ್ಯಕ್ತಿತ್ವವೂ ಕಪ್ಪು. ಬೆಳಕು-ಕತ್ತಲೆ, ಬಿಳುಪು-ಕಪ್ಪು, ಒಳಿತು-ಕೆಡಕು, ಇಷ್ಟ-ಅನಿಷ್ಟ, ಸಾತ್ವಿಕ-ತಾಮಸ, ಜ್ಞಾನ-ಅಜ್ಞಾನ, ಎಚ್ಚರ- ಮರೆವು, ವಿವೇಕ-ಅವಿವೇಕ, ಮಾನವ-ದಾನವ ಇವೆಲ್ಲಾ ವಿರುದ್ಧಾರ್ಥಕ ಪರ್ಯಾಯ ಪದಗಳೇ. ನಮಗೆ ಸಂತಸವೆನಿಸುವ ದಿನಗಳಲ್ಲಿ, ಸಂದರ್ಭಗಳಲ್ಲಿ ದೀಪ ಹಚ್ಚುತ್ತೇವೆ. ಆಗ ತಾನೆ ಮದುವೆಯಾದ ವಧು-ವರರಿಗೆ ಆರತಿ ಬೆಳಗುತ್ತೇವೆ. ಬೆಳಕು ನಮ್ಮ ಬದುಕಿನ ಎಲ್ಲ ಒಳಿತಿನ ಸಂಕೇತವಾಗಿರುವುದು ನಮ್ಮ ಭಾಷೆಯಲ್ಲಿ, ಸಾಂಸ್ಕೃತಿಕ ಪದ್ಧತಿಗಳಲ್ಲಿ ಹಾಸುಹೊಕ್ಕಾಗಿದೆ.

ಕಣ್ಣಿನ ಸಾಮಾನ್ಯ ಕಾರ್ಯತಂತ್ರ ಎಲ್ಲರಿಗೂ ಪರಿಚಯವಾದುದೇ. ಹೊರ ಪ್ರಪಂಚದ ವಸ್ತುಗಳು ಚದುರಿಸಿದ ಬೆಳಕನ್ನು ನಮ್ಮ ಕಣ್ಣಿನಲ್ಲಿರುವ ಮಸೂರ ಅಕ್ಷಿಪಟಲದ ಮೇಲೆ ತಲೆಕೆಳಕಾಗಿ ಕೇಂದ್ರೀಕರಿಸುತ್ತದೆ. ಅಕ್ಷಿಪಟಲದಿಂದ ಹೊರಡುವ ಲಕ್ಷಾಂತರ ನರಗಳ ಮುಖಾಂತರ ಅಕ್ಷಿಪಟಲದ ಚಿತ್ರ ವಿದ್ಯುತ್ ಸಂಕೇತದ ರೂಪದಲ್ಲಿ ಮಿದುಳಿಗೆ ತಲಪುತ್ತದೆ. ಮಿದುಳು, ಈ ಸಂಕೇತವನ್ನು ಬಳಸಿ, ಪ್ರಪಂಚದ ಚಿತ್ರವನ್ನು ಪುನಃ ಸೃಷ್ಟಿಸಿ ನಮ್ಮ ಅರಿವಿಗೆ ತರುತ್ತದೆ. ಹೀಗೆ ನಾವು ನೋಡುವುದೆಲ್ಲಾ ನಮ್ಮ ಮಿದುಳು ಪುನರ್ನಿರ್ಮಿಸಿದ ಚಿತ್ರಗಳನ್ನೇ ಹೊರತು ನಿಜವಾಗಿ ನಮ್ಮ ಹೊರಗಿರುವ ಪ್ರಪಂಚವನ್ನೇ ಅಲ್ಲ. ನಮ್ಮ ಮಿದುಳು ಸೃಷ್ಟಿಸಿ ತೋರಿಸುವ ಚಿತ್ರದಂತೆಯೇ ಹೊರ ಪ್ರಪಂಚವೂ ಇರಬಹುದು ಎಂಬ ಭರವಸೆಯ ಮೇಲೆ ನಮ್ಮ ಎಲ್ಲಾ ಚಟುವಟಿಕೆಗಳೂ ನಡೆಯುತ್ತವೆ. ನಮ್ಮ ವ್ಯವಹಾರವೆಲ್ಲಾ ಕಣ್ಣಿನ ಸಹಾಯದಿಂದ ಮಿದುಳು ನಮಗೆ ತೋರಿಸುವ ವಿಶ್ವದ ಜೊತೆಗೇ. ವಿಜ್ಞಾನಿಗಳು ಸಂಶೋಧನೆ ನಡೆಸುವುದೂ ಈ ವಿಶ್ವದ ಬಗ್ಗೆಯೇ.

ನಾವು ಭ್ರೂಣಾವಸ್ಥೆಯಲ್ಲಿದ್ದಾಗಲೇ, ಕಡುಗತ್ತಲೆಯಲ್ಲಿ ಪ್ರಾರಂಭವಾಗುವ ಕಣ್ಣಿನ ಜನನವೇ ಒಂದು ಅದ್ಭುತ. ಬೆಳಕನ್ನೇ ಕಂಡಿರದ ಜೀವಕೋಶಗಳ ಒಂದು ಮುದ್ದೆ ಮುಂದೊಂದು ದಿನ ಕಣ್ಣಾಗಿ ವಿಶ್ವ ದರ್ಶನ ಮಾಡಿಸುವ ಮಹತ್ತರ ಕೆಲಸಕ್ಕೆ ಅಣಿಯಾಗುತ್ತದೆ. ಕರುಳುಬಳ್ಳಿಯ ಮೂಲಕ ತಾಯ ದೇಹದಿಂದ ಹರಿದುಬರುವ ಸರಳ ಪೋಷಕಾಂಶಗಳನ್ನೇ ಬಳಸಿ, ಪೂರ್ಣ ಪಾರದರ್ಶಕವಾದ ಕಣ್ಣು ಗುಡ್ಡೆಗಳನ್ನು ತಯಾರಿಸಲು ಪ್ರಾರಂಭಿಸುತ್ತದೆ. 'ಕ್ರಿಸ್ಟಲಿನ್' ಎಂಬ ವಿಶಿಷ್ಟ ರಚನೆಯ ಪ್ರೋಟೀನುಗಳು ಈ ಪಾರದರ್ಶಕತೆಯನ್ನು ಒದಗಿಸುತ್ತವೆ. ಬೇರೆ ಬೇರೆ ದೂರಗಳಲ್ಲಿರುವ ವಸ್ತುಗಳ ಚಿತ್ರಗಳನ್ನು ಮಬ್ಬಿಲ್ಲದಂತೆ ಅಕ್ಷಿಪಟಲದ ಮೇಲೆ ಕೇಂದ್ರೀಕರಿಸಲು ಅಗತ್ಯವಾದ ರಚನೆಯ ಬದಲಾವಣೆಗಳನ್ನು ಮಾಡಿಕೊಳ್ಳಲು ಎರಡು ಗುಡ್ಡೆಗಳೂ ಕಲಿಯುತ್ತವೆ. ಕಣ್ಣುಗುಡ್ಡೆಗಳ ತೇವ ಆರದಂತೆ



ಪದೇ ಪದೇ ಅವುಗಳನ್ನು ಒರೆಸಿ, ಒದ್ದೆ ಮಾಡುವ ರೆಪ್ಪೆಗಳು ಬೆಳೆಯತೊಡಗುತ್ತವೆ. ಇವುಗಳಲ್ಲಿರುವ ಜೀವಕೋಶಗಳು ಸೂಕ್ಷ್ಮ ಜೀವಿಗಳನ್ನು ನಾಶಮಾಡಲು ಬೇಕಾಗುವ ಲೈಸೋಜೈಂ (LYSOZYME) ಎಂಬ ಕಿಣ್ವವನ್ನು ಸಂಶ್ಲೇಷಿಸಲು ಕಲಿಯುತ್ತವೆ. ಅಕ್ಷಿಪಟಲದಲ್ಲಿ ಬೆಳಕಿಗೆ ಸ್ಪಂದಿಸುವ ಜೀವಕೋಶಗಳು ಬೆಳೆಯತೊಡಗುತ್ತವೆ. ನಾವು ಬಳಸುವ ಫೋಟೋ ಫಿಲಮ್ಮುಗಳು ಒಮ್ಮೆ ಮಾತ್ರ ಬಳಸಲು ಬರುತ್ತವೆ. ಅದೇ ನಮ್ಮ ಅಕ್ಷಿಪಟಲಗಳು ಒಮ್ಮೆ ಮೂಡಿದ ಚಿತ್ರವನ್ನು ಅಳಿಸಿ, ಹೊಸ ಚಿತ್ರ ಮುದ್ರಿಸಿಕೊಳ್ಳಲು ನಾವು ಬದುಕಿರುವವರೆಗೂ ಸತತ ತಯಾರಾಗಿರುತ್ತವೆ. ಇವು ಪ್ರಪಂಚವನ್ನು ನಿಮಿಷಕ್ಕೆ ಸುಮಾರು ಸಹಸ್ರ ಬಾರಿ ಸೆರೆಹಿಡಿಯಬಲ್ಲವು. ಅಕ್ಷಿಪಟಲದಲ್ಲಿ ಸುಮಾರು ೧೪ ಕೋಟಿ ಬೆಳಕಿಗೆ ಸ್ಪಂದಿಸುವ ತಾಣಗಳಿವೆ. ಈ ಎಲ್ಲ ತಾಣಗಳಿಂದ

ಎಂ. ಆರ್. ಎಸ್. ಮೂರ್ತಿ

ನರಬಳ್ಳಿಗಳು ಮಿದುಳಿಗೆ ಸಂದೇಶಗಳನ್ನು ಒಯ್ಯುತ್ತವೆ. ಸಮುದ್ರಕ್ಕೆ ಸೇರುವ ಮೊದಲು ಅನೇಕ ನದಿಗಳು ಪರಸ್ಪರ ಸೇರುವಂತೆ ಈ ನರಗಳೂ ಪರಸ್ಪರ ಕೂಡಿ ಮಿದುಳು ತಲುಪುವ ವೇಳೆಗೆ ಸಂಖ್ಯೆಯಲ್ಲಿ ಬರಿಯ ದಶಲಕ್ಷ ಬಳ್ಳಿಗಳಾಗುತ್ತವೆ. ಇವು ಮಿದುಳನ್ನು ಬೇರೆ ಬೇರೆ ಬಿಂದುಗಳಲ್ಲಿ ತಲುಪಿದರೂ, ಮಿದುಳಿನ ಈ ಬಿಂದುಗಳ ನಡುವೆ ಲಕ್ಷಾಂತರ ನರಬಳ್ಳಿಗಳ ಸಂಪರ್ಕವಿರುತ್ತದೆ. ಈ ಎಲ್ಲ ನರಕೋಶಗಳ ಚಟುವಟಿಕೆಯಿಂದ ಅಕ್ಷಿಪಟಲದ ಚಿತ್ರ ನಮ್ಮ ಅರಿವಿಗೆ ಬರುತ್ತದೆ. ಅಕ್ಷಿಪಟಲದಲ್ಲಿ ಬೆಳಕಿಗೆ ಸ್ಪಂದಿಸುವ ಎರಡು ಪ್ರಮುಖ ರಚನೆಗಳಿವೆ. ಇವುಗಳಲ್ಲಿ ಒತ್ತಾಗಿ ಹೆಣೆದುಕೊಂಡಿರುವ ೧೨ ಕೋಟಿ ದಂಡಾಕಾರದ (RODS) ರಚನೆಗಳು ನಮಗೆ ಕಪ್ಪು ಬಿಳುಪಿನ ಪ್ರಪಂಚದ ಅರಿವುಂಟುಮಾಡುತ್ತವೆ. ವಿರಳವಾಗಿರುವ ೬ ಕೋಟಿ ಶಂಖಾಕೃತಿಯ ರಚನೆಗಳು ನಮ್ಮ ವಿಶ್ವಕ್ಕೆ ಬಣ್ಣ ತುಂಬುತ್ತವೆ. ಇವುಗಳ ರಚನೆಯ ದೋಷದಿಂದಾಗಿ ಶೇಕಡ ೨-೪ ಜನರಲ್ಲಿ ಕೆಲಮಟ್ಟಿಗೆ ಬಣ್ಣದ ಕುರುಡು (COLOUR BLINDNESS) ಇರುತ್ತದೆ. ಇಂತಹ ಕುರುಡು ಗಂಡಸರಲ್ಲಿ ಹೆಂಗಸರಿಗಿಂತ ಹತ್ತು ಪಟ್ಟು ಜಾಸ್ತಿ. ನಮ್ಮ ಅಕ್ಷಿಪಟಲದ ಮೇಲೆ ಬಿದ್ದ ಬಿಂಬ ಸುಮಾರು ಸೆಕೆಂಡಿನ ಹದಿನಾರನೇ ಒಂದು ಭಾಗದಷ್ಟು ಕಾಲ ಮಾಸದೇ ಉಳಿಯುತ್ತದೆ. ಆದ್ದರಿಂದ ಇದಕ್ಕಿಂತಲೂ ಕ್ಷಿಪ್ರವಾಗಿ ಬದಲಾಗುತ್ತಿರುವ ದೃಶ್ಯಗಳು ನಮಗೆ ಮಸುಕಾಗಿ ಕಾಣಿಸುತ್ತವೆ. ಆದ್ದರಿಂದಲೇ ಚುರುಕಾಗಿ ತಿರುಗುತ್ತಿರುವ ಫ್ಯಾನ್ ನಮ್ಮ ಕಣ್ಣಿಗೆ ವರ್ತುಲಾಕಾರದ ಅರೆ ಪಾರದರ್ಶಕ ಚಕ್ರದಂತೆ ತೋರುತ್ತದೆ. ಜಗತ್ತಿನ ಕ್ಷುದ್ರ ಕೀಟಗಳ ಕಣ್ಣುಗಳೂ ಇಷ್ಟೇ ಸಂಕೀರ್ಣತೆಯಿಂದ ಕೂಡಿದ್ದು ಅಚ್ಚರಿ ಮೂಡಿಸುವುದರಲ್ಲಿ ಕಡಿಮೆ ಎನಿಸುವುದಿಲ್ಲ.

ಈ ಬೆಳಕಿನ ಸ್ವರೂಪವೇನು ? ಇದರ ಜನನದ ಗುಟ್ಟೇನು ? ಒಮ್ಮೆ ಹೊರಬಂದ ಬೆಳಕು ಎಲ್ಲಿ ಮಾಯವಾಗುತ್ತದೆ ? ಒಮ್ಮೆಲೇ ಎಲ್ಲೆಡೆ ಪಸರಿಸುವಂತೆ ಕಾಣುವ ಬೆಳಕಿನ ಚಲನೆಯ ವೇಗಕ್ಕೆ ಮಿತಿಯುಂಟೆ ? ಪ್ರಪಂಚದಲ್ಲಿ ಒಟ್ಟಾರೆ ಎಷ್ಟು ಬೆಳಕಿದೆ ? ಇಂತಹ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ಪ್ರಯತ್ನ ವಿಜ್ಞಾನದ ಪಿತಾಮಹ ಎನಿಸಿರುವ ನ್ಯೂಟನ್ ಹಾಗೂ ಅವನ ಸಮಕಾಲೀನನಾಗಿದ್ದ ಡಚ್ ವಿಜ್ಞಾನಿ ಹ್ಯೂಗನ್ ಇಬ್ಬರಿಂದ ಪ್ರಾರಂಭವಾಯಿತು ಎನ್ನಬಹುದು. ಬೆಳಕು ಶಕ್ತಿಯ ಒಂದು ಸ್ವರೂಪ. ಶಕ್ತಿ ಅನೇಕ ರೂಪಗಳಲ್ಲಿ ಪ್ರಕೃತಿಯಲ್ಲಿ ಕಂಡುಬರುತ್ತದೆ. ಶಕ್ತಿಯನ್ನು ಒಂದು ರೂಪದಿಂದ ಇನ್ನೊಂದು ರೂಪಕ್ಕೆ ತಿರುಗಿಸಬಹುದು. ಆದರೆ ಶಕ್ತಿಯನ್ನು ಹೊಸದಾಗಿ ಸೃಷ್ಟಿಸುವುದಾಗಲಿ ನಾಶಮಾಡುವುದಾಗಲಿ ಸಾಧ್ಯವಿಲ್ಲ. ನಮ್ಮ ಮನೆಗಳಲ್ಲಿ ವಿದ್ಯುತ್ ಶಕ್ತಿಯಿಂದ ಬೆಳಕನ್ನು ಪಡೆಯುತ್ತೇವೆ. ಮಿಣುಕು ಹುಳುಗಳು ರಾಸಾಯನಿಕ ಶಕ್ತಿಯನ್ನೇ ಬೆಳಕನ್ನಾಗಿ ಹೊರಚೆಲ್ಲಿ ಹೊಳೆಯುತ್ತವೆ.

ಬೆಳಕಿನ ಸ್ವರೂಪವನ್ನು ತಿಳಿಯುವ ಮೊದಲು ವಿದ್ಯುತ್ ಮತ್ತು ಅಯಸ್ಕಾಂತ ಕ್ಷೇತ್ರಗಳ ಬಗ್ಗೆ ತಿಳಿಯಬೇಕಾಗುತ್ತದೆ. ಏಕೆಂದರೆ, ಬೆಳಕು ಈ ಎರಡೂ ಕ್ಷೇತ್ರಗಳಿಗೆ ಸಂಬಂಧಿಸಿದೆ. ವಿದ್ಯುತ್ ಮತ್ತು ಅಯಸ್ಕಾಂತ ಕ್ಷೇತ್ರಗಳು ಒಂದೇ ನಾಣ್ಯದ ಎರಡು ಮುಖಗಳು. ವಿಶ್ವದಲ್ಲಿ ಎರಡು ವಿರುದ್ಧ ಗುಣಗಳ ವಿದ್ಯುತ್ ಅಂಶಗಳು ಕಂಡುಬರುತ್ತವೆ. ಪರಮಾಣುಗಳಲ್ಲಿರುವ ಇಲೆಕ್ಟ್ರಾನುಗಳಲ್ಲಿ ಋಣ ವಿದ್ಯುತ್ ಅಂಶವಿದ್ದರೆ, ಪರಮಾಣು ಕೇಂದ್ರಗಳಲ್ಲಿರುವ ಪ್ರೋಟಾನುಗಳಲ್ಲಿ ಧನ ವಿದ್ಯುತ್ ಅಂಶವಿದೆ. ಇಲೆಕ್ಟ್ರಾನ್ ಮತ್ತು ಪ್ರೋಟಾನ್ ಕಣಗಳ ವಿದ್ಯುತ್ ಅಂಶದ ಪ್ರಮಾಣ ಒಂದೇ ಸಮ. ಪರಮಾಣುಗಳಲ್ಲಿ ಪ್ರೋಟಾನುಗಳಷ್ಟೇ ಇಲೆಕ್ಟ್ರಾನುಗಳೂ ಇರುವುದರಿಂದ ಪರಮಾಣುಗಳು ಒಟ್ಟಾರೆ ವಿದ್ಯುತ್ ಅಂಶವಿಲ್ಲದೆ ತಟಸ್ಥವಾಗಿರುತ್ತವೆ. ವಿರುದ್ಧ ಚಿಹ್ನೆಯಿರುವ ವಿದ್ಯುತ್ ಕಣಗಳು ಪರಸ್ಪರ ಆಕರ್ಷಿಸುತ್ತವೆ. ಈ ಆಕರ್ಷಣೆಯಿಂದಲೇ ಕಡಿಮೆ ದ್ರವ್ಯರಾಶಿಯ ಇಲೆಕ್ಟ್ರಾನುಗಳು ಕೇಂದ್ರದಲ್ಲಿರುವ ಪ್ರೋಟಾನುಗಳ ಸುತ್ತ ಭೂಮಿ ಸೂರ್ಯನ ಸುತ್ತ ಸುತ್ತುವಂತೆ ಚಲಿಸುತ್ತವೆ. ಸಮ ಚಿಹ್ನೆಯ ವಿದ್ಯುತ್ ಕಣಗಳು, ಎಂದರೆ, ಎರಡು ಇಲೆಕ್ಟ್ರಾನುಗಳು ಇಲ್ಲವೇ ಎರಡು ಪ್ರೋಟಾನುಗಳ ನಡುವೆ ವಿಕರ್ಷಣೆಯಿರುತ್ತದೆ. ವಿದ್ಯುತ್ ಅಂಶವುಳ್ಳ ಕಣಗಳ ಚಲನೆಯನ್ನೇ ನಾವು ವಿದ್ಯುತ್ ಪ್ರವಾಹ ಎಂದು ಕರೆಯುತ್ತೇವೆ. ನಮ್ಮ ಮನೆಗಳ ತಾಮ್ರದ ತಂತಿಗಳಲ್ಲಿ ಇಲೆಕ್ಟ್ರಾನ್ ಕಣಗಳು ಪ್ರವಹಿಸುತ್ತಿರುತ್ತವೆ. ಹೀಗೆ ಚಲಿಸುತ್ತಿರುವ ವಿದ್ಯುತ್ ತಂತಿಯ ಸುತ್ತ ಅಯಸ್ಕಾಂತ ಕ್ಷೇತ್ರ ಆವರಿಸಿರುತ್ತದೆ. ಒಂದು ವರ್ತುಲಾಕಾರದ ತಂತಿಯ ಬಳಿ ಅಯಸ್ಕಾಂತ ಕ್ಷೇತ್ರ ವ್ಯತ್ಯಾಸಗೊಳ್ಳುತ್ತಿದ್ದರೆ, ಆ ತಂತಿಯಲ್ಲಿ ವಿದ್ಯುತ್ ಹರಿಯಲು ಪ್ರಾರಂಭಿಸುತ್ತದೆ. ಈ ರೀತಿ, ಬದಲಾಗುತ್ತಿರುವ ಅಯಸ್ಕಾಂತ ಕ್ಷೇತ್ರವು ವಿದ್ಯುತ್ ಕಾಂತ ಕ್ಷೇತ್ರಕ್ಕೂ ಬದಲಾಗುತ್ತಿರುವ ವಿದ್ಯುತ್ ಕ್ಷೇತ್ರವು ಅಯಸ್ಕಾಂತ ಕ್ಷೇತ್ರಕ್ಕೂ ದಾರಿಮಾಡಿಕೊಡುತ್ತವೆ. ವಿದ್ಯುತ್ ಮತ್ತು ಅಯಸ್ಕಾಂತಗಳ ನಡುವೆ ಇರುವ ನಿಕಟ ಸಂಬಂಧ ಅತ್ಯಂತ ಪ್ರತಿಭಾವಂತ ಪ್ರಾಯೋಗಿಕ ಭೌತಶಾಸ್ತ್ರಜ್ಞ ಎನಿಸಿರುವ ಮೈಕೇಲ್ ಫಾರಡೇಯವರ ಪ್ರಯೋಗಗಳಿಂದ ತಿಳಿದುಬಂದಿತು. ಇವರ ಪ್ರಯೋಗಗಳನ್ನು ಆಧರಿಸಿ ಕ್ಲಾರ್ಕ್ ಮ್ಯಾಕ್ಸ್‌ವೆಲ್ ಸಿದ್ಧಪಡಿಸಿದ ಸೂತ್ರಗಳ ಆಧಾರದ ಮೇಲೆ, ಬೆಳಕು ವಿದ್ಯುತ್ - ಅಯಸ್ಕಾಂತೀಯ ತರಂಗಗಳಿರಬೇಕೆಂದು ಊಹಿಸಲಾಯಿತು. ಈ ಕಾಂತಕ್ಷೇತ್ರಗಳ ಗುಣಗಳನ್ನಾಧರಿಸಿ ಬೆಳಕಿನ ವೇಗ ಸೆಕೆಂಡಿಗೆ ೩,೦೦,೦೦೦ ಕಿಲೋಮೀಟರುಗಳಿರಬೇಕೆಂದು ಸೈದ್ಧಾಂತಿಕವಾಗಿ ತೋರಿಸಲು ಮ್ಯಾಕ್ಸ್‌ವೆಲ್‌ರವರಿಗೆ ಸಾಧ್ಯವಾಯಿತು. ಜರ್ಮನಿಯ ಹೆರ್ಟ್ಸ್ ಈ ತರಂಗಗಳನ್ನು ಪ್ರಾಯೋಗಿಕವಾಗಿ ಸೃಷ್ಟಿಸಿ ಮ್ಯಾಕ್ಸ್‌ವೆಲ್‌ರವರ ಸೂತ್ರಗಳನ್ನು ದೃಢಪಡಿಸಿದರು. ಇಂದು ಈ ವೇಗವನ್ನು ಪ್ರಾಯೋಗಿಕವಾಗಿ ಬಹು ನಿಖರವಾಗಿ ಅಳತೆ ಮಾಡಿದ್ದಾರೆ. ಬೆಳಕು ವಿದ್ಯುತ್-ಅಯಸ್ಕಾಂತ ಕ್ಷೇತ್ರಗಳ ಪರಿಳಿತದ ಅಲೆ. ಬೆಳಕಿನ ಕಿರಣಗಳಲ್ಲಿ ಬದಲಾಗುತ್ತಿರುವ, ಪರಸ್ಪರ ಹುಟ್ಟಿ ಹಾಕುತ್ತಿರುವ, ವಿದ್ಯುತ್ ಮತ್ತು ಅಯಸ್ಕಾಂತ ಕ್ಷೇತ್ರಗಳಿರುತ್ತವೆ. ಈ ಕ್ಷೇತ್ರಗಳು ಬೆಳಕಿನ



ಚಲನೆಯ ದಿಕ್ಕಿಗೆ ಲಂಬವಾಗಿರುವ ಎರಡು ದಿಕ್ಕುಗಳಲ್ಲಿ ಉಯ್ಯಾಲೆ ತೂಗಿದಂತೆ ಬದಲಾಗುತ್ತಿರುತ್ತವೆ. ಆದ್ದರಿಂದಲೇ ಬೆಳಕನ್ನು ವಿದ್ಯುದಯಸ್ಕಾಂತೀಯ ಅಲೆಗಳು ಎಂದು ಕರೆಯಬಹುದು.

ವಿದ್ಯುದಯಸ್ಕಾಂತೀಯ ಅಲೆಗಳು ವಸ್ತುಗಳ ಮೇಲೆ ಚೆಲ್ಲಿದಾಗ ಉಂಟಾಗುವ ಕ್ರಿಯೆಗಳು ಅಲೆಗಳ ಕಂಪನ ಸಂಖ್ಯೆಯನ್ನು ಅವಲಂಬಿಸಿ ಬದಲಾಗುತ್ತವೆ. ಕಂಪನ ಸಂಖ್ಯೆ, ವಿದ್ಯುತ್ ಹಾಗೂ ಅಯಸ್ಕಾಂತ ಕ್ಷೇತ್ರಗಳು ಸೆಕೆಂಡಿಗೆ ಎಷ್ಟು ಬಾರಿ ಕಂಪಿಸುತ್ತವೆ ಎನ್ನುವುದನ್ನು ಸೂಚಿಸುತ್ತದೆ. ಈ ಬಗೆಯ ವಿದ್ಯುತ್, ಅಯಸ್ಕಾಂತ ಕ್ಷೇತ್ರಗಳ ಕಂಪನ ಸೆಕೆಂಡಿಗೆ ಸುಮಾರು ೩೦೦,೦೦೦ ಕಿಲೋಮೀಟರ್ ದೂರ ಸಾಗುತ್ತದೆ. ಈ ಬೆಳಕಿನ ವೇಗವನ್ನು ಕಂಪನ ಸಂಖ್ಯೆಯಿಂದ ಭಾಗಿಸಿದಾಗ ತರಂಗದೂರ ದೊರೆಯುತ್ತದೆ. ತರಂಗದೂರ, ಕಾಂತಕ್ಷೇತ್ರದ ಎರಡು ಮೇರು ಬಿಂದುಗಳ ನಡುವಿನ ದೂರವನ್ನು ಸೂಚಿಸುತ್ತದೆ. ನಮ್ಮ ಕಣ್ಣಿಗೆ ಕಾಣಿಸುವ ಬೆಳಕಿನ ತರಂಗದೂರ ೪೦೦ ನಾನೋ ಮೀಟರಿನಿಂದ ೮೦೦ ನಾನೋ ಮೀಟರಿನವರೆಗೆ ಇರುತ್ತದೆ. ಒಂದು ನಾನೋ ಮೀಟರ್ ಒಂದು ಮೀಟರಿನ ೧೦೦ ಕೋಟಿ ಭಾಗದ ಒಂದು ಭಾಗ. ಆದ್ದರಿಂದ ಬೆಳಕಿನ ಕಂಪನ ಸಂಖ್ಯೆ ಸುಮಾರು ೧೦೦ ಕೋಟಿ ಕೋಟಿ ಹೆರ್ಟ್ಸ್. ೮೦೦ ನಾನೋ ಮೀಟರಿನ ಬೆಳಕು ನಮ್ಮ ಕಣ್ಣಿಗೆ ಕೆಂಪು ಬಣ್ಣದ್ದಾಗಿಯೂ, ೪೦೦ ನಾನೋ ಮೀಟರಿನ ಬೆಳಕು ನೇರಳೆ ಬಣ್ಣದ್ದಾಗಿಯೂ ಕಾಣುತ್ತದೆ. ಈ ನಡುವಿನ ತರಂಗದೂರಗಳು ಕಾಮನಬಿಲ್ಲಿನಲ್ಲಿರುವ ಎಲ್ಲ ಬಣ್ಣಗಳನ್ನೂ ಪ್ರತಿನಿಧಿಸುತ್ತವೆ. ಮೂಲವಸ್ತುಗಳನ್ನು ಹೆಚ್ಚಿನ ಉಷ್ಣತೆಗೆ ಏರಿಸಿದಾಗ, ಅವು ವಿಶಿಷ್ಟವಾದ ಬೆಳಕನ್ನು ಹೊರಚೆಲ್ಲುತ್ತವೆ. ಹೊರಚೆಲ್ಲುವ ಬೆಳಕಿನಲ್ಲಿರುವ ಕಂಪನ ಸಂಖ್ಯೆಗಳನ್ನು ಮೂಲವಸ್ತುವಿನಲ್ಲಿರುವ ಪರಮಾಣುಗಳ ಹೆಬ್ಬೆರಳ ಗುರುತು ಎನ್ನಬಹುದು. ಯಾವ ಯಾವ ತರಂಗದೂರಗಳ ಬೆಳಕನ್ನು ಚೆಲ್ಲುತ್ತಿದೆ ಎಂಬ ಆಧಾರದ ಮೇಲೆ ಮೂಲವಸ್ತುವನ್ನು ಪತ್ತೆ ಮಾಡಬಹುದು. ಸೂರ್ಯನಿಂದ ಹೊರಟ ಕಿರಣಗಳಲ್ಲಿ ಹೀಲಿಯಂ ಉರಿಸಿದಾಗ ಬರುವ ತರಂಗಾಂತರದ ಕಿರಣಗಳಿರುವುದರಿಂದ ಸೂರ್ಯನಲ್ಲಿ ಹೀಲಿಯಂ ಇದೆ ಎಂದು ನಿರ್ಧರಿಸಬಹುದು. ಹೀಲಿಯಂ ಮೂಲವಸ್ತುವನ್ನು ಮೊದಲಿಗೆ ಗುರುತಿಸಿದ್ದೇ ಸೂರ್ಯನಲ್ಲಿ. ನಂತರವೇ ಭೂಮಿಯಲ್ಲೂ ಈ ಅನಿಲವಿರುವುದು ಪತ್ತೆಯಾಯಿತು. ಹೀಲಿಯಂ ಅನಿಲಕ್ಕಿರುವ ಹೆಸರೇ ಗ್ರೀಕ್ ಭಾಷೆಯಲ್ಲಿ ಸೂರ್ಯನಿಗಿರುವ 'ಹೀಲಿಯಸ್' ಪದದಿಂದ ಬಂದದ್ದು. ಇದೇ ರೀತಿ, ನಮ್ಮ ಊಹೆಗೂ ನಿಲುಕದ ದೂರಗಳಲ್ಲಿರುವ ಎಲ್ಲ ನಕ್ಷತ್ರಗಳಲ್ಲೂ ಧಾರಾಳವಾಗಿರುವ ಮೂಲವಸ್ತುಗಳೆಂದರೆ, ಹೈಡ್ರೋಜನ್ ಮತ್ತು ಹೀಲಿಯಂಗಳೇ ಎಂಬುದನ್ನು ಅವು ಹೊರಹೊಮ್ಮುವ ಬೆಳಕಿನಿಂದಲೇ ಕಂಡುಕೊಂಡಿದ್ದೇವೆ. ಪ್ರತಿ ಮೂಲವಸ್ತುವೂ ತನ್ನದೇ ಆದ ತರಂಗದೂರದ ಬೆಳಕನ್ನು ಏಕೆ ಚೆಲ್ಲುತ್ತದೆ ಎಂಬುದಕ್ಕೆ ಕ್ವಾಂಟಂ ಸಿದ್ಧಾಂತ ಸಮರ್ಥ ವಿವರಣೆ ನೀಡುತ್ತದೆ. ಈ ಸಿದ್ಧಾಂತ ಮಂಡಿಸಿದವರಲ್ಲಿ ಮೊದಲಿಗರಾದ ನೀಲ್ಸ್ ಬೋರ್, ಹೈಡ್ರೋಜಿನ್ ಅನಿಲ ಹೆಚ್ಚಿನ ಉಷ್ಣತೆಯಲ್ಲಿ ಹೊರಸೂಸುವ ಕಿರಣಗಳ ತರಂಗ ದೂರಗಳನ್ನು ಯಾವ ಪ್ರಯೋಗವನ್ನೂ ನಡೆಸದೇ, ಪ್ರೋಟಾನ್, ಇಲೆಕ್ಟ್ರಾನ್‌ಗಳ ಗುಣಗಳಿಂದಲೇ ನಿರ್ಧರಿಸಿದರು. ಬಹಳ ದೂರದಲ್ಲಿರುವ ನಕ್ಷತ್ರಗಳಿಂದ ಭೂಮಿಗೆ ತಲುಪುತ್ತಿರುವ ಕಿರಣಗಳ ಕಂಪನ ಸಂಖ್ಯೆ, ಅದೇ ಕಿರಣಗಳನ್ನು ಹೊರಸೂಸುವ ಪರಮಾಣುಗಳಿಂದ ಭೂಮಿಯಲ್ಲೇ ಪಡೆಯಬಹುದಾದ ಕಂಪನ ಸಂಖ್ಯೆಗೆ ಹೋಲಿಸಿದರೆ ಕಡಿಮೆಯಿರುತ್ತದೆ. ನಕ್ಷತ್ರದ ದೂರ ಹೆಚ್ಚಿದಷ್ಟೂ ಈ ಕಂಪನ ಸಂಖ್ಯೆಗಳ ನಡುವಿನ ವ್ಯತ್ಯಾಸವೂ ಹೆಚ್ಚುತ್ತಾ ಹೋಗುತ್ತದೆ. ಈ ವ್ಯತ್ಯಾಸದಿಂದ ನಮ್ಮ ವಿಶ್ವ ಹೇಗೆ ಮತ್ತು ಎಷ್ಟು ಹಿಂದೆ ಪ್ರಾರಂಭವಾಯಿತು ಎನ್ನುವುದರ ಬಗ್ಗೆಯೂ ಅಮೂಲ್ಯ ಮಾಹಿತಿ ದೊರೆತಿದೆ.

ನಮ್ಮ ಕಣ್ಣಿಗೆ ಕಾಣಿಸುವ ಬೆಳಕಿಗೆ ಹೋಲಿಸಿದರೆ, ಇನ್ನೂ ಹೆಚ್ಚು ಇಲ್ಲವೇ ಇನ್ನೂ ಕಡಿಮೆ ತರಂಗ ದೂರವಿರುವ ಅನೇಕ ಬಗೆಯ ವಿದ್ಯುತ್ ಅಯಸ್ಕಾಂತ ಕಿರಣಗಳಿವೆ. ಕೆಂಪು ಬೆಳಕಿನ ೮೦೦ ನಾನೋ ಮೀಟರ್ ತರಂಗದೂರಕ್ಕಿಂತ ಹೆಚ್ಚಿನ ತರಂಗದೂರವುಳ್ಳ ಬೆಳಕು ನಮ್ಮ ಕಣ್ಣಿಗೆ ಕಾಣದಿದ್ದರೂ, ಮೈಮೇಲೆ ಬಿದ್ದಾಗ ನಮಗೆ ಉಷ್ಣತೆಯ ಅನುಭವ ತರುತ್ತದೆ. ಈ ಕಿರಣಗಳು ನಮ್ಮ ಚರ್ಮದ ಅಣುಗಳ ಹಾರಾಟ ಹೆಚ್ಚಿಸಿ, ನಮಗೆ ಶಾಖದ ಅನುಭವ ನೀಡುತ್ತವೆ. ಈ ಅಲೆಯಳತೆಯ ಕಿರಣಗಳನ್ನು ರಕ್ತಾತೀತ ಬೆಳಕು ಎನ್ನಬಹುದು (Infra-red light). ಬೆಳದಿಂಗಳಿನಲ್ಲಿ ಈ ತರಂಗ ದೂರದ ಕಿರಣಗಳಿಲ್ಲದಿರುವುದೇ ಚಂದ್ರನ ಬೆಳಕು ನಮಗೆ ತಂಪು ಎಂಬ ಭಾವನೆ ಮೂಡಿಸುತ್ತದೆ. ರಕ್ತಾತೀತ ಬೆಳಕನ್ನು ಬಳಸಿ, ಅಣುಗಳಲ್ಲಿ ನಡೆಯುವ ಪರಮಾಣು ಕಂಪನಗಳ ಬಗ್ಗೆ ನಡೆಸಿದ ಸಂಶೋಧನೆಗಾಗಿ ಸರ್ ಸಿ. ವಿ. ರಾಮನ್‌ರವರಿಗೆ ನೊಬೆಲ್ ಪಾರಿತೋಷಕ ದೊರೆಯಿತು. ಸೂರ್ಯನಿಂದ ಬಂದ ಕಿರಣಗಳನ್ನೆಲ್ಲಾ ಭೂಮಿಯ ಮೇಲ್ಮೈ ಹೀರಿಕೊಳ್ಳುತ್ತದೆ. ಆಗ ಬಿಸಿಯಾಗುವ ಭೂಮಿ ತಾನು ಹೀರಿಕೊಂಡ ಶಕ್ತಿಯ ಒಂದು ಭಾಗವನ್ನು ರಕ್ತಾತೀತ ಕಿರಣಗಳ ರೂಪದಲ್ಲಿ ಹೊರಸೂಸುತ್ತದೆ. ಈ ರಕ್ತಾತೀತ ಕಿರಣಗಳ ಹೆಚ್ಚಿನ ಭಾಗ ಭೂಮಿಯ ವಾತಾವರಣವನ್ನು ದಾಟಿ ವಿಶ್ವದಲ್ಲಿ ಹಂಚಿಹೋಗುತ್ತದೆ. ಇದರಿಂದ ಭೂಮಿ ಕಾದು ಕೆಂಡವಾಗುವುದನ್ನು ತಪ್ಪಿಸಿಕೊಳ್ಳುತ್ತದೆ. ಭೂಮಿಯಿಂದ ಹೊರಟ ರಕ್ತಾತೀತ ಕಿರಣಗಳ ಒಂದು ಭಾಗವನ್ನು ವಾತಾವರಣದ ಕಾರ್ಬನ್ ಡೈ ಆಕ್ಸೈಡ್

ಹೀರಿಕೊಳ್ಳುತ್ತದೆ. ಆದ್ದರಿಂದ, ವಾತಾವರಣದಲ್ಲಿ ಕಾರ್ಬನ್ ಡೈ ಆಕ್ಸೈಡ್ ಪ್ರಮಾಣ ಹೆಚ್ಚಿದರೆ ಭೂಮಿಯ ವಾತಾವರಣದಲ್ಲೇ ಉಳಿಯುವ ಉಷ್ಣಶಕ್ತಿಯ ಅಂಶವೂ ಹೆಚ್ಚುತ್ತದೆ. ಆಗ ವಾತಾವರಣದ ಉಷ್ಣಾಂಶ ಏರುತ್ತದೆ. ನಮ್ಮ ಯಂತ್ರಾಧಾರಿತ ನಾಗರಿಕತೆ ವಾತಾವರಣದ ಕಾರ್ಬನ್ ಡೈ ಆಕ್ಸೈಡ್‌ನ್ನು ಹೆಚ್ಚಿಸುತ್ತದೆ. ಇದರಿಂದ ಭೂಮಿಯ ಸರಾಸರಿ ಉಷ್ಣಾಂಶ ಏರುತ್ತಿದೆ ಎಂದು ಭಾವಿಸಲಾಗಿದೆ. ಉಷ್ಣಾಂಶದ ಏರಿಕೆಯಿಂದ ಧ್ರುವ ಪ್ರದೇಶಗಳ ಮಂಜುಗಡ್ಡೆ ಕರಗಿ, ಸಾಗರಗಳ ಮಟ್ಟ ಹೆಚ್ಚಿ, ಭೂಮಿಯ ಅನೇಕ ಭಾಗಗಳು ಮುಳುಗಬಹುದು ಎಂಬ ಭಯವಿದೆ. ಕೆಲವು ನಿಶಾಚರ ಪ್ರಾಣಿಗಳ ಕಣ್ಣು ರಕ್ತಾತೀತ ಬೆಳಕಿಗೆ ಸ್ಪಂದಿಸಬಲ್ಲವು. ಇದರಿಂದ ಈ ಪ್ರಾಣಿಗಳಿಗೆ ರಾತ್ರಿಯ ಕತ್ತಲಿನಲ್ಲಿ ಬೇಟೆಯಾಡಲು ಸಾಧ್ಯವಾಗುತ್ತದೆ. ನೇರಳೆ ಬೆಳಕಿನ ೪೦೦ ನಾನೋ ಮೀಟರ್ ತರಂಗದೂರಕ್ಕಿಂತ ಕಡಿಮೆ ತರಂಗದೂರವಿರುವ ನೇರಳಾತೀತ ಕಿರಣಗಳು (Ultra-violet light) ನಮ್ಮ ಕಣ್ಣಿಗೆ ಕಾಣುವುದಿಲ್ಲ. ಆದರೆ ಇಂತಹ ಕಿರಣ ನಮ್ಮ ಚರ್ಮದ ಮೇಲೆ ಬಹಳಷ್ಟು ಬಿದ್ದರೆ, ಚರ್ಮ ಸುಡುವುದಲ್ಲದೇ ಚರ್ಮದ ಕ್ಯಾನ್ಸರಿಗೂ ದಾರಿಮಾಡಿಕೊಡಬಹುದು. ಸೂರ್ಯನಿಂದ ಭೂಮಿಗೆ ಬರುವ ಬೆಳಕಿನಲ್ಲಿ ನೇರಳಾತೀತ ಕಿರಣಗಳು ಹೇರಳವಾಗಿರುತ್ತವೆ. ನಮ್ಮ ವಾತಾವರಣದ ಮೇಲ್ಪದರದಲ್ಲಿರುವ ಆಕ್ಸಿಜನ್ನಿನ ಇನ್ನೊಂದು ರೂಪವಾದ ಓಜೋನ್ ಅನಿಲ ಈ ನೇರಳಾತೀತ ಕಿರಣಗಳನ್ನು ಹೀರಿಕೊಂಡು ನಮ್ಮನ್ನು ರಕ್ಷಿಸುತ್ತದೆ. ಇತ್ತೀಚೆಗೆ ಈ ಓಜೋನ್ ಪದರದಲ್ಲಿ ರಂಧ್ರಗಳು ಗೋಚರಿಸಿದ್ದು, ಮುಂಬರುವ ದಿನಗಳಲ್ಲಿ ಚರ್ಮದ ಕ್ಯಾನ್ಸರ್ ಹೆಚ್ಚಾಗುವ ಭಯ ಮೂಡಿಸಿದೆ. ಈ ಓಜೋನ್ ರಂಧ್ರಕ್ಕೆ ನಮ್ಮ ಆಧುನಿಕ ನಾಗರಿಕತೆಯೇ ಕಾರಣ ಎಂದು ಹೇಳಲಾಗುತ್ತಿದೆ. ರೆಫ್ರೀಜರೇಟರಿನಲ್ಲಿ ಹಾಗೂ ಅನೇಕ ಸಿಂಪಡಿಸುವ ದ್ರವ್ಯಗಳಲ್ಲಿ ಬಳಸುವ ಗಾಳಿಗಿಂತ ಹಗುರದ, ಸುಲಭವಾಗಿ ರಾಸಾಯನಿಕ ಬದಲಾವಣೆ ಹೊಂದದ 'ಫ್ಲೂರೋ ಕಾರ್ಬನ್'ಗಳು ವಾತಾವರಣದ ಮೇಲ್ಪದರಕ್ಕೆ ರವಾನಿಸಲ್ಪಟ್ಟಾಗ ಓಜೋನ್ ನಾಶವಾಗಿ ರಂಧ್ರಗಳು ಕಾಣಿಸಿಕೊಳ್ಳುತ್ತವೆ ಎಂದು ನಂಬಲಾಗಿದೆ.

ನಮ್ಮ ಅಕ್ಷಿಪಟಲದಲ್ಲಿರುವ ಅಣುಗಳು ೪೦೦ರಿಂದ ೮೦೦ ನಾನೋ ಮೀಟರ್ ತರಂಗದೂರಕ್ಕೆ ಹೊರಗಿರುವ ತರಂಗದೂರದ ಕಿರಣಗಳಿಗೆ ಸ್ಪಂದಿಸುವುದಿಲ್ಲವಾದ್ದರಿಂದ ಈ ಕಿರಣಗಳನ್ನು ಬಳಸಿ ನಾವು ನೋಡಲಾರೆವು. ಆದರೂ ಈ ಎಲ್ಲ ಬಗೆಯ ಕಿರಣಗಳನ್ನೂ ಒಂದಲ್ಲ ಒಂದು ರೀತಿ ಬಳಸಲು ಕಲಿತಿದ್ದೇವೆ. ಅನೇಕ ಬಗೆಯ ವಿದ್ಯುತ್ - ಅಯಸ್ಕಾಂತ ಕಿರಣಗಳು ಆಧುನಿಕ ಸಮಾಜದ ಅವಿಭಾಜ್ಯ ಅಂಗಗಳಾಗಿವೆ. ಇದೇ ಜಾತಿಗೆ ಸೇರಿದ ತರಂಗಗಳನ್ನು ಬಳಸಿಯೇ ರೇಡಿಯೋ, ಟೆಲಿವಿಷನ್ನುಗಳು ಕೆಲಸ ಮಾಡುತ್ತವೆ. ಇವುಗಳ ತರಂಗದೂರ ನೂರಾರು ಮೀಟರುಗಳು. ಕಂಪನ ಸಂಖ್ಯೆ ದಶಲಕ್ಷ ಹರ್ಟ್ಸ್. ಇವು ಮನೆಯ ದಪ್ಪ ಗೋಡೆಯನ್ನೂ ತೂರಿಕೊಂಡು ಒಳಕ್ಕೆ ಬರುತ್ತವೆ. ಚಂದ್ರನಲ್ಲಿ ಇಳಿದ ಮಾನವ ಭೂಮಿಯಲ್ಲಿದ್ದ ತನ್ನ ಸಹಚರರ ಸಂಪರ್ಕ ಸಾಧಿಸಲು ಇದೇ ಜಾತಿಗೆ ಸೇರಿದ ಕಿರಣಗಳನ್ನೇ ಬಳಸಿದ. ವಿಮಾನಗಳು ಸುರಕ್ಷಿತವಾಗಿ ಇಳಿಯಲು, ಯುದ್ಧದಲ್ಲಿ ಶತ್ರು ವಿಮಾನಗಳನ್ನು ಹೊಡೆದುರುಳಿಸಲು, ಅಟ್ಟಿಸಿಕೊಂಡು ಬಂದ ವಿಮಾನಕ್ಕೆ ದಾರಿ ತಪ್ಪಿಸಲು, ಈ ಕಿರಣಗಳು ಅತ್ಯಗತ್ಯ. ನಮ್ಮ ವಿಶಾಲ ವಿಶ್ವದಲ್ಲಿ ಭೂಮಿಯ ಹೊರತಾಗಿ ಇನ್ನೆಲ್ಲಿಯಾದರೂ ಬುದ್ಧಿಶಾಲಿ ಜೀವಿಗಳಿವೆಯೇ ಎಂಬುದನ್ನು ಎಂದಾದರೂ ನಮಗೆ ಅರಿಯಲು ಸಾಧ್ಯವಾದರೆ ಅದು ಇಂತಹ ಕಿರಣಗಳಿಂದಲೇ ಆಗಬೇಕು. ಎಕ್ಸ್ ಕಿರಣಗಳ ತರಂಗ ದೂರ ಬಹಳ ಕಡಿಮೆ - ಹತ್ತನೇ ಒಂದು ನಾನೋ ಮೀಟರ್ ಅಥವಾ ಒಂದು ಮೀಟರಿನ ಸಹಸ್ರಕೋಟಿ ಭಾಗದಲ್ಲಿ ಒಂದು. ಈ ಕಿರಣಗಳಿಗೂ ವಸ್ತುಗಳನ್ನು ತೂರಿಕೊಂಡು ಹೋಗುವ ಸ್ವಭಾವವಿದೆ. ನಮ್ಮ ಮಾಂಸಖಂಡ ಹಾಗೂ ಮೂಳೆಗಳ ಪಾರದರ್ಶಕತೆಯ ವ್ಯತ್ಯಾಸದಿಂದಾಗಿ ಈ ಕಿರಣಗಳನ್ನು ಬಳಸಿ ಮುರಿದ ಮೂಳೆಯನ್ನು ಸುಲಭವಾಗಿ ಗುರುತಿಸಬಹುದು. ಈ ಕಿರಣಗಳನ್ನೇ ಬಳಸಿ ಇನ್ನೂ ಅನೇಕ ಬಗೆಯ ವೈದ್ಯಕೀಯ ಪರೀಕ್ಷೆಗಳನ್ನು ನಡೆಸಬಹುದು. ಉದಾಹರಣೆಗೆ, ಮಿದುಳಿನಲ್ಲಿ ಇರಬಹುದಾದ ಗಡ್ಡೆಯನ್ನು ಪತ್ತೆಹಚ್ಚಲು ಎಕ್ಸ್-ಕಿರಣಗಳನ್ನು ಬಳಸುತ್ತಾರೆ. ಇದಕ್ಕೆ ಬೇಕಾದ ಯಂತ್ರಗಳು (CT scanner) ಬೆಂಗಳೂರಿನ ಅನೇಕ ಆಸ್ಪತ್ರೆಗಳಲ್ಲಿವೆ. ಹಲವಾರು ನಕ್ಷತ್ರಗಳು ಎಕ್ಸ್-ಕಿರಣಗಳನ್ನು ಹೊರಸೂಸುತ್ತವೆ. ಆದರೆ ಈ ಕಿರಣಗಳ ಹೆಚ್ಚಿನ ಭಾಗವನ್ನು ನಮ್ಮ ವಾತಾವರಣ ಹೀರಿಕೊಳ್ಳುತ್ತದೆ. ಆದ್ದರಿಂದ ವಾಯುಮಂಡಲದ ಹೊರಗೆ ಸ್ಥಾಪಿಸಿದ ವೀಕ್ಷಕ ಕೇಂದ್ರಗಳಿಂದ ಮಾತ್ರ ಈ ನಕ್ಷತ್ರಗಳ ಬಗ್ಗೆ ಸಂಶೋಧನೆಗಳನ್ನು ನಡೆಸಬಹುದು. ಈ ಬಗೆಯ 'ಚಂದ್ರ' ಎಂಬ ನಾಮಾಂಕಿತ ಆಕಾಶ ನೌಕೆಯನ್ನು ಎರಡು ವರ್ಷಗಳ ಹಿಂದೆ ಅಮೆರಿಕೆಯ ನಾಸಾ ಸಂಸ್ಥೆ ಹಾರಿಸಿತು. ಭಾರತ ಸಂಜಾತ ಖಭೌತಶಾಸ್ತ್ರಜ್ಞರಾದ ಚಂದ್ರಶೇಖರ್ ಅವರ ಗೌರವಾರ್ಥ ನೌಕೆಗೆ ಈ ಹೆಸರಿಡಲಾಯಿತು. ಎಕ್ಸ್ ಕಿರಣಗಳನ್ನು ಬಳಸಿ ಅಣುರಚನೆಯನ್ನು ಕಂಡುಹಿಡಿಯಬಹುದು. ಈ ತಂತ್ರದಿಂದಾಗಿ ಇಂದು ಉಪಯುಕ್ತ ಗುಣಗಳನ್ನು ಹೊಂದಿದ ಸಾವಿರಾರು ಹೊಸ ಅಣುಗಳನ್ನು ರಾಸಾಯನಿಕವಾಗಿ ಸಂಶ್ಲೇಷಿಸಲು ಸಾಧ್ಯವಾಗಿದೆ. ಜೀವಕೋಶಗಳಲ್ಲಿ ಕೆಲಸ ಮಾಡುವ ಬೃಹದಣುಗಳ ರಚನೆಗಳನ್ನು ಕಂಡುಕೊಂಡಿದ್ದರಿಂದ ಜೀವರಸಾಯನ ಶಾಸ್ತ್ರ ಕ್ರಾಂತಿಕಾರಿ ಬೆಳವಣಿಗೆ ಕಂಡಿದೆ.

ನಾವು ಸಾಮಾನ್ಯವಾಗಿ ಉತ್ಪತ್ತಿ ಮಾಡುವ ಬೆಳಕಿನ ಕಿರಣಗಳು ಹರಡಿಕೊಳ್ಳುವುದರಿಂದ ಬೇಗ ತೀವ್ರತೆ ಕಳೆದುಕೊಳ್ಳುತ್ತವೆ. ಜೊತೆಗೇ, ಈ ಕಿರಣಗಳಲ್ಲಿ ಎಲ್ಲಾ ಕಿರಣಗಳ ವಿದ್ಯುತ್ ಕಾಂತದ ಏರಿಳಿತ ಸಮಕಾಲದಲ್ಲಿ ಸಂಭವಿಸುತ್ತಿರುವುದಿಲ್ಲ. ಆದರೆ ಲೇಸರ್ ಕಿರಣಗಳ ವಿದ್ಯುತ್ ಕಾಂತಗಳಲ್ಲಿ ಹೊಂದಾಣಿಕೆಯಿದ್ದು ಅವು ಬಹುದೂರ ಹರಡದೇ ಚಲಿಸಬಲ್ಲವು. ಇಂತಹ ಕಿರಣಗಳನ್ನು ಬಳಸಿ ದಪ್ಪ ಲೋಹದ ಪಟ್ಟಿಗಳನ್ನೂ ತುಂಡು ಮಾಡಬಹುದು. ಶಸ್ತ್ರಚಿಕಿತ್ಸೆಗಳಿಗೆ ಬಳಸಬಹುದು.

ದೂರವನ್ನು ಊಹಿಸುವುದರಲ್ಲಿ ನಾವು ಹೆಚ್ಚಿನ

## ಇರವಿನ ಪರಿ

ಅರಳುವುದು ಮೊಗ್ಗಿಗೆ ಹಿಗ್ಗಿನ ಗುಣ
ಬೇಕೆಂದರೆ ಸುವಾಸಿಸುವುದು
ಬೇಡವೆಂದರೆ ನಿರ್ಗಂಧಿ ಆಗಿರುವುದು
ಹೂವಿನ ಮರ್ಜಿ ಇಲ್ಲವೆಂದರೆ ಸುಮವೇಕೆ
ಸುಮ್ಮನೆ 'ಕುಸುಮ' ಎನಿಸುವುದು ?

ನಗುವುದು ಕಣ್ಣಿಗೂ ತುಟಿಯಂಚಿಗೂ
ಅಂಟಿದ ನಂಟು. ಬೇಕೆಂದರೆ
ನಗಿಸುವುದು, ನಗುವುದು. ಬೇಡವೆಂದರೆ
ಬಿಗಿದುಕೊಂಡಿರುವುದು ನಕ್ಕವನ ಇತಿಮಿತಿ.
ಇಲ್ಲವೆಂದರೆ ಮುಖವೇಕೆ ಸುಮ್ಮನೆ
'ಒಡೆವ ಕನ್ನಡಿ' ಎನಿಸುವುದು ?

ಸಂತಾಪ ಅರಿತು ಸಂತೈಸಿಕೊಳ್ಳುವುದು
ಸ್ವಂತ ಮನಸಿನ ಧರ್ಮ. ಬೇಕೆಂದರೆ
ಹೊಗಳಿಕೆಗೆ ಉಬ್ಬುವುದು, ಬೇಡವೆಂದರೆ
ನಿಂದನೆಗೆ ಕಿವಿಗೊಡದಿರುವುದು
ನಿಸ್ಪೃಹನ ಕರ್ಮ. ಇಲ್ಲವೆಂದರೆ
ಕ್ರಿಯಾಶೀಲನೇಕೆ ಸುಮ್ಮನೆ
'ಸೊಕ್ಕಿನವ' ಎನಿಸುವವ ?

ಮರಳುವುದೆ ಸಮ್ಮತ : ಮುತ್ತಿನ ಸ್ವಭಾವ ಸ್ವಾರ್ಥಿಗೆ
ಉಲ್ಲಾಸಭರಿತ ಮೌನ ಸಹನೆಯ ಇರವಿನ ಪರಿಗೆ

ಶ್ಯಾಮಸುಂದರ ಬಿದರಕುಂದಿ



ಸಾಮರ್ಥ್ಯ ತೋರಿಸುತ್ತೇವೆ. ರಸ್ತೆ ದಾಟುವಾಗ ವೇಗವಾಗಿ ಬರುತ್ತಿರುವ ಮೋಟರಿನ ದೂರವನ್ನು ಸರಿಯಾಗಿ, ಶೀಘ್ರವಾಗಿ ನಿರ್ಧರಿಸಲಾಗದಿದ್ದರೆ ಇಂದಿನ ಕಾಲದಲ್ಲಿ ಬದುಕುವುದೇ ದುಸ್ಸಾಧ್ಯವಾಗುತ್ತಿತ್ತು. ಇಂತಹ ದೂರವನ್ನು ಊಹಿಸುವ ಶಕ್ತಿ ಅಕ್ಕಪಕ್ಕಗಳಲ್ಲಿರುವ ಎರಡು ಕಣ್ಣುಗಳಿಂದ ನಮಗೆ ಲಭ್ಯವಾಗಿದೆ. ಹಣೆಯ ಮಧ್ಯೆ ಒಂದೇ ಕಣ್ಣಿದ್ದಿದ್ದರೆ ಪ್ರಪಂಚವೇನೋ ಕಾಣುತ್ತಿತ್ತು. ಆದರೆ ದೂರವನ್ನು ಊಹಿಸುವುದು ಸುಲಭವಾಗುತ್ತಿರಲಿಲ್ಲ. ನಾವು ಗಮನಿಸಿ ನೋಡುವ ಯಾವುದೇ ವಸ್ತುವಿನ ಚಿತ್ರ ನಮ್ಮ ಎರಡೂ ಕಣ್ಣುಗಳ ಅಕ್ಷಿಪಟಲದ ಮೇಲೆ ಮೂಡುತ್ತದೆ. ಆದರೆ ಈ ಕಿರುಚಿತ್ರಗಳಲ್ಲಿ ವ್ಯತ್ಯಾಸಗಳಿರುತ್ತವೆ. ವಸ್ತುವಿನ ದೂರ ಅನುಸರಿಸಿ ಈ ಪ್ರತಿಬಿಂಬಗಳ ವ್ಯತ್ಯಾಸ ಹೆಚ್ಚು ಕಡಿಮೆಯಾಗುತ್ತದೆ. ಬಹು ದೂರದಲ್ಲಿರುವ ವಸ್ತುವಿನ ಪ್ರತಿಬಿಂಬಗಳಲ್ಲಿ ವ್ಯತ್ಯಾಸಗಳು ಕಡಿಮೆ. ಅಂತಹ ಚಿತ್ರವನ್ನು ದೂರದಲ್ಲಿರುವ ವಸ್ತುವೆಂದು ನಮ್ಮ ಮಿದುಳು ಅರ್ಥೈಸುತ್ತದೆ. ಅದೇ ಹತ್ತಿರದಲ್ಲಿರುವ ವಸ್ತುವಿನ ಎರಡು ಪ್ರತಿಬಿಂಬಗಳಲ್ಲಿ ಹತ್ತಿರವಿದ್ದಷ್ಟೂ ಹೆಚ್ಚು ವ್ಯತ್ಯಾಸವಿರುತ್ತದೆ. ಈ ವ್ಯತ್ಯಾಸದಿಂದಲೇ ನಮಗೆ ದೂರದ ಕಲ್ಪನೆ ಬರುತ್ತದೆ. ದೂರವನ್ನು ಅಳೆಯುವ ನಮ್ಮ ಈ ಸಾಮರ್ಥ್ಯ ಸುಮಾರು ೧೦೦ ಮೀಟರುಗಳವರೆಗೆ ಚೆನ್ನಾಗಿದೆ. ಆದ್ದರಿಂದಲೇ ಬಹಳ ದೂರವಿರುವ ವಸ್ತುಗಳಿಗೂ ನಮಗೂ ನಡುವಿನ ಅಂತರವನ್ನು ಸುಲಭವಾಗಿ ಊಹಿಸಲಾರೆವು. ನಮಗೂ ನಕ್ಷತ್ರಗಳಿಗೂ ಇರುವ ದೂರವನ್ನು ನಾವು ಊಹಿಸಲಾರೆವು. ಇತ್ತೀಚಿನವರೆಗೂ, ಆಕಾಶ ಬೋಗುಣಿಯಾಕಾರದಲ್ಲಿದ್ದು, ಎಲ್ಲ ನಕ್ಷತ್ರಗಳೂ ಬೋಗುಣಿಯಲ್ಲಿರುವ, ಭೂಮಿಗೆ ಸಮ ದೂರದಲ್ಲಿರುವ ಬಿಂದುಗಳು ಎಂದು ನಂಬಿದ್ದರು. ಇಂತಹ ಅನುಭವ ದೊಡ್ಡ ಬೆಟ್ಟದ ಕಡೆಗೆ ಬಯಲು ಪ್ರದೇಶದಿಂದ ಪ್ರಯಾಣಿಸುತ್ತಿರುವಾಗಲೂ ನಮ್ಮ ಅನುಭವಕ್ಕೆ ಬರುತ್ತದೆ. ಪಕ್ಕದಲ್ಲೇ ಇದೆ ಎನಿಸುವ ಬೆಟ್ಟ ಎಷ್ಟು ಸಮಯ ಕಳೆದರೂ ಅಷ್ಟೇ ದೂರದಲ್ಲಿರುವಂತೆ ತೋರುತ್ತದೆ. ನಮ್ಮಂತೆ ಅಕ್ಕಪಕ್ಕದಲ್ಲಿ, ನೇರ ದೃಷ್ಟಿಯ ಕಣ್ಣುಗಳನ್ನು ಹೊಂದಿಲ್ಲದ ಇತರ ಪ್ರಾಣಿಗಳಿಗೆ ಪ್ರಪಂಚ ಬೇರೆಯಾಗಿ ಕಾಣಬಹುದು ಎಂದು ಊಹಿಸಬಹುದು. ಉದಾಹರಣೆಗೆ, ಮೊಲದ ಎರಡು ಕಣ್ಣುಗಳು, ಅದಕ್ಕೆ ಹಿಂದೂ, ಮುಂದೂ ನೋಡುವ ಸಾಮರ್ಥ್ಯ ನೀಡುತ್ತವೆ. ಇದರಿಂದ ಬೇಟೆ ಅರಸಿ ಹಿಂದಿನಿಂದ ಬಂದ ಪ್ರಾಣಿಯೂ ಮೊಲಕ್ಕೆ ಕಾಣಿಸುತ್ತದೆ. ಆದರೆ ದೂರ ಗ್ರಹಿಸುವ ಜಾಣತನ ಕಡಿಮೆ. ಕಣ್ಣಿನ ಬದಲು ಎರಡು ಕ್ಯಾಮರಾಗಳನ್ನು ಅಕ್ಕಪಕ್ಕಗಳಲ್ಲಿಟ್ಟು, ಅವುಗಳಲ್ಲಿ ಮೂಡುವ ಚಿತ್ರಗಳನ್ನು ನಮ್ಮ ಕಣ್ಣುಗಳಿಗೆ ಪ್ರತ್ಯೇಕವಾಗಿ ಪೂರೈಸಿದರೆ, ನಮಗೆ ನಿಜ ಚಿತ್ರ ಕಂಡ ಅನುಭವವಾಗುತ್ತದೆ. ಗಣಿತದಲ್ಲಿ ಪರಿಣತಿ ಇರುವ ತಜ್ಞರಿಗೆ ಇಂತಹ ಚಿತ್ರ ಒದಗಿಸಿ ದೂರದ ಲೆಕ್ಕ ಕೇಳಿದರೆ, ಅವರಿಗದು ಸುಲಭದ ಪ್ರಶ್ನೆ ಎನಿಸದು. ಯಾವ ಗಣಿತದ ಪಾಠವೂ ಇಲ್ಲದೆ ಪುಟ್ಟ ಮಕ್ಕಳೂ, ಪ್ರಾಣಿಗಳೂ ಇಂತಹ ಗಣಿತಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ಕ್ಷಣಾರ್ಧದಲ್ಲಿ ಹೇಗೆ ಪರಿಹಾರ ಕಂಡುಕೊಳ್ಳುತ್ತವೆ ಎಂಬುದು ಇನ್ನೂ ನಾವು ಅರಿಯಬೇಕಾಗಿರುವ ವಿಸ್ಮಯ. ಸಾಧಾರಣವಾಗಿ, ಬೇಟೆಯಾಡುವ ಪ್ರಾಣಿಗಳು ದೂರವನ್ನು ಚೆನ್ನಾಗಿ ಗ್ರಹಿಸುವಂತಹ ಕಣ್ಣುಗಳನ್ನು ಹೊಂದಿರುತ್ತವೆ. ಅದೇ ಸಸ್ಯಾಹಾರಿ ಪ್ರಾಣಿಗಳ ಕಣ್ಣು ಎಲ್ಲ ದಿಕ್ಕುಗಳ ವೀಕ್ಷಣೆಗೆ ಸೂಕ್ತವಾದಂತಹ ಸ್ಥಾನಗಳಲ್ಲಿರುತ್ತವೆ.

ಮೇಲುನೋಟಕ್ಕೆ ಕಣ್ಣು ಡಾರ್ವಿನ್ನನ ವಿಕಾಸವಾದಕ್ಕೆ ಸವಾಲಾಗಿರುವಂತೆ ತೋರುತ್ತದೆ. ವಿಕಾಸವಾದದ ಪ್ರಕಾರ ಒಂದೇ ತಾಯಿಯಲ್ಲಿ ಹುಟ್ಟುವ ಮಕ್ಕಳಲ್ಲಿ ಸಣ್ಣಪುಟ್ಟ ಆನುವಂಶಿಕ ವ್ಯತ್ಯಾಸಗಳು ಒಮ್ಮೊಮ್ಮೆ ತಲೆದೋರುತ್ತವೆ. ಈ ವ್ಯತ್ಯಾಸಗಳಿಂದಾಗಿ ಮರಿಗಳಲ್ಲಿ ಕೆಲವು ಪರಿಸರಕ್ಕೆ ಹೆಚ್ಚು ಹೊಂದಿಕೊಂಡು ಬದುಕುವ ಸಾಮರ್ಥ್ಯ ಪಡೆಯುತ್ತವೆ. ಆನುವಂಶಿಕವಾಗಿ ಬದಲಾದ, ತಮ್ಮನ್ನೇ ಹೋಲುವ ಮರಿಗಳಿಗೆ ಜನ್ಮ ನೀಡುತ್ತವೆ. ಹೀಗೆ, ತಲೆಯಿಂದ ತಲೆಗೆ ಸಣ್ಣ ಸಣ್ಣ ಬದಲಾವಣೆಗಳು ಕೂಡಿ ಹೊಸ ಸಂತತಿಗೆ ದಾರಿಮಾಡಿಕೊಡುತ್ತವೆ. ಹೊಸ ಅಂಗಗಳು ಹುಟ್ಟುವುದೂ ಇಂತಹ ಪುಟ್ಟ ಪುಟ್ಟ ಹೆಜ್ಜೆಗಳಿಂದ. ಈ ತತ್ವದ ಪ್ರಕಾರ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಆಕಸ್ಮಿಕವಾಗಿ ಸಂಭವಿಸಬಲ್ಲ ಅತ್ಯಲ್ಪ ವ್ಯತ್ಯಾಸ ಮಾತ್ರ ಇರಲು ಸಾಧ್ಯ. ಈ ವ್ಯತ್ಯಾಸ ಉಳಿದು ಹರಡಬೇಕಾದರೆ ಅದರಿಂದ ಬದುಕುವ, ಸಂತಾನ ಪಡೆಯುವ ಸಾಮರ್ಥ್ಯ ಹೆಚ್ಚಬೇಕು. ಕಣ್ಣಿನ ಕೆಲಸ ಅನೇಕ ಪೂರಕ ವ್ಯವಸ್ಥೆಗಳನ್ನು ಅವಲಂಬಿಸಿದೆ. ಇವುಗಳಲ್ಲಿ ಕಣ್ಣಿನ ಮಸೂರ, ನರಬಳ್ಳಿಗಳು, ಅವುಗಳಲ್ಲಿರುವ ರಾಸಾಯನಿಕ ವಿಶೇಷಗಳು, ಮಿದುಳು ಮುಂತಾದವು ಕೆಲವು ಮಾತ್ರ. ಕಣ್ಣೇ ಇಲ್ಲದ ಪ್ರಾಣಿಯಿಂದ ಪ್ರಾರಂಭಿಸಿ ಸಣ್ಣ ಸಣ್ಣ ಕಂತುಗಳಲ್ಲಿ ಕಣ್ಣು ಪೂರ್ಣಗೊಂಡಿರಬೇಕು. ಈ ಎಲ್ಲ ಹಂತಗಳಲ್ಲೂ ಇನ್ನೂ ಕೆಲಸ ಮಾಡಲಾರದ ''ಭಾವೀ ಕಣ್ಣು'', ಇಂತಹ ಕುರುಡು ಕಣ್ಣೂ ಇಲ್ಲದ ಪ್ರಾಣಿಗೆ ಹೋಲಿಸಿದರೆ ಬದುಕಿ ಉಳಿಯುವ, ಸಂತಾನ ಪಡೆಯುವ ಸಾಮರ್ಥ್ಯ ಹೆಚ್ಚಿಸಿರಬೇಕು. ಇದು ಹೇಗೆ ಸಾಧ್ಯ ಎನ್ನಿಸುವುದು ಸಹಜ. ಅರ್ಧಮೂಡಿದ ಕಣ್ಣಿನಿಂದ ಏನು ಲಾಭವಿರಬಹುದು ? ಪ್ರಯೋಜನವೇ ಇಲ್ಲವಾದರೆ, ಕಣ್ಣಿನ ವಿಕಾಸ ಸಾಧ್ಯವಾಗಲಾರದು.

ಬಹು ಹಿಂದೆ ಬದುಕಿದ್ದ ಒಂದು ಪ್ರಾಣಿಗೆ ''ಕಣ್ಣು'' ಎಂದು ಕರೆಯಬಹುದಾದ ಅಂಗವಿಲ್ಲದಿದ್ದರೂ ಬೆಳಕಿಗೆ ಸ್ಪಂದಿಸುವ ಜೀವಕೋಶಗಳು ಜನಿಸಿರಲು ಸಾಧ್ಯ. ಇಂತಹ ಕೋಶಗಳನ್ನು ಹೊಂದಿದ ಜೀವಿ ಸೂರ್ಯನ ಉರಿಬಿಸಿಲನ್ನು ತಪ್ಪಿಸಿಕೊಳ್ಳಲು, ಇಲ್ಲವೇ ಅತ್ಯಂತ ಛಳಿ ಪ್ರದೇಶದಿಂದ ಹೆಚ್ಚು ಹಿತಕರವಾದ ವಾತಾವರಣಕ್ಕೆ ಪಯಣಿಸಲು ಕಲಿತಿರಬಹುದು. ಈ ಅನುಕೂಲತೆಯಿಲ್ಲದ ಪ್ರಾಣಿಗಿಂತ ಬೆಳಕಿಗೆ ಸ್ಪಂದಿಸಬಲ್ಲ ಪ್ರಾಣಿಗೆ ಬದುಕುಳಿಯುವ ಸಾಮರ್ಥ್ಯ ಹೆಚ್ಚಾಗಿರಬಹುದು ಎಂದು ಊಹಿಸುವುದು ಕಷ್ಟವಲ್ಲ. ಇದೇ ರೀತಿ ಕಣ್ಣಿನ ವಿಕಾಸದ ಪ್ರತಿಘಟ್ಟವೂ ಜೀವಿಗೆ ಹೇಗೆ ಅನುಕೂಲಕರವಾಗಿ ಪರಿಣಮಿಸಿರಬಹುದು ಎಂಬುದು ಊಹೆಗೆ ನಿಲುಕದ ವಿಷಯವಲ್ಲ. ಆದರಲ್ಲೂ ಕಣ್ಣಿನ ಸೃಷ್ಟಿಗೆ ಪ್ರಕೃತಿ ನೂರಾರು ಕೋಟಿ ವರ್ಷಗಳ ಸತತ ಪ್ರಯೋಗ ನಡೆಸಬೇಕಾಯಿತು ಎನ್ನುವುದನ್ನು ನೆನಪಿಟ್ಟರೆ ಕಣ್ಣಿನಿಂದಾಗುವ ವಿಸ್ಮಯ ಸಹಜ ಎನಿಸದೇ ಇರುವುದಿಲ್ಲ.

ಎಂ. ಆರ್. ಎನ್. ಮೂರ್ತಿ
ಅಣು ಜೀವಭೌತ ವಿಜ್ಞಾನ ಘಟಕ, ಭಾರತೀಯ ವಿಜ್ಞಾನ ಸಂಸ್ಥೆ
ಬೆಂಗಳೂರು-೫೬೦ ೦೧೨

## ಸಾದರ ಸ್ವೀಕಾರ

**ಕಿಶೋರಗೀತೆ** (ಪದ್ಯಗಳು) *ಭಾವಜೀವಿ*
**ಪುಟ : ೪೮** **ಬೆಲೆ : ರೂ. ೨೦**
ಗೀತಾ ಕುಟೀರ ಎಚ್. ಬಿ. ಎಸ್. ಲಿಂಕ್ ರಸ್ತೆ,
ಬಸವನಗುಡಿ, ಬೆಂಗಳೂರು.

**ಮಿಂಚು ಗೊಂಚಲು** (ಚುಟುಕುಗಳ ಸಂಗ್ರಹ)
*ಪ್ರೊ॥ ಎಚ್. ಎ. ಭಿಕ್ಷಾವರ್ತಿಮಠ*
**ಪುಟ : ೬೪** **ಬೆಲೆ : ರೂ. ೨೬**
**ಪರಂಜ್ಯೋತಿ ಪ್ರಕಾಶನ,**
ವಿದ್ಯಾನಗರ, ಹರಿಹರ-೫೭೭ ೬೦೧

**ತ್ರಿಕಟು** (ಕವನ ಸಂಕಲನ) *ಶಂ. ಪಾ. ದೈತೋಟ*
**ಪುಟ : ೭೮** **ಬೆಲೆ : ರೂ. ೫೦**
ಬೆಳ್ತಂಗಡಿ ತಾಲೂಕು ಲೇಖಕರ ಮತ್ತು
ಪ್ರಕಾಶಕರ ಸಹಕಾರಿ ಸಂಘ
ಉಜಿರೆ-೫೭೪ ೨೪೦

**ಅಡವಿಸಿದ್ಧನ ಅಂಚೆ** (ಅಡವಿಸಿದ್ಧನ ವಚನಗಳು)
*ನಿರುಪಾಧೀಶ*
**ಪುಟ : ೧೬೦** **ಬೆಲೆ : ರೂ. ೬೦**
**ಅಡವೀಶ ಪ್ರಕಾಶನ,** ಮರೇಗುದ್ದಿ - ೫೮೭ ೧೨೧

**ಸಂಜೆ ರಂಗು** (ಅಂಕಣ ಬರಹಗಳು)
*ಕೆ. ಜೆ. ಶೆಟ್ಟಿ ಕಡಂದಲೆ*
**ಪುಟ : ೧೫೫** **ಬೆಲೆ : ರೂ. ೫೦**
**ನವಶಕ್ತಿ ಪ್ರಕಾಶನ,**
ಕಡಂದಲೆ- ೫೭೪ ೨೭೭ (ದ.ಕ)

**ಕ್ರಾಂತಿದೂತ ಬಸವಣ್ಣ** (ಲೇಖನ ಸಂಗ್ರಹ)
*ಪಿ.ಎಸ್. ಪಾಟೀಲ*
**ಪುಟ : ೯೬** **ಬೆಲೆ : ರೂ. ೩೫**
**ದಿ. ಬಂಥನಾಳ ವೃಷಭಲಿಂಗೇಶ್ವರ**
ವಿದ್ಯಾವರ್ಧಕ ಟ್ರಸ್ಟ್, ಲಚ್ಯಾಣ, ಬಿಜಾಪುರ ಜಿಲ್ಲೆ.

**ಗತಿ** (ನೀಳ್ಗತೆ) *ತಮ್ಮೇಟಿ ರಘೋತ್ತಮ ರೆಡ್ಡಿ*
(ಅನು : ಡಾ॥ ಎಚ್. ಎಸ್. ಶ್ರೀಮತಿ)
**ಪುಟ : ೨೮** **ಬೆಲೆ : ರೂ. ೫**
**ಬೆಳ್ಳಿ ಚುಕ್ಕಿ ಬುಕ್ ಟ್ರಸ್ಟ್**
ಶೇಷಾದ್ರಿಪುರಂ ಅಂಚೆ ಕಚೇರಿ ಎದುರು
ಬೆಂಗಳೂರು-೫೬೦ ೦೨೦

**ಪುಕುವೊಕನ ಹಾದಿಯಲ್ಲಿ**
(ಸಹಜ ಕೃಷಿ ಅನುಭವಗಳು)
*ಜಿ. ಶಿವನಂಜಯ್ಯ ಬಾಳೆಕಾಯಿ*
**ಪುಟ : ೧೩೫** **ಬೆಲೆ : ರೂ. ೬೦**
**ನಮ್ಮ ಪ್ರಕಾಶನ,**
ಬಿಳಿಗೆರೆ, ತಿಪಟೂರು ತಾಲ್ಲೂಕು
ತುಮಕೂರು ಜಿಲ್ಲೆ, ಕರ್ನಾಟಕ.

# ಹಳ್ಳಿಗಳ ಸ್ವಾವಲಂಬನ ಶಕ್ತಿಯೇ ನಮ್ಮ ಸ್ವಾತಂತ್ರ್ಯದ ಬಲ

ಸ್ವತಂತ್ರ ಭಾರತದ ನನಸಿನ ಹಿಂದೆ ಮೈನವಿರೇಳಿಸುವ, ದೇಶ ಭಕ್ತಿಯನ್ನು ಬಡಿದೆಬ್ಬಿಸುವ ಸಹಸ್ರಾರು ಘಟನೆಗಳ ಸರಮಾಲೆಗಳೇ ಇವೆ. ಮಹಾತ್ಮ ಗಾಂಧೀಜಿಯವರಾದಿಯಾಗಿ ಲಕ್ಷೋಪಲಕ್ಷ ಸ್ವಾತಂತ್ರ್ಯ ಯೋಧರ ಮನಕಲಕುವ ತ್ಯಾಗ ಬಲಿದಾನಗಳನ್ನು ಎಳೆ ಎಳೆಯಾಗಿ ಬಿಡಿಸುವ ದೃಶ್ಯಾವಳಿಗಳೇ ನಮ್ಮ ಮುಂದಿವೆ. ತಾಯ್ನಾಡಿಗಾಗಿ ಇವರೆಲ್ಲರೂ ಸಲ್ಲಿಸಿದ ಅತ್ಯಮೂಲ್ಯ ಸೇವೆಯ ಫಲವಾಗಿ ಭಾರತವು ಜಗತ್ತಿನ ಅತ್ಯಂತ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವಾಗಿ ಹೊರಹೊಮ್ಮಲು ಸಾಧ್ಯವಾಗಿದೆ. ಸ್ವತಂತ್ರ ಭಾರತ ಇಂದು ಜಗತ್ತಿನ ಅತ್ಯಂತ ಪ್ರಭಾವಶಾಲಿ ರಾಷ್ಟ್ರಗಳಲ್ಲಿ ಒಂದು.

ನಮ್ಮ ಇಂದಿನ ಸ್ವಾತಂತ್ರ್ಯೋತ್ಸವವು ಇಂತಹ ಮಹಾನ್ ತ್ಯಾಗಿಗಳ ಸೇವೆಯನ್ನು ಸ್ಮರಿಸಿ, ಅವರಿಗೆ ನಮ್ಮ ಗೌರವಪೂರ್ಣ ನಮನ ಸಲ್ಲಿಸಲು ಸುಸಮಯ.

ಮಹಾತ್ಮ ಗಾಂಧೀಜಿಯವರ ಗ್ರಾಮ ಪುನರುದ್ಧಾರದ ಕನಸನ್ನು ನನಸಾಗಿಸುವ ದಿಸೆಯಲ್ಲಿ ಕರ್ನಾಟಕ ಇಂದು ಮುಂಚೂಣಿಯಲ್ಲಿದೆ.

ಆಧುನಿಕ ಅಭಿವೃದ್ಧಿಯ ಎಲ್ಲಾ ಆಯಾಮಗಳನ್ನು ಹಳ್ಳಿಗಳಿಗೂ ತಲುಪಿಸಿ, ಗ್ರಾಮೀಣ ನೆಮ್ಮದಿಯ ಬದುಕಿಗೆ ಶ್ರಮಿಸುತ್ತಿರುವ **ಶ್ರೀ ಎಸ್. ಎಂ. ಕೃಷ್ಣ** ನೇತೃತ್ವದ ಕರ್ನಾಟಕ ಸರ್ಕಾರ ಇತರರಿಗೆ ಮಾದರಿಯಾಗಿದೆ.

## ಗ್ರಾಮೀಣ ವಲಯದ ಅಭಿವೃದ್ಧಿಗಾಗಿ ಸರ್ಕಾರ ಕೈಗೊಂಡಿರುವ ಯೋಜನೆಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್

- ಅಧಿಕಾರ ವಿಕೇಂದ್ರೀಕರಣದ ಪ್ರತಿಫಲವನ್ನು ಮುಂದುವರಿಸುವ ದಿಸೆಯಲ್ಲಿ, ಶ್ರೀಸಾಮಾನ್ಯರು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳಲು **ಗ್ರಾಮಸಭೆಗಳು.**
- **ಸ್ವಚ್ಛ ಗ್ರಾಮ ಯೋಜನೆಯಡಿ** ಗ್ರಾಮೀಣ ಪರಿಸರ ನೈರ್ಮಲ್ಯ ಪಾಲನೆ. ಮೊದಲ ಹಂತದಲ್ಲಿ 1,296 ಗ್ರಾಮಗಳಲ್ಲಿ ಅನುಷ್ಠಾನ.

### ಗ್ರಾಮೀಣ ಕುಡಿಯುವ ನೀರು

- ರಾಜ್ಯದ ಎಲ್ಲಾ ಹಳ್ಳಿಗಳಲ್ಲೂ ದಿನಂಪ್ರತಿ ತಲಾ 55 ಲೀಟರ್ ನೀರು ಸರಬರಾಜಿಗೆ ಕ್ರಮ.

### ಸ್ತ್ರೀಶಕ್ತಿ

- ಗ್ರಾಮೀಣ ಮಹಿಳೆಯರ ಆರ್ಥಿಕ ಪ್ರಗತಿಗಾಗಿ ಅಪೂರ್ವ ಯೋಜನೆ. ತಲಾ 15ರಿಂದ 20 ಮಂದಿ ಮಹಿಳೆಯರನ್ನೊಳಗೊಂಡ 1,00,000 ಸ್ವಸಹಾಯ ಗುಂಪುಗಳ ರಚನೆ. ಪ್ರತಿ ಗುಂಪಿಗೂ ರೂ. 5,000 ಆವರ್ತನಿಧಿ ಹಾಗೂ ರೂ. 500 ಮೌಲ್ಯದ ಕಿಟ್ ನೀಡಿಕೆ.
- 7,85,488 ಸದಸ್ಯರಿಂದ ಈಗಾಗಲೇ 38,534 ಬ್ಯಾಂಕ್ ಖಾತೆಗಳ ಪ್ರಾರಂಭ. ಈ ಖಾತೆಗಳಲ್ಲಿ ರೂ. 8 ಕೋಟಿ ಉಳಿತಾಯ ಹಣ ಜಮಾ.

### ಗ್ರಾಮೀಣ ವಸತಿ

- **ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ** ವತಿಯಿಂದ ಮುಂದಿನ 5 ವರ್ಷಗಳಲ್ಲಿ ಸುಮಾರು 12 ಲಕ್ಷ ಮನೆಗಳ ನಿರ್ಮಾಣ. ಇದಕ್ಕಾಗಿ ರೂ. 213.25 ಕೋಟಿ ಮೀಸಲು. ಅತ್ಯುತ್ತಮ ವಸತಿ ಯೋಜನೆಗಳಿಗಾಗಿ ನಿಗಮಕ್ಕೆ ಪ್ರತಿಷ್ಠಿತ ಹುಡ್ಕೋ ಪ್ರಶಸ್ತಿ.

### ಗ್ರಾಮೀಣ ರಸ್ತೆಗಳು

- ಹತ್ತನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದೊಳಗಾಗಿ (2007) ರಾಜ್ಯದ ಎಲ್ಲಾ ಹಳ್ಳಿಗಳಿಗೆ ಸಂಪರ್ಕ ಕಲ್ಪಿಸುವ 'ಸರ್ವಋತು ರಸ್ತೆ' ಗಳಿಗಾಗಿ ಜಿಲ್ಲಾ ಗ್ರಾಮೀಣ ರಸ್ತೆಗಳ ಬೃಹತ್ ಯೋಜನೆ.

### ಭೂದಾಖಲೆಗಳ ಗಣಕೀಕರಣ

- 'ಭೂಮಿ' ಯೋಜನೆಯಡಿ 67 ಲಕ್ಷ ರೈತರ ಸುಮಾರು 2 ಕೋಟಿ ಭೂದಾಖಲೆಗಳ ಗಣಕೀಕರಣ.

### ಗ್ರಾಮೀಣ ಶಿಕ್ಷಣ

- ಗ್ರಾಮೀಣ ಯುವಕರಿಗಾಗಿ **ಯುವ.ಕಾಮ್** ಸೌಲಭ್ಯ.
- ಕರ್ನಾಟಕ ಶಾಲಾ ದತ್ತು ಯೋಜನೆಯಡಿ ಸರ್ಕಾರಿ ಶಾಲೆಗಳನ್ನು ಖಾಸಗಿ ಕ್ಷೇತ್ರದ ಸಂಸ್ಥೆಗಳು, ಟ್ರಸ್ಟ್‌ಗಳು, ಸರ್ಕಾರೇತರ ಸಂಸ್ಥೆಗಳು ಹಾಗೂ ದಾನಿಗಳು ದತ್ತು ತೆಗೆದುಕೊಂಡು ಸರ್ಕಾರದೊಂದಿಗೆ ಅಭಿವೃದ್ಧಿ ಪಡಿಸುವ ಕಾರ್ಯಕ್ರಮ. ಈಗಾಗಲೇ ಪ್ರತಿಷ್ಠಿತ ದತ್ತು ಸಂಸ್ಥೆಗಳಾದ ಅಜಿಂ ಪ್ರೇಂಜಿ ಫೌಂಡೇಶನ್, ಇನ್‌ಫೋಸಿಸ್ ಫೌಂಡೇಶನ್ ಮುಂತಾದವರ ಸಹಭಾಗಿತ್ವ.

### ಬರ ಪರಿಹಾರ ಕ್ರಮಗಳು

- ಬರಪೀಡಿತ ಪ್ರದೇಶಗಳಲ್ಲಿ ಕುಡಿಯುವ ನೀರು ಹಾಗೂ ಮೇವು ತುರ್ತಾಗಿ ಒದಗಿಸಲು ರಾಜ್ಯ ಸರ್ಕಾರದಿಂದ ರೂ. 100 ಕೋಟಿ ಬಿಡುಗಡೆ.
- ನೆರೆ ರಾಜ್ಯಗಳಿಗೆ ಮೇವು ಮಾರಾಟದ ಮೇಲೆ ನಿಷೇಧ.
- ನದೀ ತಟಗಳಲ್ಲಿ ನೀರೆತ್ತಲು ಸ್ಥಾಪಿಸಿರುವ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸರಬರಾಜು.
- ಕಪ್ಪು ಹಾಗೂ ಬೂದು ಪ್ರದೇಶಗಳೆಂದು ಘೋಷಿಸಲಾಗಿರುವ ಪ್ರದೇಶ ಗಳಲ್ಲೂ ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ನೀಡಿಕೆ.

55ನೇ ಸ್ವಾತಂತ್ರ್ಯೋತ್ಸವದ ಶುಭಾಶಯಗಳು

*ಇಂದು ಕರ್ನಾಟಕ ಸರ್ಕಾರ ಗ್ರಾಮೀಣ ಜನರ ಪುರೋಭಿವೃದ್ಧಿಗಾಗಿ ತನ್ನ ಸೇವೆ ಮುಡಿಪಾಗಿಟ್ಟಿದೆ. ಅಂತೆಯೇ ಸ್ವಾತಂತ್ರ್ಯ ಯೋಧರ ಆಶೋತ್ತರಗಳನ್ನು ಈಡೇರಿಸಲು ಕರ್ನಾಟಕ ಜನತೆಯೂ ಸಹ ಕಂಕಣಬದ್ಧರಾಗಿದ್ದಾರೆ.*

**ಕರ್ನಾಟಕ ವಾರ್ತೆ**

# ನೋಡ ಬನ್ನಿ ಮಂಗಳೂರ

ಮ. ಶ್ರೀ. ಮುರಳಿಕೃಷ್ಣ

ಎಚ್‌ಎಮ್‌ಟಿ ಬಹುಮಾನಿತ ಲೇಖನ




ಮಿತ್ರನೊಡನೆ ಲೋಕಾಭಿರಾಮವಾಗಿ ಮಾತನಾಡುತ್ತ ಮಂಗಳೂರಿಗೆ ಹೋಗುತ್ತಿರುವ ಪ್ರಸ್ತಾಪ ಮಾಡಿದೆ. ''ಏನಯ್ಯಾ ! ಕಛೇರಿಯ ಕೆಲಸದ ಮೇಲೆ ಹೋಗುತ್ತಿದ್ದೀಯಾ ?'' ಅವನು ವಿಚಾರಿಸಿದ. ''ಇಲ್ಲಯ್ಯ, ಮಂಗಳೂರಿಗೆ ಪ್ರವಾಸ ಹೋಗ್ತಾ ಇದ್ದೀನಿ'' ನಾನು ಉತ್ತರಿಸಿದೆ. ''ಓಹೋ ! ಉಡುಪಿ, ಧರ್ಮಸ್ಥಳಗಳಿಗೆ ಭೇಟಿ ನೀಡುವ ಕಾರ್ಯಕ್ರಮ ವಿದೆಯೇನೊ ?.... ಹಾಗೆ ಮಂಗಳೂರಿನ ಮೂಲಕ ವಾಪಸ್ಸಾಗುವ ಯೋಚನೆಯೋ ನಿನ್ನದು ?'' ವಿವರ ಕೇಳುವ ತವಕವಿತ್ತು ಆತನ ದನಿಯಲ್ಲಿ. ನಾನು ''ಇಲ್ಲ ಮಂಗಳೂರಿಗೇ ಪ್ರವಾಸ ಹೋಗ್ತಾ ಇದ್ದೀನಿ, ೩-೪ ದಿನ ಅಲ್ಲಿ ಉಳಿಯಬಹುದು... ಪ್ರೇಕ್ಷಣೀಯ ಸ್ಥಳಗಳನ್ನು ನೋಡಬೇಕು...'' ಎಂದೆ. ನಾನೊಬ್ಬ ಬೇಕೂಫ ಎಂಬ ದೃಷ್ಟಿಯನ್ನು ಬೀರುತ್ತಾ ಅವನೆಂದ – ''ಅಯ್ಯೋ ! ಏನಿದೆ ಅಲ್ಲಿ ? ಬೀಚ್‌ಗಳಿವೆ ಅಷ್ಟೇ. ತಿನ್ನುವುದಕ್ಕೆ ಮೀನಿನೂಟ ಸಿಗುತ್ತೆ.... ಬೆಂಗಳೂರಿನಲ್ಲೇ ಅದು ಸಿಗುತ್ತೆ... ಎಲ್ಲಾ ಕಾಲದಲ್ಲೂ ಅಲ್ಲಿ ಸಕತ್ ಸೆಕೆ ಇರುತ್ತೆ ಇಸ್ಸಿ !'' ಗೆಳೆಯ ನಗಾಡಿ ತಣ್ಣೀರೆರಚಿದ. ಪ್ರವಾಸದ ಬಗ್ಗೆ ನನಗಿರುವ ದೃಷ್ಟಿಕೋನಕ್ಕೂ, ಅವನದಕ್ಕೂ ಎಲ್ಲೂ ಸಾಮ್ಯತೆ ಇರದಿದ್ದ ಕಾರಣ ವಿಷಯವನ್ನು ಬದಲಾಯಿಸಿದೆ.

ಮಂಗಳೂರಿಗೆ ಹಲವು ಬಾರಿ ಕಛೇರಿಯ ಕೆಲಸದ ನಿಮಿತ್ತ ಹೋಗಿದ್ದರೂ, ಸಮಯದ ಅಭಾವದಿಂದ ಕೂಲಂಕಷವಾಗಿ ಸುತ್ತಾಡಲು ಸಾಧ್ಯವಾಗಿರಲಿಲ್ಲ. ಈ ಬಾರಿ ಅದರ ಸಲುವಾಗಿಯೇ ಹೋಗಬೇಕೆಂದು..... ನಿಶ್ಚಯಿಸಿದೆ. ಮಂಗಳೂರಿನ ಬಗ್ಗೆ ಹೆಚ್ಚಿನ ಅರಿವು ಗಳಿಸಲು ಚರಿತ್ರೆ, ಭೂಗೋಳ ಶಾಸ್ತ್ರದ ಪುಸ್ತಕಗಳ ಪುಟಗಳನ್ನು ತಿರುಗಿಸಿದೆ. ವಿಪುಲವಾದ ಮಾಹಿತಿಗಳು ಲಭಿಸಿದವು.

ಕರ್ನಾಟಕದ ಉದ್ದದ ಕಡಲ ತೀರಕ್ಕೆ ಕರಾವಳಿ ಎಂಬ ಹೆಸರಿದ್ದು, ಅಲ್ಲಿ ಅನೇಕ ಪಟ್ಟಣಗಳು ಬೆಳೆದಿವೆ, ಬೆಳೆಯುತ್ತಿವೆ. ಅವುಗಳಲ್ಲಿ ಮಂಗಳೂರು ಒಂದು ಪ್ರಮುಖ ಶಹರು. ಇದು ದಕ್ಷಿಣ ಕನ್ನಡ ಜಿಲ್ಲೆಯ ಪ್ರಧಾನ ಸ್ಥಳ. ಬೆಂಗಳೂರಿನಿಂದ ಸುಮಾರು ೩೭೫ ಕಿ. ಮೀ. ದೂರ ದಕ್ಷಿಣ ಹಾಗೂ ಪಶ್ಚಿಮದಲ್ಲಿ ನೀರಿನಿಂದ ಕೂಡಿರುವ ಈ ಊರು ನೆಲೆಸಿರುವುದು ಗುರುಪುರ ಹಾಗೂ ನೇತ್ರಾವತಿ ನದಿಗಳ ಹಿನ್ನೀರಿನಲ್ಲಿ. ಅರಬ್ಬೀ ಸಮುದ್ರದ ರೇವು ಪಟ್ಟಣಗಳಲ್ಲಿ ಗಮನಾರ್ಹ ಸ್ಥಾನ ಪಡೆದಿರುವ ಮಂಗಳೂರು ಒಂದು ಮುಖ್ಯ ವಾಣಿಜ್ಯ ಕೇಂದ್ರ. ಮಂಗಳೂರು ಹೆಂಚಿನ ಮನೆಗಳ ಜೊತೆಗೆ ವೈಭವಯುತ ಸಂಕೀರ್ಣಗಳೂ ಇಲ್ಲಿವೆ. ದೇವಸ್ಥಾನ, ಮಸೀದಿ, ಚರ್ಚುಗಳು, ಕಡಲ ಕಿನಾರೆಗಳು, ಉದ್ಯಾನಗಳು ಮುಂತಾದವು ಪ್ರವಾಸಿಗಳನ್ನು ಕೈಬೀಸಿ ಕರೆಯುತ್ತವೆ. ಮಲ್ಲಿಗೆ, ಗೋಡಂಬಿ ಹಾಗೂ ಮೀನುಗಳ ವಾಸನೆ ವಾತಾವರಣದಲ್ಲಿ ಬೆರೆತು ಮೂಗಿನ ಹೊಳ್ಳೆಗಳನ್ನು ಅರಳಿಸುತ್ತವೆ. ಇಷ್ಟೆಲ್ಲಾ ಇದ್ದರೂ, ಮಂಗಳೂರು ಒಂದು ಪ್ರವಾಸೀ ಸ್ಥಳವಾಗಿ ಬೆಳೆದಿಲ್ಲ..... ಬನ್ನಿ! ಮಂಗಳೂರಿನಲ್ಲಿ ಏನೇನಿದೆಯೋ ನೋಡೋಣ......

ಮಂಗಳೂರಿನ ಇತಿಹಾಸ ಸಮೃದ್ಧ. ಇಲ್ಲಿ ಯುದ್ಧ, ಆಕ್ರಮಣ, ಪಲಾಯನ ಎಲ್ಲವೂ ಜರುಗಿವೆ. ಮಂಗಳಾದೇವಿ ದೇವಸ್ಥಾನದಿಂದ ಮಂಗಳೂರು ಹೆಸರು ಪ್ರಾಪ್ತಿಯಾಯಿತೆಂದು ಐತಿಹ್ಯ. ಕ್ರಿ.ಶ. ೧೦ನೇ ಶತಮಾನದಲ್ಲಿದ್ದ ಮಂಗಳಾದೇವಿ ಎಂಬ ರಾಣಿಯ ಹೆಸರನ್ನೇ ಈ ದೇಗುಲಕ್ಕೆ ಇಡಲಾಯಿತೆಂದು ಹೇಳುತ್ತಾರೆ. ಆಕೆ ನಾಥ ಪಂಥದ ಅನುಯಾಯಿಯಾಗಿದ್ದಳಂತೆ. ಆದರೆ ದೇಗುಲದಲ್ಲಿರುವ ಕ್ರಿ. ಶ. ೭ನೇ ಶತಮಾನದ ಮರತ್ತೂರು ತಾಮ್ರ ಶಾಸನದಲ್ಲಿ ಮಂಗಳಾಪುರ ಎಂಬ ಉಲ್ಲೇಖವಿದ್ದು, ಮಂಗಳ (ಮಂಗರ)ವೆಂದರೆ ಒಂದು ಕೋಟೆಯೆಂದು ಕೆಲವು ಇತಿಹಾಸಕಾರರ ಅಭಿಮತ. 'ಮಂದೆಗೊರಾ' ಹಾಗೂ 'ಮಗನೂರು' ಎಂದು ಪ್ರಸ್ತಾಪಿಸಿರುವುದು ಅರಿಯನ್ ಹಾಗೂ ಟಾಲೆಮಿಯವರ ಕೃತಿಗಳಲ್ಲಿ. ಕೆಲವು ವಿದ್ವಾಂಸರ ಪ್ರಕಾರ ಕ್ರಿ.ಶ. ೧ನೇ ಶತಮಾನದಲ್ಲಿ ಪ್ಲಿನಿ ಉಲ್ಲೇಖಿಸಿರುವ 'ನಿತಿಯಾ' ಎಂಬುದು ಇಂದಿನ ನೇತ್ರಾವತಿ ನದಿ. ತುಳು ಭಾಷೆಯಲ್ಲಿ 'ಕೊಡಿಯಾಲ' (ನದಿಗಳ ಸಂಗಮ) ಹಾಗೂ 'ಕುಡ್ಲ' (ಸಮುದ್ರವನ್ನು ಸೇರುವುದು) ಎಂದು ಕರೆಯುತ್ತಾರೆ.

ಮಂಗಳಾದೇವಿ ದೇಗುಲವನ್ನು ಕಟ್ಟಿಸಿದ್ದು ಅತ್ತಾವರದ ಬಲ್ಲಾಳರು. ನಾಥ ಪಂಥದ ಪ್ರಮುಖರಲ್ಲಿ ಒಬ್ಬರಾದ ಗೋರಕನಾಥರಿಂದ ಇದರ ಉದ್ಘಾಟನೆಯಾಯಿತೆಂದು ಹೇಳುತ್ತಾರೆ. ಕ್ರಿ.ಶ. ೯೬೮ರಲ್ಲಿ ಇದನ್ನು ಪುನರ್ನಿಮಿಸಿದ್ದು ಆಳುಪರಾಜ ವಂಶದ ೨ನೇ ಕುಂದವರ್ಮ. ಈಗಿರುವ ಮಂದಿರವನ್ನು ಕಟ್ಟಿದ್ದು ಇಕ್ಕೇರಿ ನಾಯಕರ ಕಾಲದಲ್ಲಿ. ಆಳೂಪರ ಕಾಲದಲ್ಲಿ ಇದು ರಾಜಧಾನಿಯಾಗಿ ಮೆರೆದಿತ್ತು.

ಕ್ರಿ. ಶ. ೧೪ನೇ ಶತಮಾನದ ಮಧ್ಯದಲ್ಲಿ ಇಬನ್‌ಬಟೂಟಾ ಎಂಬ ಅರೇಬಿಯಾ ದೇಶದ ಯಾತ್ರಿಕ ಮಂಗಳೂರಿಗೆ ಭೇಟಿ ನೀಡಿದ್ದ. ಆ ಸಮಯದಲ್ಲಿ ಅಲ್ಲಿ ಯಮನ್ ಹಾಗೂ ಪರ್ಶಿಯಾ ದೇಶದ ವ್ಯಾಪಾರಸ್ಥರು ನೆಲೆಸಿದ್ದರೆಂದು ಆತ ದಾಖಲಿಸಿದ್ದಾನೆ. ಭಾರತಕ್ಕೆ ಜಲಮಾರ್ಗವನ್ನು ಕಂಡುಹಿಡಿದ ಪೋರ್ಚುಗೀಸ್ ಅನ್ವೇಷಕ ವಾಸ್ಕೋ ಡ ಗಾಮ ಉಡುಪಿಯ ಬಳಿಯಿರುವ ಒಂದು ದ್ವೀಪದ ಮೇಲೆ ಪಾದವೂರಿದ. ವಿಜಯನಗರದ ಸಾಮ್ರಾಟರ ಆಳ್ವಿಕೆಯ ಕಾಲದಲ್ಲಿ ಮಂಗಳೂರು ರಾಜ್ಯವು ರಾಜ್ಯಪಾಲನ ಸುಪರ್ದಿಯಲ್ಲಿತ್ತು. ಮಂಡಳಿಕ ಬಂಗರಾಜನು ಆಡಳಿತ ನಡೆಸಿದ್ದನು. ಕ್ರಿ.ಶ. ೧೫೨೬ರಲ್ಲಿ ವಿಜಯನಗರದ ಅರಸ ಅನುಮತಿ ನೀಡಿದ ತರುವಾಯ, ಪೋರ್ಚುಗೀಸರು ಮಂಗಳೂರಿನಲ್ಲಿ ಕೋಟೆಯೊಂದನ್ನು ಕಟ್ಟಿಸಿದರು. ಕಾಲಾಂತರದಲ್ಲಿ ಅದು ಐರೋಪ್ಯರ ವಶವಾಯಿತು. ಸುಮಾರು ಕ್ರಿ.ಶ. [illegible]ರಲ್ಲಿ ಅದನ್ನು ಪುನರ್ನಿರ್ಮಿಸಲಾಯಿತು. ಇದಾದ ಸ್ವಲ್ಪ



*ರವೀಂದ್ರನಾಥ ಟಾಗೂರ್ ಉದ್ಯಾನದಲ್ಲಿರುವ ಒಂದು ಶಿಲ್ಪಕಲೆ*

೧ಕಾಲಾವಧಿಯಲ್ಲೇ ಮಂಗಳೂರಿನ ಪತನ ಆರಂಭವಾಯಿತು. ಮೊದಲು ಪೋರ್ಚುಗೀಸರು ಮಂಗಳೂರನ್ನು ಸುಟ್ಟರು. ನಂತರದ ಸರದಿ ಅರಬ್ಬರದು. ಮಂಗಳೂರು ನೆಲಸಮವಾದರೂ, ನಿಧಾನವಾಗಿ ಫೀನಿಕ್ಸ್ ಹಕ್ಕಿಯಂತೆ ಪುಟಿದೆದ್ದಿತು. ಕ್ರಿ.ಶ. ೧೮ನೇ ಶತಮಾನದಲ್ಲಿ ಕೆಳದಿಯ ನಾಯಕರು ಪೋರ್ಚುಗೀಸರನ್ನು ಹೊಡೆದೋಡಿಸಿ ಇಲ್ಲಿ ನೆಲೆಗೊಂಡರು. ಹೈದರಾಲಿ ನಾಯಕರನ್ನು ಸದೆಬಡಿದು, ತನ್ನ ಆಧಿಪತ್ಯವನ್ನು ಸಾರಿದನು. ನೌಕಾಂಗಣಗಳನ್ನು ಕಟ್ಟಿ, ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿದನು. ಟಿಪ್ಪು ಸುಲ್ತಾನನ ಆಧೀನದಲ್ಲಿದ್ದ ಮಂಗಳೂರು, ಶ್ರೀರಂಗಪಟ್ಟಣದ ಪತನದ ನಂತರ ಬ್ರಿಟಿಷರ ವಶವಾಯಿತು.

ಸುಲ್ತಾನ್ ಬತೇರಿ ಒಂದು ಚಿಕ್ಕ ಕಾವಲು ಕೋಟೆ. ಗುರುಪುರ ನದಿಯಲ್ಲಿ ಯುದ್ಧ ನೌಕೆಗಳು ಬಾರದಂತೆ ತಡೆಯಲು ಟಿಪ್ಪು ಸುಲ್ತಾನ ಸುಮಾರು ೬೦ ಅಡಿ ಎತ್ತರದ ಈ ಕೋಟೆಯನ್ನು ಕಟ್ಟಿಸಿದ. ೩೦ ಮೆಟ್ಟಿಲುಗಳನ್ನು ಏರಿದರೆ ಕೋಟೆಯ ಮೇಲ್ಭಾಗ ತಲುಪಬಹುದು. ಕೋಟೆಯ ಗೋಡೆಗಳಲ್ಲಿ ಕೋವಿಗಳನ್ನು ಇರಿಸಲು ಬಳಸುತ್ತಿದ್ದ ಕಿಂಡಿಗಳನ್ನು ಗಮನಿಸಬಹುದು. ಕಪ್ಪು ಹಾಗೂ ಕೆಂಪು ಕಲ್ಲುಗಳಿಂದ ಈ ಕೋಟೆಯನ್ನು ಕಟ್ಟಿಸಲಾಗಿತ್ತು. ಇಂತಹ ಸ್ಮಾರಕ ಕೆಲವು ತಿಂಗಳ ಹಿಂದೆ ಪತ್ರಿಕೆಗಳಲ್ಲಿ ಋಣಾತ್ಮಕ ಕಾರಣಗಳಿಂದ ಸುದ್ದಿಯಾಯಿತು. ದುರಸ್ತಿ ಕೆಲಸ ನಡೆಯುತ್ತಿದ್ದಾಗ, ಉಸ್ತುವಾರಿ ಜನ ಸರಿಯಾಗಿ ನಿಗಾ ವಹಿಸದೆಯಿದ್ದುದರಿಂದ ಈ ಇಮಾರತಿಗೆ ಸುಣ್ಣವನ್ನು ಬಳಿಯಲಾಯಿತು. ಇದರಿಂದ ಅದು ವಿರೂಪ ಹೊಂದಿತು. ಈ ಪ್ರಮಾದವನ್ನು ಸರಿಪಡಿಸಲು, ಪುರಾತತ್ವ ಇಲಾಖೆ ಹೆಚ್ಚಿನ ವೆಚ್ಚ ಮಾಡುವ ಸಂದರ್ಭ ಒದಗಿತು. ಸ್ಮಾರಕಗಳ ಮೇಲೆ ತಮ್ಮ ಹೆಸರುಗಳನ್ನು ಕೆತ್ತಿ, ಕಲಾಚಾತುರ್ಯವನ್ನು ಮೆರೆಯುವ ಕೆಲವು ಮಂದಿಯಿಂದ, ಭಾರತೀಯರಿಗೆ ಇತಿಹಾಸ ಪ್ರಜ್ಞೆ ಕಡಿಮೆ



*ಟಿಪ್ಪುಸುಲ್ತಾನ್ ಕಾಲದ ಸುಲ್ತಾನ್ ಬತೇರಿ*

ಎಂಬ ಬಿರುದು ಸಂದಾಯವಾಗಿದೆ. ಹೀಗಿರಬೇಕಾದರೆ, ಚರಿತ್ರೆಯ ಹೆಗ್ಗುರುತುಗಳನ್ನು ಸಂರಕ್ಷಿಸಬೇಕಾದ ಇಲಾಖೆಯೇ ಬೇಜವಾಬ್ದಾರಿಯಿಂದ ವರ್ತಿಸಿರುವುದು ಖಂಡನೀಯ.

ಊರಿನ ಹೃದಯ ಭಾಗದಲ್ಲಿ ಬಾವುಟ ಗುಡ್ಡವಿದ್ದು, ಅಲ್ಲಿ ಒಂದು ಸಮುದ್ರ ದೀಪಗೃಹವಿದೆ (ಲೈಟ್ ಹೌಸ್). ಕ್ರಿ.ಶ. ೧೯೦೦ರಲ್ಲಿ ಹೊಸ ದೀಪ ಸ್ತಂಭವನ್ನು ಕಟ್ಟಲಾಯಿತು. ಹತ್ತಿರದ ರವೀಂದ್ರನಾಥ ಟಾಗೋರ್ ಉದ್ಯಾನದಲ್ಲಿರುವ ವಿವಿಧ ವರ್ಣದ ಕುಸುಮಗಳು ಸುವ್ಯವಸ್ಥಿತವಾಗಿ ಗಿಡಗಳನ್ನು ಬೆಳೆಸಿರುವ ಪರಿ ಮನಸ್ಸಿಗೆ ತಂಪನ್ನು ನೀಡುತ್ತದೆ. ಪ್ರಖ್ಯಾತ ಮಂಜುನಾಥ ದೇವಾಲಯವಿರುವುದು ಕದ್ರಿ ಬೆಟ್ಟದಲ್ಲಿ. ಮಹಾಯಾನ ಬೌದ್ಧ ಧರ್ಮದ ಉಪಶಾಖೆಯೆಂದು ಗುರುತಿಸಲ್ಪಡುವ ನೇಪಾಳ ಮೂಲದ್ದೆನ್ನಲಾದ ನಾಥ ಪಂಥದ ಜೋಗಿಮಠವು ಇಲ್ಲಿದೆ. ನೇಪಾಳ ಶೈಲಿಯಲ್ಲಿ ದೇಗುಲವನ್ನು ಕಟ್ಟಿರುವುದು ಈ ಅಂಶವನ್ನು ಪುಷ್ಟೀಕರಿಸುತ್ತದೆ. ದೇಗುಲದ ಸಮೀಪ ಒಂಬತ್ತು ಕೊಳಗಳಿವೆ. ಈ ಕೊಳಗಳಿಗೆ ನೀರು ಸರಬರಾಜಾಗುವುದು ನೈಸರ್ಗಿಕ ನೀರಿನ ಧಾರೆಗಳಿಂದ. ಪಾಂಡವರ ಹೆಸರಿಗೆ ತಳುಕು ಹಾಕಿಕೊಂಡಿರುವ ಕೆಲವು ಗುಹೆಗಳು ಇಲ್ಲಿವೆ. ದೇಗುಲದಲ್ಲಿರುವ ಅವಲೋಕಿತೇಶ್ವರನ ಕಂಚಿನ ವಿಗ್ರಹಕ್ಕೆ ಮೂರು ತಲೆಗಳು, ಆರು ಕೈಗಳಿವೆ. ಸಂಸ್ಕೃತದ ಬರಹವೊಂದರ ಪ್ರಕಾರ ಈ ವಿಗ್ರಹವನ್ನು ಕದರಿಕಾ ವಿಹಾರದಲ್ಲಿ ಪ್ರತಿಷ್ಠಾಪಿಸಿದ್ದು ಕುಂದವರ್ಮ. ಧ್ಯಾನಸ್ಥ ಸ್ಥಿತಿಯಲ್ಲಿರುವ ಬುದ್ಧನ ಕಂಚಿನ ಪ್ರತಿಮೆಗಳು, ಸುಮಾರು ಕ್ರಿ.ಶ. ೧೦ನೇ ಶತಮಾನದ ಮಂಜುನಾಥನ ವಿಗ್ರಹ, ನಾಥ ಪಂಥದ ಪ್ರಮುಖ ಮೂರ್ತಿಗಳು ಇಲ್ಲಿವೆ. ಸಾಲಂಕೃತ ದೀಪ ಸ್ತಂಭಗಳು ನೋಡಲು ನಯನಾನಂದಕರ. ಉಲ್ಲಾಳದ ಸೋಮೇಶ್ವರ, ಕುದ್ರೋಳಿಯ ಗೋಕರ್ಣನಾಥೇಶ್ವರ, ವೆಂಕಟರಮಣ, ವಿಠೋಬ, ಪಂಚಲಿಂಗೇಶ್ವರ, ಮಹಾಮಾಯಾ ಆಂಜನೇಯ, ಉಮಾಮಹೇಶ್ವರ, ತ್ರಿಶೂಲೇಶ್ವರ ಇತ್ಯಾದಿ ದೇಗುಲಗಳೂ ಮಂಗಳೂರಿನಲ್ಲಿವೆ.

ಪೋರ್ಚುಗೀಸರ ಆಗಮನದಿಂದ ಕಿರಿಸ್ತಾನ ಧರ್ಮವು ಮಂಗಳೂರಿಗೆ ಕಾಲಿಟ್ಟಿತ್ತೆನ್ನಬಹುದು. ಇಲ್ಲಿ ಕೆಲವು ಗಮನ ಸೆಳೆಯುವ ಇಗರ್ಜಿಗಳಿವೆ. ರೋಮಿನ ಸಂತ ಫಿಲಿಪ್ ನೆರಿ ಪ್ರಾರ್ಥನಾ ಮಂದಿರದ ವಿನ್ಯಾಸದ ಸಾಮ್ಯತೆಯಿರುವ ಸಂತ ಎಲೋಷಿಯಸ್ ಕಾಲೇಜಿನ ಚರ್ಚನ್ನು ಫಾದರ್ ಜೋಸೆಫ್ ವಿಲ್ಲ ಕಟ್ಟಿದ್ದು ಕ್ರಿ.ಶ. ೧೮೮೪ರಲ್ಲಿ. ಇದರ ಒಳಗಡೆ ಅಪೂರ್ವ ವರ್ಣ ಚಿತ್ರಗಳಿವೆ. ಇವುಗಳನ್ನು ಕ್ರಿ. ಶ. ೧೯೦೪ರಲ್ಲಿ ರಚಿಸಿದ್ದು ಇಟಾಲಿ ದೇಶದ ಒಬ್ಬ ಜೆಸ್ಯೂಯಿಟ್ ಪಾದ್ರಿ. ಗೋಡೆಗಳು, ಕಮಾನುಗಳು ಹಾಗೂ ಮೇಲ್ಛಾವಣಿಗಳಲ್ಲಿ ಫ್ರೆಸ್ಕೊ ಹಾಗೂ ತೈಲ ಚಿತ್ರಗಳಿವೆ. ಏಸು ಕ್ರಿಸ್ತನ ಜನ್ಮ, ಆತನ ದೀಕ್ಷೆ, ಕಾನಾದಲ್ಲಿ ಜರುಗಿದ ಮದುವೆ, ಕೊನೆಯ ರಾತ್ರಿಯೂಟ (ದಿ ಲಾಸ್ಟ್ ಸಪ್ಪರ್) ಮುಂತಾದ ವರ್ಣ ಚಿತ್ರಗಳು ವೀಕ್ಷಕರನ್ನು ಸೆಳೆಯುತ್ತವೆ. ಇತ್ತೀಚಿನ ವರ್ಷಗಳಲ್ಲಿ ನಶಿಸಿಹೋಗುತ್ತಿದ್ದ ಈ ಚಿತ್ರಗಳನ್ನು ಸಂರಕ್ಷಿಸಲಾಗಿದೆ. ಈ ಕಾಲೇಜಿನ ಆವರಣದಲ್ಲಿರುವ ವಸ್ತು ಸಂಗ್ರಹಾಲಯವೂ ಸಂದರ್ಶನಾಯೋಗ್ಯ. ಇದು ಪ್ರಾರಂಭವಾದದ್ದು ಕ್ರಿ.ಶ. ೧೯೩೧ರಲ್ಲಿ. ಎಪ್ಪತ್ತರ ದಶಕದಲ್ಲಿ ಇದನ್ನು ಮುಚ್ಚಲಾಯಿತು. ಪುನಃ ತೊಂಬತ್ತರ ದಶಕದ ಮಧ್ಯಭಾಗದಲ್ಲಿ ತೆರೆಯಲಾಯಿತು. ಇಲ್ಲಿ ಹಳೆಯ ಕಾಲದ ಆಭರಣಗಳು, ಪಾತ್ರೆಗಳು, ಗಾಡಿಗಳು, ನೋಟುಗಳು, ಫೋನುಗಳು, ಸಾಧನಗಳು, ಆಯುಧಗಳು, ಪುಸ್ತಕಗಳು, ಪೋರ್ಚುಗೀಸ್ ದೇಶದ ಕರಕುಶಲ ವಸ್ತುಗಳು, ಪ್ರಾಣಿಗಳ ಚರ್ಮಗಳು, ಮಂಗಳೂರಿನ ಮೊದಲ ಜನರೇಟರ್, ಕಾರು ಮುಂತಾದ ಕುತೂಹಲಕಾರೀ ಸಂಗ್ರಹ ನೋಡುಗರನ್ನು ಗತಿಸಿದ ಕಾಲಕ್ಕೆ ಕೊಂಡೊಯ್ಯುತ್ತದೆ. ಇದಲ್ಲದೆ, ಇಲ್ಲಿ ಸಂತ ಜೋಸೆಫ ಥಿಯೋಲಾಜಿಕಲ್ ಸೆಮಿನರಿ, ಬೋಳಾರದಲ್ಲಿರುವ ಮೋಸ್ಟ್ ಹೋಲಿ ರೋಸರಿ (ಕ್ರಿ.ಶ. ೧೫೬೮ರಲ್ಲಿ ಕಟ್ಟಲಾಗಿರುವ ಈ ಚರ್ಚು ದಕ್ಷಿಣ ಕನ್ನಡದ ಮೂರು ಪುರಾತನ ಚರ್ಚುಗಳಲ್ಲಿ ಒಂದು) ಸ್ವಿಟ್ಜರ್‌ಲ್ಯಾಂಡ್‌ನ ಬೇಸಲ್‌ನಲ್ಲಿರುವ ಮಿಶನ್ ಹೌಸ್ ಮಾದರಿಯಲ್ಲಿ, ಬಲ್ಮಠದಲ್ಲಿ ಕಟ್ಟಿರುವ ಶಾಂತಿ ಕಥೀಡ್ರಲ್ (ಕ್ರಿ.ಶ. ೧೮೬೨), ರೋಜಾರಿಯೊ ಚರ್ಚ್, ಮಿಲಾಗ್ರೀಸ್ ಚರ್ಚ್ ಮುಂತಾದವು ಹೆಸರುವಾಸಿಯಾಗಿರುವ ಇಗರ್ಜಿಗಳು.



*ಬಾವುಟ ಗುಡ್ಡದಲ್ಲಿರುವ ಲೈಟ್‌ಹೌಸ್*

ಅರಬ್ಬರು ಇಲ್ಲಿ ಕಾಲಿಟ್ಟ ಮೇಲೆ ಇಸ್ಲಾಮ್ ಇಮಾರತುಗಳು ಕಟ್ಟಲ್ಪಟ್ಟವು. ಬಂದರ್‌ನಲ್ಲಿರುವ ಜುಮ್ಮ ಮಸೀದಿಯನ್ನು ಅವರೇ ನಿರ್ಮಿಸಿದರು. ಅನೇಕ ಬಾರಿ ನವೀಕರಣಗೊಂಡ ಈ ಮಸೀದಿಯನ್ನು ಕ್ರಿ.ಶ. ೧೮ನೇ ಶತಮಾನದಲ್ಲಿ ಟಿಪ್ಪು ಸುಲ್ತಾನ ಸಹ ಜೀರ್ಣೋದ್ಧಾರ ಮಾಡಿದ. ಇಲ್ಲಿನ ಮರದ ಕಂಬಗಳಲ್ಲಿರುವ ಕೆತ್ತನೆಗಳು ಆಕರ್ಷಕ. ಮಂಗಳೂರಿನ ಇತರ ಮುಖ್ಯ ಮಸೀದಿಗಳೆಂದರೆ ಜೀನತ್ ಬಕ್ಷ್ ಮಸೀದಿ, ಲೈಟ್ ಹೌಸ್ ಬೆಟ್ಟದ ಈದ್‌ಗಾ ಮಸೀದಿ, ಡೊಂಗರ ಕೇರಿಯ ಶಮೀರ್ ಮಸೀದಿ.

ಅನಾದಿ ಕಾಲದಿಂದಲೂ ಜೊತೆಜೊತೆಯಾಗಿ ಹಿಂದು, ಇಸ್ಲಾಂ ಹಾಗೂ ಕಿರಿಸ್ತಾನ ಧರ್ಮಗಳು ನೆಲೆಸಿದ್ದರೂ, ಇತ್ತೀಚಿನ ವರ್ಷಗಳಲ್ಲಿ ದಕ್ಷಿಣ ಕನ್ನಡದ ಕೆಲವು ಸ್ಥಳಗಳು ಕರಾಳ ಕೋಮುವಾದದ ಕಬಂಧ ಬಾಹುಗಳಿಗೆ ಸಿಲುಕಿ ನಲುಗುತ್ತಿರುವುದು ಆತಂಕಕಾರಿ ವಿಷಯ. ಆದರೆ ಪಾರಂಪರಿಕವಾಗಿ ಜರುಗುತ್ತಿರುವ ಕೆಲವು ಸಾಂಸ್ಕೃತಿಕ, ಧಾರ್ಮಿಕ ಆಚರಣೆಗಳಲ್ಲಿ ಇಂದಿಗೂ ಅಲ್ಪಸಂಖ್ಯಾತ ಕೋಮುಗಳಿಗೆ ಸೇರಿದ ಜನರು ಭಾಗಿಯಾಗುತ್ತಾರೆ. ಸಾಮಾನ್ಯ ಜನರ ಜೀವನದಲ್ಲಿ ಹಾಸುಹೊಕ್ಕಾಗಿರುವ ಈ ಭಾವೈಕ್ಯತೆ ನಮ್ಮ ದೇಶದ ಐಕ್ಯತೆಯ ಜೀವಾಳ. ಆದರೆ ದಕ್ಷಿಣ ಕನ್ನಡ ಜಿಲ್ಲೆಯನ್ನೊಳಗೊಂಡು ದೇಶದ ಇತರ ಭಾಗಗಳಲ್ಲಿ ಧರ್ಮಾಂಧರು, ಮತೀಯವಾದಿಗಳು, ಕೋಮುವಾದಿಗಳು ಹಾಗೂ ಮೂಲಭೂತವಾದಿಗಳು ಸ್ಥಾಪಿತ ಹಿತಾಸಕ್ತಿಗಳಿಂದ ಕೋಮು ಸಾಮರಸ್ಯಕ್ಕೆ ಕೊಳ್ಳಿ ಹಾಕುವ ಕಾರ್ಯಗಳನ್ನು ಮಾಡುತ್ತಿರುವುದು ದೇಶದ ಹಿತಕ್ಕೆ ಮಾರಕ.

ಕನ್ನಡ ಪತ್ರಿಕಾ ರಂಗದ ಮೊದಲ ಪತ್ರಿಕೆ ಪ್ರಕಟವಾಗಿದ್ದು ಮಂಗಳೂರಿನಲ್ಲಿ. ಜುಲೈ ೧, ೧೮೪೩ರಲ್ಲಿ 'ಮಂಗಳೂರು ಸಮಾಚಾರ' ಶುರುವಾಯಿತು. ಇದಕ್ಕೆ ಪ್ರೇರಕಶಕ್ತಿಯಾಗಿದ್ದವನು ಫ್ರೆಡರಿಕ್ ಮೊಗ್ಲಿಂಗ್ ಎಂಬ ಜರ್ಮನಿಯ ಕ್ರೈಸ್ತ ಮತ ಪ್ರಚಾರಕ. ಬೆಸಲ್ ಮಿಷನ್ ಈ ಪತ್ರಿಕೆಯನ್ನು ಮೂರು ವರ್ಷಗಳ ಕಾಲ ನಡೆಸಿತು. ಕ್ರಿ.ಶ. ೧೮೪೬ರಲ್ಲಿ ಇದರ ಪ್ರಕಟನೆ ನಿಂತಿತು. ಕರ್ನಾಟಕದಲ್ಲಿ ಕಾಲೇಜು ಮೊದಲು ಶುರುವಾದದ್ದು ಸಹ ಮಂಗಳೂರಿನಲ್ಲೇ.

ದಕ್ಷಿಣ ಕನ್ನಡವನ್ನು ಬ್ಯಾಂಕ್‌ಗಳ ಜಿಲ್ಲೆ ಎಂದು ಕರೆಯಬಹುದು. ಕೆನರಾ, ಕಾರ್ಪೊರೇಷನ್, ವಿಜಯಾ, ಕರ್ನಾಟಕ ಬ್ಯಾಂಕ್‌ಗಳು ಜನ್ಮ ತಳೆದಿದ್ದು ಮಂಗಳೂರಿನಲ್ಲಿ. ಸಿಂಡಿಕೇಟ್ ಬ್ಯಾಂಕ್ ಶುರುವಾದದ್ದು ಉಡುಪಿಯ ಸಮೀಪದ ಮಣಿಪಾಲದಲ್ಲಿ. ಹಂತಹಂತವಾಗಿ ಬೆಳೆದ ಈ ಬ್ಯಾಂಕ್‌ಗಳು ಈಗ ರಾಷ್ಟ್ರೀಯ ಮಟ್ಟದಲ್ಲಿ ಹೆಸರುವಾಸಿಯಾಗಿವೆ.

ಪಿಲಿಕುಳ ನಿಸರ್ಗಧಾಮವಿರುವುದು ಮಂಗಳೂರಿನಿಂದ ಸುಮಾರು ೨೦ ಕಿ.ಮೀ. ದೂರದಲ್ಲಿ. ಸುಮಾರು ೩೭೫ ಎಕ್ರೆ ಪ್ರದೇಶದಲ್ಲಿ ವನ್ಯಜೀವಿ ಸಫಾರಿ, ಸಸ್ಯೋದ್ಯಾನ, ಪ್ಲಾನಟೇರಿಯಂ, ಬೋಟ್ ಕ್ಲಬ್, ಸಂಗೀತ ಕಾರಂಜಿ, ಅಮ್ಯೂಸ್‌ಮೆಂಟ್ ಹಾಗೂ ವಾಟರ್ ಪಾರ್ಕ್‌ಗಳು ಇತ್ಯಾದಿ ರಂಜನೀಯ ಸೌಕರ್ಯಗಳ ರೂಪುರೇಷೆಗಳುಳ್ಳ ಈ ಧಾಮದ ಅಸ್ತಿತ್ವಕ್ಕೆ ಸರ್ಕಾರ, ಸಾರ್ವಜನಿಕರು ಹಾಗೂ ಕೆಲವು ಯೋಜನೆಗಳಿಗೆ ಖಾಸಗಿ ಬಂಡವಾಳದ ಸಹಕಾರವಿದೆ. ದಕ್ಷಿಣ ಭಾರತದಲ್ಲೇ ಇದು ಅತ್ಯಪೂರ್ವ ಆಕರ್ಷಣಾ ಕೇಂದ್ರವಾಗುವ ಎಲ್ಲಾ ಸಾಧ್ಯತೆಗಳಿವೆ.

ಮಂಗಳೂರಿನ ಸಮುದ್ರ ಕಿನಾರೆಗಳು ಗೋವೆಯಷ್ಟು ಹೆಸರು ಗಳಿಸದಿದ್ದರೂ, ಅವುಗಳು ತಮ್ಮದೇ ಆದ ಛಾಪನ್ನು ಮೂಡಿಸಿವೆ. ಸಂಜೆಯ ಸಮಯದಲ್ಲಿ ನೇಸರನ ಪಶ್ಚಿಮ ದಿಶೆಯ ನಡಿಗೆಯಿಂದ ಬಾನಿನಲ್ಲಾಗುವ ವರ್ಣಚಿತ್ರಗಳು ನಿರಂತರವಾಗಿ ಕಿನಾರೆಗಳನ್ನು ಮುತ್ತಿಕ್ಕುವ ಮೊರೆಯುವ ಬೆಳ್ನೊರೆಗಳ ಅಲೆಗಳು; ಸ್ವಚ್ಛಂದವಾಗಿ ಹಾರಾಡುವ ಬಾನಾಡಿಗಳು ನೀಲಾಗಸದಲ್ಲಿ ಮೂಡಿಸುವ ಚಲಿಸುವ ವಿನ್ಯಾಸಗಳು, ರವಿಯ ಕಿರಣಗಳಿಂದ ಮಿರಮಿರನೆ ಮಿಂಚುವ ಕಪ್ಪೊಡಲ ಮೀನುಗಾರರ ದೋಣಿಗಳು, ದೂರದಲ್ಲಿ ಲಂಗರು ಹಾಕಿರುವ ದೊಡ್ಡ ಹಡಗುಗಳು, ಕಿನಾರೆಗಳಲ್ಲಿ ಚಿಣ್ಣರ ಕೇಕೆ ಆಟೋಟಗಳು.... ಒಂದೇ... ಎರಡೇ ಚೇತೋಹಾರಿ ಮನೋಹರ ದೃಶ್ಯಗಳು... ಸುರತ್‌ಕಲ್, ಉಲ್ಲಾಳ, ಪಣಂಬೂರು, ತಣ್ಣೀರ್‌ಭಾವಿ ಬೀಚುಗಳಲ್ಲಿ ಸಂಜೆಯಾದರೆ ಜನರು ಜಮಾಯಿಸಿ, ನಿಸರ್ಗದ ನಾನಾ ಲೀಲೆಗಳನ್ನು ಮನಸಾರೆ ಅನುಭವಿಸುತ್ತಾರೆ. ಗುರುಪುರ ಹಾಗೂ ನೇತ್ರಾವತಿ ನದಿಗಳಲ್ಲಿ ದೋಣಿ ವಿಹಾರವು ಮುದದಾಯಕ.

ಮಂಗಳೂರಿನಿಂದ ಸುಮಾರು ೧೦ ಕಿ.ಮೀ. ದೂರದಲ್ಲಿರುವ ಪಣಂಬೂರಿನಲ್ಲಿ ನವಮಂಗಳೂರು ಸರ್ವ ಋತು ಬಂದರಿದೆ. ಕಳೆದ ವರ್ಷ ಇದು ರಜತ ಮಹೋತ್ಸವವನ್ನು ಆಚರಿಸಿತು. ದೇಶದಲ್ಲಿರುವ ಬಂದರುಗಳಲ್ಲಿ ಇದು ಮುಖ್ಯಸ್ಥಾನ ಗಳಿಸಿದೆ.

ಮಂಗಳೂರಿನಲ್ಲಿ ಕೆಲವು ಕಲಾ ಸಂಗ್ರಹಾಲಯಗಳಿವೆ. ನಗರದ ರಥ ಬೀದಿಯಲ್ಲಿರುವ 'ಪಾವಂಜೆ ಹೌಸ್' ಒಂದು ವಿಶಿಷ್ಟ ಖಾಸಗಿ ಕಲಾ ಸಂಗ್ರಹಾಲಯ. ಈ ಮನೆಯನ್ನು ಕ್ರಿ.ಶ. ೧೮೯೨ರಲ್ಲಿ ಕಟ್ಟಿಸಿದವರು ಸ್ವತಃ ಕಲಾವಿದರಾಗಿದ್ದ ಪಾವಂಜೆ ಗೋಪಾಲಕೃಷ್ಣಯ್ಯ. ಅವರ ಮೊಮ್ಮಗಳಾದ ಅನು ಪಾವಂಜೆ ತಮ್ಮ ಅಜ್ಜನ ಮನೆಯನ್ನೇ ಸುಂದರವಾದ ಕಲಾ ಹಾಗೂ ಪ್ರಾಚ್ಯ ವಸ್ತುಗಳ ಸಂಗ್ರಹಾಲಯವನ್ನಾಗಿ ಪರಿವರ್ತಿಸಿದ್ದಾರೆ. ಇಲ್ಲಿ ನಶ್ಯದ ಬುರುಡೆ, ಭರಣಿ, ಸಾಂಬಾರ ಮರಿಗೆ, ಅಡಿಕೆ ಕತ್ತರಿ, ತೀರ್ಥದ ಗಿಂಡಿ, ಗಂಧದ ಬಟ್ಟಲು, ಚಂದನದ ಮೂರ್ತಿಗಳು, ಪಂಚ ಲೋಹದ ಮೂರ್ತಿಗಳು, ವ್ಯಾಸಪೀಠ, ಓಲೆಗರಿಯ ಗ್ರಂಥಗಳು ಹಾಗೂ ಇತರ ಅನೇಕ ವಸ್ತುಗಳು ಇವೆ. ಇಂತಹ ಕಲಾಪೋಷಣೆಯ ಪ್ರಯತ್ನಗಳಿಗೆ ಸಂಬಂಧಪಟ್ಟ ಇಲಾಖೆಯವರು ಉತ್ತೇಜನ ನೀಡಬೇಕು.

> **ಲೇಖಕರ ಗಮನಕ್ಕೆ**
>
> ನಿಮ್ಮ ಲೇಖನಗಳಿಗೆ ಸ್ವಾಗತವಿದೆ. ಲೇಖನ ಕಳಿಸುವವರು ದಯವಿಟ್ಟು ಸ್ಫುಟವಾಗಿ ಬರೆದು ಕಳಿಸಬೇಕಾಗಿ ವಿನಂತಿ. ಹಸ್ತಪ್ರತಿಯನ್ನು ಸಹನೆಯಿಂದ ಪರಿಶೀಲಿಸಲು ಇದರಿಂದ ಸಾಧ್ಯವಾಗುತ್ತದೆ. ಇಲ್ಲದಿದ್ದಲ್ಲಿ ನಿಮ್ಮ ಮೌಲಿಕ ಲೇಖನ ಸಹ ಪ್ರಕಟವಾಗದಿರಬಹುದು ಎಂಬ ಆತಂಕ ನಮ್ಮದು. ನಿಮ್ಮ ಸಹಕಾರ ನಮಗೆ ಅತ್ಯಗತ್ಯ. ಅನಗತ್ಯವಾಗಿ ಇಂಗ್ಲಿಷ್ ಪದಗಳನ್ನೂ ವಾಕ್ಯಗಳನ್ನೂ ಬಳಸದಿದ್ದರೆ ಅನುಕೂಲವಾಗುತ್ತದೆ.
>
> *– ಸಂಪಾದಕ, 'ಹೊಸತು'*



*ಸಂತ ಅಲೋಷಿಯಸ್ ಕಾಲೇಜ್ ಚರ್ಚ್*

ಬಿಜೈ ಗುಡ್ಡದ ಮೇಲಿರುವ ಶ್ರೀಮಂತಿ ಬಾಯಿ ಸ್ಮಾರಕ ಸರಕಾರಿ ವಸ್ತು ಸಂಗ್ರಹಾಲಯದಲ್ಲೂ ಅಪೂರ್ವ ವಸ್ತುಗಳಿವೆ. ಇಲ್ಲಿನ ಕಾಷ್ಠ ಶಿಲ್ಪಗಳು, ಕ್ರಿ.ಶ. ೧೧-೧೮ ಶತಮಾನಗಳ ಕಂಚಿನ ಮತ್ತು ತಾಮ್ರದ ಮೂರ್ತಿಗಳು, ಯಕ್ಷಗಾನದ ಗೊಂಬೆಗಳು, ದಂತದ ರಚನೆಗಳು, ಬ್ರೆಜಿಲ್, ಚೀನಾ, ದಕ್ಷಿಣ ಆಫ್ರಿಕಾ ಹಾಗೂ ಇತರ ದೇಶಗಳ ಕಂಚಿನ ಕೃತಿಗಳು, ವಿದೇಶಿ ಪಿಂಗಾಣಿ ವಸ್ತುಗಳು, ಗಾಜಿನ ಸಾಮಾನುಗಳು ಇತ್ಯಾದಿ ಮನಸೂರೆಗೊಳ್ಳುತ್ತವೆ. ಕಟ್ಟಡದ ಹೊರಾಂಗಣದಲ್ಲಿ ಶಿಲಾಸ್ತಂಭಗಳು, ಶಾಸನಗಳು ಮತ್ತು ಮೂರ್ತಿಗಳಿವೆ. ಒಂದು ಫಿರಂಗಿಯೂ ಇದೆ. ಇಷ್ಟೆಲ್ಲಾ ಇದ್ದರೂ ಬಹಳ ಕಡಿಮೆ ಮಂದಿ ಈ ವಸ್ತು ಸಂಗ್ರಹಾಲಯಕ್ಕೆ ಭೇಟಿ ನೀಡುತ್ತಾರೆ.

ಒಂದು ಕಾಲದಲ್ಲಿ ಮಂಗಳೂರು ಹೆಂಚು ಕಟ್ಟಡಗಳ ನಿರ್ಮಾಣದಲ್ಲಿ ಮಹತ್ವಪೂರ್ಣ ಪಾತ್ರ ವಹಿಸಿತ್ತು. ಈಗ ಹೆಚ್ಚಾಗಿ ಬಡವರು ಮನೆಗಳನ್ನು ಕಟ್ಟುವುದಕ್ಕೆ ಬಳಸುತ್ತಾರೆ. ಬೇಸಲ್ ಮಿಷನ್‌ರವರು ಲಘು ಹೆಂಚುಗಳ ತಯಾರಿಕೆಗೆ ಯೋಜನೆ ಸಿದ್ಧಪಡಿಸಿದಾಗ ಇದರ ಉಗಮವಾಯಿತು.

ಸ್ವದೇಶಿ ಹಾಗೂ ವಿದೇಶಿ ಪ್ರವಾಸಿಗಳು ಭೇಟಿ ನೀಡಬಹುದಾದ ಅನೇಕ ಪ್ರೇಕ್ಷಣೀಯ ತಾಣಗಳಿದ್ದರೂ, ಮಂಗಳೂರು ಪ್ರವಾಸೀ ಭೂಪಟದಲ್ಲಿ ಗಳಿಸಬೇಕಾದ ಸ್ಥಾನ ಪಡೆಯುವುದರಲ್ಲಿ ಸಫಲವಾಗಿಲ್ಲ. ಸಾಕಷ್ಟು ಪ್ರಚಾರ ಸಿಗದೆಯಿರುವುದು ಒಂದು ಮುಖ್ಯ ಕಾರಣ. ಇಲ್ಲಿನ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಇಲಾಖೆಯ ಕಛೇರಿಯು ಈ ಕೊರತೆ ನೀಗಿಸುವಲ್ಲಿ ಸೂಕ್ತವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

ಮುಂದಿನ ಬಾರಿ ಮಂಗಳೂರಿಗೆ ಭೇಟಿ ನೀಡಿದಾಗ, ಇಲ್ಲಿನ ಸಾಂಸ್ಕೃತಿಕ, ನೈಸರ್ಗಿಕ, ಧಾರ್ಮಿಕ, ಕಲಾ ವೈಶಿಷ್ಟ್ಯಗಳ ಪರಿಚಯ ಮಾಡಿಕೊಳ್ಳುತ್ತೀರಲ್ಲವೆ ?

(ಚಿತ್ರ ಲೇಖನ) : [illegible]
[illegible]

# ಲಾವಂಚವೇ ಪ್ರಪಂಚ

ಉತ್ತರ ಕನ್ನಡ ಜಿಲ್ಲೆಯ ಭಟ್ಕಳದ ಕೆನರಾ ಕರಕುಶಲ ಗೃಹ ಕೈಗಾರಿಕೆಗೆ ಭೇಟಿ ಕೊಟ್ಟಿದ್ದೀರಾ ? ಭೇಟಿ ಕೊಟ್ಟಿದ್ದರೆ ಅಲ್ಲಿ ಪ್ರದರ್ಶನ, ಮಾರಾಟಕ್ಕೆ ಇಟ್ಟ ಕಸೂತಿ ಕೆಲಸಗಳು ನಿಮ್ಮ ಕಣ್ಣನ್ನು ಸೆಳೆದಿವೆಯಲ್ಲವೆ ? ಇವೆಲ್ಲವೂ ತಯಾರಾದುದು ಹೇಗೆ ಗೊತ್ತೇ ? ಲಾವಂಚ ಎಂಬ ಸಸ್ಯದ ಬೇರಿನಿಂದ. ಈ ಕರಕುಶಲ ಕೆಲಸಗಳು ಅರಳಿ ನಿಲ್ಲಲು ಕಾರಣಕರ್ತರು ಕೇರಳದವರಾದ ಎಂ. ಡಿ. ಮ್ಯಾಥ್ಯೂ. ಹತ್ತು ವರ್ಷಗಳ ಹಿಂದೆ ಅವರು ಭಟ್ಕಳದಲ್ಲಿ ಬಂದು ನೆಲೆಸಿದರು. ವೃತ್ತಿಯಲ್ಲಿ ಕೃಷಿ, ಪ್ರವೃತ್ತಿಯಲ್ಲಿ ಕಲಾತ್ಮಕ ವಸ್ತು ತಯಾರಿಕೆ ಇವರ ಕಸುಬು.

ಲಾವಂಚದಿಂದ ತೈಲ ತೆಗೆಯುವ ಅನುಭವವಿದ್ದ ಎಂ. ಡಿ. ಮ್ಯಾಥ್ಯೂರವರು ಕೇರಳದಿಂದ ಬರುವಾಗ ಲಾವಂಚ ಗೆಡ್ಡೆಯನ್ನು ತಂದು, ತಮ್ಮ ಕೃಷಿ ಭೂಮಿಯಲ್ಲಿ ಹಾಕಿ ಬೆಳೆಸಿದರು. ಪ್ರಾರಂಭದ ದಿನದಲ್ಲಿ ಸುಗಂಧಭರಿತ ಎಣ್ಣೆಯನ್ನು ತೆಗೆಯುವ ಜೊತೆಗೆ ಔಷಧದ ಮಹತ್ವವನ್ನು ತಿಳಿದು ಎಣ್ಣೆಯನ್ನು ತೆಗೆದು ಮೈಕೈ ನೋವಿಗೆ ಔಷಧಿ ಕೊಡುತ್ತಿದ್ದರು. ಅವರ ಕೃಷಿ ಭೂಮಿಯ ಅನೇಕ ಕಡೆ ಲಾವಂಚ ಹಬ್ಬಿತು. ಏನಾದರೂ ಹೊಸದನ್ನು ಮಾಡಬೇಕೆಂದು ಯೋಚಿಸಿದಾಗ, ಕಲೆಗಾರರಾದ ಇವರು ಮೊದಲು ಇದರ ಬೇರಿನಿಂದ ತಯಾರಿಸಿದ್ದು ಬೀಸಣಿಗೆ. ನಂತರ ಟೋಪಿ, ಹೂದಾನಿ, ಚಪ್ಪಲಿ - ಹೀಗೆ ಹತ್ತು ಹಲವು ವಸ್ತುಗಳನ್ನು ತಯಾರಿಸಿದರು. ದಿನಕ್ಕೊಂದು ಪ್ರಯೋಗದಂತೆ ಹೊಸ ಹೊಸ ವಸ್ತುಗಳು ತಯಾರಾದವು. ಜನರ ಆಸಕ್ತಿ ಮತ್ತು ಬೇಡಿಕೆಯಿಂದಾಗಿ ಮಾರಾಟ ಮಾಡಹೊರಟರು. ನಾಲ್ಕು ವರ್ಷದಿಂದ ಮನೆಯಲ್ಲಿಯೇ ಕರಕುಶಲ ಗುಡಿ ಕೈಗಾರಿಕೆಯನ್ನು ಆರಂಭಿಸಿದರು. ಇದರಿಂದ ಸುಮಾರು ಐವತ್ತು ಜನರಿಗೆ ಉದ್ಯೋಗ ಸಿಕ್ಕಿದೆ. ಉತ್ಪಾದಿಸಿದ ವಸ್ತುಗಳನ್ನು ಸ್ಥಳೀಯ ಮಾರುಕಟ್ಟೆಗೆ ಕಳಿಸುವುದರಿಂದ ಪ್ರಾರಂಭವಾದುದು ಈಗ ರಾಜ್ಯಮಟ್ಟದವರೆಗೂ ಪ್ರಸಿದ್ಧಿ ಹೊಂದಿದೆ. ಹೊನ್ನಾವರ ತಾಲ್ಲೂಕಿನ ಕೆಲವು ಕಡೆ ಎಕರೆಗಟ್ಟಲೆ ಇದರ ಕೃಷಿ ಪ್ರಾರಂಭಿಸಿದ್ದಾರೆ.



ಲಾವಂಚದ ಪೆಟ್ಟಿಗೆ

ಆಯುರ್ವೇದ ಗಿಡಮೂಲಿಕೆಗಳಲ್ಲಿ ಒಂದಾದ ಲಾವಂಚವು ಹುಲ್ಲಿನ ವರ್ಗಕ್ಕೆ ಸೇರಿದ ಸಸ್ಯ. ಈ ಸಸ್ಯವನ್ನು ಮುಡಿಯಾಳ ಎಂದೂ ಕರೆಯುವುದುಂಟು. ಇದರ ಬೇರು ಸೂಕ್ಷ್ಮವೂ, ವಿಸ್ತಾರವೂ ಆಗಿರುತ್ತದೆ. ಬೇರಿನಿಂದ ಮನಸ್ಸಿಗೆ ಹಿತವೆನಿಸುವ ಸುವಾಸನೆ ಹೊರಹೊಮ್ಮುತ್ತದೆ.

ಆಯುರ್ವೇದ ಶಾಸ್ತ್ರದಂತೆ ಇದರ ಬೇರು ಶೀತಲಕರವೂ, ಕಹಿಯೂ ಆಗಿದ್ದು ಪಿತ್ತಜ್ವರವನ್ನು ಗುಣಪಡಿಸುವ, ಆಯಾಸವನ್ನು ಹೋಗಲಾಡಿಸುವ ಗುಣವುಳ್ಳದ್ದಾಗಿದೆ. ಇದರ ಬೇರಿನಿಂದ ತಯಾರಿಸಿದ ವಸ್ತುಗಳನ್ನು ನೋಡಲು ಅಂದ ಹಾಗೂ ಅದರ ಉಪಯೋಗ ಅದು ಹೊರಸೂಸುವ ಪರಿಮಳಕ್ಕಷ್ಟೇ ಸೀಮಿತವಾಗಿರದೆ ಅದರಿಂದ ತಯಾರಿಸಲಾದ ಪಾದರಕ್ಷೆ (ಚಪ್ಪಲಿ)ಯನ್ನು ಧರಿಸುವುದರಿಂದ ಉಷ್ಣತೆಯನ್ನು ನಿಯಂತ್ರಿಸಿ ದೇಹವನ್ನು ತಂಪಾಗಿಡುವುದರವರೆಗೆ ಹಬ್ಬಿದೆ. ಹಿಮ್ಮಡಿಯಲ್ಲಿ ಬಿರುಕು ಇದ್ದವರು ಈ ಚಪ್ಪಲಿ ಧರಿಸುವುದರಿಂದ ಒಡೆತ, ಬಿರುಕು ಮಾಯವಾಗುತ್ತದೆ. ನಿತ್ಯವೂ ಇದರ ಟೊಪ್ಪಿಯನ್ನು ಧರಿಸುವುದರಿಂದ ದೇಹದ ಉಷ್ಣತೆಯನ್ನು ಕಡಿಮೆ ಮಾಡಿ ತಂಪನ್ನು ನೀಡುತ್ತದೆ. ಇದರ ಬೇರನ್ನು ನೀರಿನಲ್ಲಿ ನೆನೆಸಿ ೫ ನಿಮಿಷ ಬಿಟ್ಟು ಕುಡಿಯುವುದರಿಂದ ದಾಹ ಕಡಿಮೆಯಾಗುವುದಲ್ಲದೆ ದೇಹಕ್ಕೆ ನವಚೈತನ್ಯ ತರುತ್ತದೆ.

ಈ ಲಾವಂಚದ ಬೇರಿನಿಂದ ಏನೇ ಮಾಡಲಿ, ಅದಕ್ಕೊಂದು ಸುವಾಸನೆಯಿರುತ್ತದೆ. ಮೆಟ್ಟುವ ಚಪ್ಪಲಿ, ಹುಡುಗಿಯರ ಹೆಗಲಿಗೆ ಜೋತು ಹಾಕಿಕೊಳ್ಳುವ ಫ್ಯಾಷನ್ ಬ್ಯಾಗು ಸುವಾಸನೆಯಿಂದ ಜನರ ಗಮನವನ್ನು ಸೆಳೆಯುತ್ತವೆ. ಬೀಸುವ ಬೀಸಣಿಕೆ ಹಿತವಾದ ಸುವಾಸನೆಯುಕ್ತ ತಂಗಾಳಿ ತಂದರೆ ಯಾರಿಗೆ ಬೇಡ ?

ಕಲೆಗಳು ಕೆಲವರಿಗೆ ಹುಟ್ಟಿನಿಂದ, ಆಚರಣೆಯಿಂದ, ಮತ್ತೆ ಕೆಲವರಿಗೆ ಪ್ರಯೋಗಗಳಿಂದ ಬಂದಿರುತ್ತವೆ. ಆದರೆ ಕೆಲವರ ಕಲೆ ಅಲ್ಪವಿದ್ದರೂ ಪ್ರಚಾರ ಜಾಸ್ತಿ, ಇನ್ನೂ ಕೆಲವರು ತಾವು ಕಲಿತ ಕಲೆ ಜಾಸ್ತಿ ಇದ್ದರೂ ಪ್ರಚಾರ ಕಡಿಮೆ ಇರುತ್ತದೆ. ಕೆಲವರು ಕಲಿತ ಕಲೆಯನ್ನು ಯಾರಿಗೂ ಹೇಳಿಕೊಡದೆ ಇರುವಂತಹ ವ್ಯಕ್ತಿತ್ವ ರೂಢಿಸಿಕೊಂಡಿರುತ್ತಾರೆ. ಆದರೆ ಮ್ಯಾಥ್ಯೂರವರದು ವಿಶೇಷ ಗುಣ. ಕೃಷಿಯಿಂದಲೇ ಅವರ ಸಂಸಾರ ನೆಮ್ಮದಿಯಿಂದ ಸಾಗುತ್ತಿದೆ. ಆದರೂ ಕಲಿತ ಕಲೆ ತನ್ನಲ್ಲೇ



ಲಾವಂಚದ ಟೊಪ್ಪಿಗೆ

ಉಳಿಯದೆ ಇತರರಿಗೂ ತಲುಪಲಿ, ಎಲ್ಲರಿಗೂ ಉಪಯೋಗವಾಗಲಿ ಎಂಬ ಭಾವನೆ ಅವರದು. ಯಾರು ಕರೆದರೂ ಸಂತೋಷದಿಂದ ತರಬೇತಿ ನೀಡುತ್ತಾರೆ. ಇವರ ಕಲೆ ಅಪಾರ. ಸ್ಥಳೀಯ ಜನರಿಗೆ ಮಳೆಗಾಲದಲ್ಲಿ ಗುಡ್ಡದ ಇಳಿಜಾರು ಪ್ರದೇಶದಲ್ಲಿ ಕೃಷಿಯನ್ನು ಕೈಗೊಳ್ಳುವುದರ ಬಗ್ಗೆ ಪ್ರೋತ್ಸಾಹ ಸಹ ಕೊಟ್ಟಿದ್ದಾರೆ.

ಭಟ್ಕಳದ ಕೆಲವು ಜನರ ಜೀವನ ಮೀನುಗಾರಿಕೆಯೇ. ಅವರು ಕಳೆದ ಎರಡು ವರ್ಷಗಳ ಹಿಂದೆ ಗಾಳ ಹಾಕಿದ ತಕ್ಷಣವೇ ಅವರ ನಿರೀಕ್ಷೆಗಿಂತ ಹೆಚ್ಚಿನ ಮೀನು ಸಿಗುತ್ತಿತ್ತು. ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದರು. ಈಗ ಸಮುದ್ರದ ನೀರಿನ ಇಳಿಮುಖದಿಂದ ಬಂದರು ಪ್ರದೇಶ ವಿಶಾಲ ಭೂಮಿಯಾಗಿದೆ. ಆ ಜಾಗದಲ್ಲಿ ಏಳು ಗಂಟೆ ತನಕ ಕಾದು ಬಲೆ ಹಾಕಿದರೂ ಮೀನು ಸಿಗುವುದು ಕಷ್ಟ. ಕಷ್ಟಪಟ್ಟು ತಂದರೂ ನಿರೀಕ್ಷಿಸಿದ ಬೆಲೆಯೂ ಸಿಗದೆ ಮೀನುಗಾರರು ಹತಾಶರಾಗಿದ್ದಾರೆ. ಇದು ಭಟ್ಕಳದ ಬಂದರಿನ ಒಂದು ಕಥೆಯಾದರೆ, ಇನ್ನೊಂದು ಕಥೆ ಮೀನನ್ನು ಖರೀದಿಸಲು ಅನೇಕ ಊರುಗಳಿಂದ ಬರುವ ಲಾರಿಗಳಿಗೆ ಸಂಬಂಧಿಸಿದ್ದು. ಲಾರಿ ನಿಲ್ಲುವ ಸ್ಥಳದಲ್ಲಿ ಸರಿಯಾದ ಕಾಂಕ್ರೀಟ್ ಇಲ್ಲದೆ ಮಂಜುಗಡ್ಡೆ, ನೀರು ಬಿದ್ದು ಮೀನು ವ್ಯಾಪಾರ ಕೇಂದ್ರ ಕೊಳಚೆ ಗುಂಡಿಯಾಗಿದೆ. ಇದರಿಂದ ಹುಳುಗಳು ಉತ್ಪತ್ತಿಯಾಗಿವೆ. ಜನ ಕಾಲರಾ, ಮಲೇರಿಯಾ ಇನ್ನೂ ಮುಂತಾದ ಕಾಯಿಲೆಗೆ ತುತ್ತಾಗುತ್ತಿದ್ದಾರೆ. ಆದರೂ ಹೊಟ್ಟೆಪಾಡಿಗಾಗಿ ಅಲ್ಲಿಯೇ ಬಡಮೀನುಗಾರರು ಅವಸಾನದ ಅಂಚಿನಲ್ಲಿ ಒದ್ದಾಡುತ್ತಿರುವುದನ್ನು ನೋಡಿ, ಮ್ಯಾಥ್ಯೂ ಇವರಿಗೆ ಹೊಸ ಚೈತನ್ಯ ತುಂಬಿದ್ದಾರೆ; ಮೀನುಗಾರ ಮಹಿಳೆಯರಿಗೆ ಮನೆಯಲ್ಲಿಯೇ ಗೃಹ ಕೈಗಾರಿಕೆ ಮಾಡಲು ಉತ್ತೇಜನ ನೀಡಿದ್ದಾರೆ. ತರಬೇತಿ ನೀಡಿ, ಸ್ವಾವಲಂಬನೆಯಿಂದ ಬದುಕು ನಡೆಸಲೂ ದಾರಿ ತೋರಿಸಿದ್ದಾರೆ. ಮಾರುಕಟ್ಟೆಯ ಬಗ್ಗೆಯೂ ಮಾಹಿತಿ ಕೊಟ್ಟಿದ್ದಾರೆ. ಲಾವಂಚದ ಆಧುನಿಕ ಕೊಡುಗೆ ಇದೆಂದರೆ ತಪ್ಪಲ್ಲ.

ಪುಷ್ಪ, ಎಚ್. ಕೆ.
೫೬೬೧, ೩ನೇ ಕ್ರಾಸ್, ರವೀಂದ್ರನಗರ
ಹಾಸನ - ೫೭೩ ೨೦೧

# ಶಿಲೆಯರಳಿ ಹೂವಾಯಿತು



*ತಿರುವನಂತಪುರದ ಅನಂತಪದ್ಮನಾಭ ಸ್ವಾಮಿ ದೇವಾಲಯ*

ಇಂದಿನ ಇಲೆಕ್ಟ್ರಾನಿಕ್ ಯುಗದಲ್ಲಿ ಟಿವಿ, ಕಂಪ್ಯೂಟರ್‌ಗಳ ಮಾಯಾಜಾಲಕ್ಕೆ ಸಿಲುಕಿ ಮಾನವ ತನ್ನ ಅನುಭವ, ಕೌಶಲ್ಯಗಳನ್ನು, ಸಂಬಂಧ-ಪರಿಚಯಗಳನ್ನು ಸೀಮಿತ ವ್ಯಾಪ್ತಿಗೊಳಪಡಿಸುತ್ತಿರುವುದು ಸಹಜವಾಗುತ್ತಿದೆ. ಆದರೆ ಮೂಲತಃ ಮಾನವ ಸಮಾಜಜೀವಿ. ಬದಲಾವಣೆ, ಹೊಸತನದ ಅನ್ವೇಷಣೆ ಆತನ ಮೂಲಗುಣಗಳಲ್ಲೊಂದು. ಅಂತೆಯೇ ದೈನಂದಿನ ಬದುಕಿನ ಜಂಜಾಟಗಳಿಂದ ದೂರವಾಗಿ ಒಂದಷ್ಟು ದಿನ ಹೊಸ ಪರಿಸರಗಳಿಗೆ ಸಾಗಿ, ವಿಶಾಲ ಪ್ರಪಂಚದ ಅರಿವಿನೊಂದಿಗೆ ಹೊಸ ಹೊಸ ಅನುಭವಗಳನ್ನು, ವಿಚಾರಗಳನ್ನು ಪಡೆದುಕೊಳ್ಳಲು ಪ್ರವಾಸಗಳು ಸಹಕಾರಿಯಾಗುತ್ತವೆ.

ನಮ್ಮ ದೇಶದಲ್ಲಿ ಹಿಮಾಲಯದಿಂದ ಕನ್ಯಾಕುಮಾರಿಯವರೆಗಿನ ಅಸಂಖ್ಯಾತ ಪ್ರೇಕ್ಷಣೀಯ ಸ್ಥಳಗಳಲ್ಲಿ ಪ್ರಖ್ಯಾತ ಪುಣ್ಯಕ್ಷೇತ್ರಗಳೂ ಗಣನೀಯ ಪ್ರಮಾಣದಲ್ಲಿವೆ. ಹಾಗೆ ನೋಡಿದರೆ ಭಾರತದಾದ್ಯಂತ ಒಂದೊಂದು ಸ್ಥಳಕ್ಕೂ ಪೌರಾಣಿಕವಾದ ಹಿನ್ನೆಲೆ ಕಲ್ಪಿಸಲಾಗಿದೆ. ಭಾರತೀಯ ಶಿಲ್ಪಕಲೆಯ ಆಶ್ರಯತಾಣವಾದ ಅವುಗಳನ್ನು ಪೋಷಿಸಿ, ಬೆಳೆಸಲು ಕಾರಣವಾಗಿರುವ ಉತ್ತರದ ನಗರ, ದಕ್ಷಿಣದ ದ್ರಾವಿಡ, ವಿಂಧ್ಯಾ-ಕೃಷ್ಣ ನಡುವಿನ ವೇಸರಾ ಶೈಲಿಯ ದೇವಾಲಯಗಳಲ್ಲಿ ವಿಶ್ವಶ್ರೇಷ್ಠವಾದ ಕೆತ್ತನೆ ಶಿಲ್ಪಗಳು ಕಾಣಸಿಗುತ್ತವೆ. ಇವು ಎಷ್ಟು ಸಂಖ್ಯೆಯಿಂದ ಆಸ್ತಿಕರನ್ನು ಆಕರ್ಷಿಸುತ್ತವೆಯೋ ಅದಕ್ಕೂ ಮಿಗಿಲಾಗಿ ತಮ್ಮ ವಾಸ್ತು, ಶಿಲ್ಪಕಲಾ ಸಮೃದ್ಧತೆಯಿಂದ ದೇಶಿ, ವಿದೇಶಿ ಪ್ರವಾಸಿಗರನ್ನು ಕೈಬೀಸಿ ಕರೆಯುತ್ತದೆನ್ನುವುದೂ ಅಷ್ಟೇ ಸತ್ಯ. ಅಂತೆಯೇ ಇತ್ತೀಚಿನ ಪ್ರವಾಸವೊಂದು ಸೊಗಸಾದ ಅನುಭವಗಳನ್ನು ನೀಡುವುದರ ಜೊತೆ ಜೊತೆಗೇ ಶಿಲೆಯರಳಿ ಹೂವಾದ ಬಗೆಯನ್ನು ಪರಿಚಯಿಸಿಕೊಳ್ಳಲೂ ಸಹಾಯಕವಾಯಿತು.

ನಮ್ಮ ನೆರೆರಾಜ್ಯ ಕೇರಳದ ರಾಜಧಾನಿ ತಿರುವನಂತಪುರದ ಅನಂತಪದ್ಮನಾಭ ದೇವಾಲಯವು 'ಅನಂತ ಶಯನಂ' ಎಂದೇ ಪ್ರಸಿದ್ಧವಾಗಿದ್ದು, ಶಯನ ಸ್ಥಿತಿಯಲ್ಲಿರುವ ಮೂರ್ತಿಯನ್ನು ಶಿರ, ದೇಹ, ಪಾದವೆಂದು ವೀಕ್ಷಿಸಬೇಕಾಗುತ್ತದೆ. ಇಲ್ಲಿನ ಮೂಲ ವಿಗ್ರಹ ಪ್ರತಿಷ್ಠಾಪನೆಯ ಕುರಿತು ನಿಖರ ಮಾಹಿತಿಗಳು ಲಭ್ಯವಿಲ್ಲದಿದ್ದರೂ ಸುಮಾರು ೫೦೦೦ ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದಿರಬೇಕೆಂಬ ಐತಿಹ್ಯ ಪ್ರಚಲಿತವಾಗಿದೆ! ತಾಳೆಗರಿ ಪತ್ರದಲ್ಲಿರುವ ಅನಂತಶಯನ ಮಹಾತ್ಮೆಯೆಂಬ ಗ್ರಂಥ ಹಾಗೂ ದಂತಕತೆಯೊಂದರ ಪ್ರಕಾರ ಕಲಿಯುಗದ ೯೫೦ನೆಯ ದಿನ ದಿವಾಕರ ಮುನಿಯೆಂಬ ತುಳು ಬ್ರಾಹ್ಮಣ ಸಾಧುವಿನಿಂದ ಇದು ಸ್ಥಾಪಿಸಲ್ಪಟ್ಟಿತು! ಪುರಾವೆಯೋ ಎಂಬಂತೆ ಈಗಲೂ ತುಳು ಬ್ರಾಹ್ಮಣರು ಇಲ್ಲಿನ ಪೂಜಾರಿಗಳಾಗಿರುವುದನ್ನು ಬೆಟ್ಟು ಮಾಡಿ ತೋರಿಸಲಾಗುತ್ತದೆ. ಮತ್ತೊಂದು ವೃತ್ತಾಂತವು ನಂಬೂದರಿ ಬ್ರಾಹ್ಮಣ, ಪ್ರಸಿದ್ಧ ಸನ್ಯಾಸಿ ವಿಲ್ವಾ ಮಂಗಳತುವಿಗೆ ಸಂಬಂಧಿಸಿದ್ದು, ಈಗಲೂ ಪ್ರಾತಃ ಕಾಲದ ಪುಷ್ಪಾಂಜಲಿ ಪೂಜೆಯು ಇಲ್ಲಿ ನಂಬೂದರಿ ಬ್ರಾಹ್ಮಣರಿಂದಲೇ ನಡೆಯುತ್ತದೆ. ಅಲ್ಲದೆ ಕಣ್ಣೂರಿನ ಅನಂತಪುರದ ಪದ್ಮನಾಭಸ್ವಾಮಿ ದೇಗುಲಕ್ಕೂ ತಿರುವನಂತಪುರದ ಈ ದೇಗುಲಕ್ಕೂ ಪೌರಾಣಿಕವಾದ ಸಂಬಂಧವಿದೆಯೆಂದು ಹೇಳಲಾಗುತ್ತಿದೆ. ಭಾಗವತದಲ್ಲಿ ಬಲರಾಮನು ಭೇಟಿ ನೀಡಿದ್ದ ಸ್ವನಂದುರಪುರಂ - ತ್ರಿವೇಂಡ್ರಂ ಬಗ್ಗೆಯೂ, ವೈಷ್ಣವ ಸಂತ ನಮ್ಮಾಳ್ವಾರ್ ಕೃತಿಯಲ್ಲಿ ದೇವಾಲಯದ ಬಗ್ಗೆಯೂ ಉಲ್ಲೇಖವಿದೆ. ಕ್ರಿ.ಶ. ೧೩೩೫-೮೪ರ ಅವಧಿಯಲ್ಲಿ ವೀರ ಮಾರ್ತಾಂಡ ವರ್ಮನ ಮೇಲ್ವಿಚಾರಣೆಗೆ ಒಳಪಟ್ಟ ದೇವಾಲಯವು ಬಳಿಕ ಹಲವಾರು ಮಹತ್ವದ ಬದಲಾವಣೆಗಳಿಗೆ ಒಳಗಾಗಿ ಬೆಳವಣಿಗೆ ಹೊಂದುತ್ತಾ ಬಂದಿತು. ೧೬೩೦ರಲ್ಲಿ ನವೀಕರಣಗೊಂಡರೂ, ಉತ್ಸವ, ಆಚರಣೆ, ವಿಧಿ-ವಿಧಾನಗಳು ಸಂಪ್ರದಾಯದಂತೆಯೇ ಮುಂದುವರೆಯುತ್ತಿವೆ. ಪ್ರಸ್ತುತ ಗರ್ಭಗುಡಿಯಲ್ಲಿರುವ ವಿಗ್ರಹವು ೧೨,೦೦೦ ಸಾಲಿಗ್ರಾಮಗಳಿಂದ ವಿನ್ಯಾಸಗೊಳಿಸಿ ವಿಶೇಷ ಆಕಾರಕ್ಕೆ ತಕ್ಕಂತೆ 'ಕಡು ಶರ್ಕರ'ದಿಂದ (೬೦ ವಿಶೇಷ ವಸ್ತುಗಳ ಮಿಶ್ರಣ) ರಚಿಸಲ್ಪಟ್ಟಿದೆ. ಇಲ್ಲಿರುವ ವಟ್ಟೈಕ್ಕಲ್ ಮಂಟಪವು ಏಕಶಿಲಾ ರಚನೆಯಾಗಿದ್ದು, ದೇವಮಂದಿರವನ್ನು ಸುತ್ತುವರೆದ ಬೃಹತ್ ಆಯತಾಕಾರದ ಪ್ರಾಂಗಣ ಶಿಲೆಯಿಂದ ರಚಿತವಾಗಿದೆ. ಕರದಲ್ಲಿ ಹಣತೆ ಹಿಡಿದ ಶಿಲಾಬಾಲಿಕೆಯರ ಸಾಲು ಮೋಹಕ. ನಮ್ಮ ಹಂಪೆಯಲ್ಲಿರುವಂತೆ ಇಲ್ಲಿಯೂ ಸಪ್ತಸ್ವರಗಳನ್ನು ಹೊಮ್ಮಿಸುವ ಮಂಟಪವೊಂದಿದೆ. ಉಳಿದಂತೆ ಪ್ರಾಚೀನ ಶಿಲಾಕೆತ್ತನೆಗಳು, ಅಪೂರ್ವ ವಿಗ್ರಹಗಳು ಮನಸೆಳೆಯುತ್ತವೆ.

ತಿರುವನಂತಪುರದ ಮತ್ತೊಂದು ಆಕರ್ಷಣೆ ಅಲ್ಲಿನ ಪ್ರಸಿದ್ಧ ವಸ್ತುಸಂಗ್ರಹಾಲಯ, ಅದರ ಜೊತೆಗಿರುವ ಮೃಗಾಲಯ ಹಾಗೂ ಚಿತ್ರಾಲಯ ಆರ್ಟ್ ಗ್ಯಾಲರಿ. ಮಟ ಮಟ ಮಧ್ಯಾಹ್ನ ಹನ್ನೆರಡು ಗಂಟೆಗೆ ಕೋವಳಂ ಬೀಚ್ ತಲುಪಿದ ನಮ್ಮ ತಂಡಕ್ಕೆ ಸಮುದ್ರ ದರ್ಶನದ ಹುಮ್ಮಸ್ಸು. ಬೀಸಿ ಬರುವ ಅಲೆಗಳೊಂದಿಗೆ ಚೆಲ್ಲಾಟವಾಡುವ ತವಕ. ಬಿಸಿ ಮರಳ ನಡುವೆ ಉಪ್ಪು ನೀರಿನ ಸೇಚನ. ಜೊತೆಗೇ ನಮ್ಮ ಕೆಮರಾಗಳಿಗೊಂದಿಷ್ಟು ಕೆಲಸ.

ಮುಂದೆ ನಾಗರಕೋಯಿಲ್‌ನಿಂದ ಏಳು ಕಿ.ಮೀ.ಗಳಷ್ಟು ದೂರದಲ್ಲಿರುವ ಪುಟ್ಟ ಗ್ರಾಮ ಶುಚೀಂದ್ರಂ ತಲುಪಿದಾಗ ನೆತ್ತಿಗೇರಿದ್ದ ಸೂರ್ಯ ನಿಧಾನವಾಗಿ ಪಡುವಣದತ್ತ ಸಾಗುತ್ತಿದ್ದ. ಇಲ್ಲಿನ ಸ್ಥಾನು-ಮಲ್-ಅಯ್ಯನ್ (ಶಿವ - ವಿಷ್ಣು - ಬ್ರಹ್ಮ)ನಿಗೆ ಅರ್ಪಿತವಾದ ದೇವಾಲಯ ಕೇವಲ ಪೌರಾಣಿಕ ಕತೆಗಳಿಂದ ಮಾತ್ರವಲ್ಲ, ಸಮೃದ್ಧ ವಾಸ್ತುಶಿಲ್ಪ, ಕೆತ್ತನೆಗಳಿಂದಲೂ ಶ್ರೀಮಂತವಾಗಿದ್ದು, ಪ್ರವಾಸಿಗರನ್ನು ಆಕರ್ಷಿಸುತ್ತದೆ. ೧೩೪ ಅಡಿ ಎತ್ತರದ ಮನೋಹರ ಗೋಪುರ ಕೈಬೀಸಿ ಕರೆದರೆ ವ್ಯಾಕರಣದ ತರಗತಿಗಳಲ್ಲಿ ಮಾತ್ರ ಕೇಳಿ ತಿಳಿದಿದ್ದ ಹಿರಿದು ಬಾಗಿಲು - ಹೆಬ್ಬಾಗಿಲು ಇಲ್ಲಿ ಪ್ರವೇಶದ್ವಾರದಲ್ಲಿಯೇ ಕಾಣಸಿಕ್ಕಿತ್ತು. ಸೊಗಸಾದ ಕುಸುರಿ ಕಾರ್ಯವುಳ್ಳ ೨೪ ಅಡಿ ಎತ್ತರದ ಬೃಹತ್ ಬಾಗಿಲದು. ಮುಂದೆ ನಮ್ಮ ಗೈಡ್ 'ತಮಿಳ್ಗನ್ನಡ'ದಲ್ಲಿ ಅಲ್ಲಿನ ವೈಶಿಷ್ಟ್ಯವನ್ನು ವಿವರಿಸುತ್ತಾ ಸಾಗಿದಂತೆ ದಕ್ಷಿಣ ಭಾರತದ ದ್ರಾವಿಡ ಶೈಲಿಯ ಇತರ ಪ್ರಸಿದ್ಧ ದೇಗುಲಗಳಿಗಿಂತ ಕಲಾಸಿರಿತನದಲ್ಲಿ ತೀರಾ ಬಡತನವಾದುದೇನಲ್ಲದ, ಆದರೂ ಅವುಗಳಷ್ಟು ಪ್ರಸಿದ್ಧಿ ಹೊಂದಿರದ ದೇವಾಲಯವೊಂದರ ಪರಿಚಯ ನಮಗಾಯಿತು. ಇಲ್ಲಿನ ವಸಂತ ಮಂಟಪದಲ್ಲಿ ಬೇರೆಡೆಗಳಂತಲ್ಲದೆ ನವಗ್ರಹಗಳು ಮೇಲ್ಛಾವಣಿಯಲ್ಲಿ ಪ್ರತಿಷ್ಠಾಪಿತವಾಗಿದ್ದು, ಹನ್ನೆರಡು ರಾಶಿಗಳಿಂದ ಸುತ್ತುವರಿಯಲ್ಪಟ್ಟಿವೆ. ದೇವಾಲಯದಲ್ಲಿ ಸಾಗುತ್ತಿದ್ದಂತೆ ಉಳಿದೆಲ್ಲಾ ದೇಗುಲಗಳಲ್ಲಿರುವಂತೆ ಅಗಾಧ ಸಂಖ್ಯೆಯ ದೇವತೆಗಳನ್ನು ವಿಗ್ರಹ, ಕೆತ್ತನೆ ಹೀಗೆ ನಾನಾ ವಿಧದಲ್ಲಿ ಬಿಂಬಿಸಿರುವುದು ಕಂಡುಬರುತ್ತದೆ. ಒಂದೆಡೆಯಲ್ಲಿ ಐದನೇ ಶತಮಾನದ್ದೆನ್ನಲಾದ ಶಿಲಾಶಾಸನಗಳು ಕಂಡುಬಂದರೆ ಇನ್ನೊಂದೆಡೆಯಲ್ಲಿ ಕಾಣಸಿಗುವ ವೇನಾಡ್ ರಾಜರುಗಳಿಬ್ಬರ ಮಾನವಗಾತ್ರದ ಏಕಶಿಲಾ ವಿಗ್ರಹಗಳು ಸಜೀವವೋ ಎಂಬ ಭ್ರಮೆ ಮೂಡಿಸುತ್ತವೆ. ಗರುಡ ಮಂಟಪದಲ್ಲಿರುವ ತಿರುಮಲೈ ನಾಯಕ್ಕರ್ ಪ್ರತಿಮೆ ಅಂದಿನ ಶಿಲ್ಪಕಲಾ ಕೌಶಲ್ಯಗಳಿಗೊಂದು ಪುಟ್ಟ ಉದಾಹರಣೆ. ಪ್ರತಿಮೆಯ ಮೂಗಿನ ಬಲ ಹೊಳ್ಳೆಯಲ್ಲಿ

**ದುರ್ಗಾಪ್ರವೀಣ ಎಂ. ಎ.**

ಹಾಕಿದ ದಾರ ಎಡಕಿವಿಯಲ್ಲೂ, ಬಲ ಕಿವಿಯಲ್ಲಿ ತೂರಿಸಿದ್ದು ಎಡದಿಂದಲೂ ಬರುವಂತಹ ಸುಂದರ ರಚನೆ ಇದು. ಇಲ್ಲಿಯ ಅಲಂಕಾರ ಮಂಟಪದಲ್ಲಿರುವ ನಾಲ್ಕು ಏಕಶಿಲಾ ಸ್ತಂಭಗಳು ಮಧುರನಾದ ಹೊಮ್ಮಿಸುವ ಸಂಗೀತ ಶಿಲೆಗಳಾಗಿವೆ. ಚೆಂಪಕರಾಮನ್ ಮಂಟಪದಲ್ಲಿ ನಾಲ್ಕು ಸಾಲುಗಳಲ್ಲಿರುವ ೩೨ ಸ್ತಂಭಗಳು ವಿಷ್ಣು, ಶಿವ ಪುರಾಣಗಳನ್ನು ತೆರೆದಿಡುತ್ತವೆ. ರಾಮಾಯಣದ ಸುಂದರ ಕಾಂಡದಲ್ಲಿ ನಿರೂಪಿತವಾಗಿರುವಂತೆ ಅಶೋಕವನದಲ್ಲಿ ಹನುಮಂತನು ಸೀತೆಗೆ ತೋರಿದ ಭಂಗಿಯ ೧೮ ಅಡಿ ಎತ್ತರದ ಭವ್ಯ ಹನುಮದ್ವಿಗ್ರಹ ದೇವಾಲಯದ ಪ್ರಮುಖ ಆಕರ್ಷಣೆಗಳಲ್ಲೊಂದು. ಮುಂದೆ ಪೂರ್ವದಲ್ಲಿರುವ ಚಿತ್ರಸಭೆಗೆ ಏಕಶಿಲಾಗಜಗಳೆರಡು ಸ್ವಾಗತಿಸುತ್ತವೆ. ದೇವರು ನಮ್ಮೊಳಗೇ ಇದ್ದಾನೆಂಬ ಸತ್ಯವನ್ನು ಸೂಚಿಸಲೋ ಎಂಬಂತೆ ಇಲ್ಲಿಯ ಗರ್ಭಗುಡಿಯಲ್ಲಿ ವಿಗ್ರಹದ ಬದಲಾಗಿ ಕೇವಲ ನಮ್ಮ ಪ್ರತಿಬಿಂಬವನ್ನು ತೋರುವ ದರ್ಪಣ ಮಾತ್ರವಿದೆ. ಹನ್ನೆರಡೂವರೆ ಅಡಿಗಳ ದೈತ್ಯ ನಂದಿವಿಗ್ರಹವೂ ದೇವಳದಲ್ಲಿದ್ದು, ಸ್ಥಾನುಮಲ್ಯನ ವಿಗ್ರಹವು ಸ್ವರ್ಣ ಕವಚವನ್ನು ಹೊಂದಿದೆ. ಕ್ರಿ. ಶ. ೧೪೭೧ರಿಂದ ೧೮೯೯ರ ನಡುವೆ, ಪಾಂಡ್ಯ, ಚೇರ, ಚೋಳ ರಾಜರ ಕೊಡುಗೆಯೊಂದಿಗೆ ಬೆಳೆದ ಈ ದೇವಳದಲ್ಲಿರುವ ವೃಕ್ಷವೊಂದರ ಭಾಗಗಳನ್ನು ಕಲ್ಕತ್ತಾ, ಲಂಡನ್‌ಗಳಲ್ಲಿ ಪರೀಕ್ಷಿಸಿ ಅದು ೨೦೦೦ ವರ್ಷಗಳಷ್ಟು ಪುರಾತನವಾದುದು ಎಂದು ನಿರ್ಣಯಿಸಿದ್ದಾರೆ. ಈ ದೇವಾಲಯಕ್ಕಿರುವ ಪೌರಾಣಿಕ ಹಿನ್ನೆಲೆಗಳು ಕಡಿಮೆಯೇನಲ್ಲ. ಪಾಂಡವರು ತಮ್ಮ ವನವಾಸದ ಸಮಯದಲ್ಲಿ ಜ್ಞಾನಾರಣ್ಯಕ್ಕೆ (ಶುಚೀಂದ್ರಂ) ಭೇಟಿ ನೀಡಿದ್ದರೆಂದೂ, ಇಲ್ಲಿನ ಜಯಂತೀಶ್ವರ ದೇಗುಲಗಳಲ್ಲಿ ಪೂಜೆ ಸಲ್ಲಿಸಿದ್ದರೆಂದೂ, ಅಂದಿನಿಂದ ಇವುಗಳನ್ನು ಪಂಚ ಪಾಂಡವ ದೇಗುಲಗಳೆಂದು ಕರೆಯುತ್ತಾರೆಂದೂ ಹೇಳಲಾಗುತ್ತದೆ. ಇಂತಹ ಕಥೆಗಳು ನೂರಾರು ದೇಗುಲಗಳ ಬಗ್ಗೆ ಕೇಳಿಬಂದಿವೆ. ಅತ್ರಿ ಮುನಿಯ ಪತ್ನಿ ಅನುಸೂಯಾಳ ಪಾತಿವ್ರತ್ಯ ಪರೀಕ್ಷೆಗೆ ಬಂದ ತ್ರಿಮೂರ್ತಿಗಳು ಬಳಿಕ ಇಲ್ಲಿ ಮೂರು ಸ್ವಯಂಭೂಲಿಂಗಗಳ ರೂಪದಲ್ಲಿ ನೆಲೆನಿಂತರು ಎನ್ನುವುದೊಂದು ಕತೆ. ಇಂತಹ ಪರೀಕ್ಷೆಗಳಲ್ಲಿ ತೊಡಗುತ್ತಲೇ ಇದ್ದ ಈ ದೇವತೆಗಳು ಯಾವ ಪುರುಷಾರ್ಥ ಸಾಧಿಸಿಕೊಂಡರೆಂಬುದು ಸ್ಪಷ್ಟವಿದೆ! ಇನ್ನೊಂದು ಕತೆ ಋಷಿ ಗೌತಮ – ಅಹಲ್ಯ – ಇಂದ್ರರಿಗೆ ಸಂಬಂಧಿಸಿದ್ದು. ಗೌತಮನಿಂದ ಶಾಪ ಪಡೆದ ಇಂದ್ರ ಜ್ಞಾನಾರಣ್ಯದಲ್ಲಿ ಶಾಪ ವಿಮೋಚನೆಗೊಂಡುದರಿಂದ ಅದು ಶುಚೀಂದ್ರಂ ಎಂದಾಯಿತೆಂದು ತಿಳಿಸುತ್ತದೆ. ಪ್ರತೀ ರಾತ್ರಿ ಇಂದ್ರ ಇಲ್ಲಿ ಅರ್ಧಜಾಮ ಪೂಜೆಗೈಯ್ಯುತ್ತಾನೆ ಎಂಬ ಪ್ರತೀತಿಯೂ ಇದೆ. ಅವನು ಬೇರೆ ಇನ್ನೆಷ್ಟು ಸ್ಥಳಗಳಿಗೆ ಏಕಕಾಲದಲ್ಲಿ ಹೋಗುತ್ತಾನೆಂಬ ಮಾಹಿತಿ ಸ್ವಾರಸ್ಯವಾಗಿರುತ್ತದೆ.

ಶುಚೀಂದ್ರಂನಿಂದ ದಕ್ಷಿಣದ ತುತ್ತತುದಿ ಕನ್ಯಾಕುಮಾರಿಯು ಕೇವಲ ೮ ಮೈಲುಗಳಷ್ಟು ದೂರದಲ್ಲಿದ್ದು, ಇವೆರಡಕ್ಕೂ ಪೌರಾಣಿಕವಾದ ಸಂಬಂಧವನ್ನು ಕಲ್ಪಿಸಲಾಗಿದೆ. ಶುಚೀಂದ್ರಂನಲ್ಲಿ ಸ್ಥಾಣುವಿನ ಲಿಂಗಕ್ಕೆ ಮಾಡಿದ ಅಭಿಷೇಕ ಕನ್ಯಾಕುಮಾರಿಯ



*ಕನ್ಯಾಕುಮಾರಿಯಲ್ಲಿರುವ ವಿವೇಕಾನಂದ ಮಂಟಪ*

ಸ್ಥಾಣು ತೀರ್ಥದಲ್ಲಿ ಸಮುದ್ರಕ್ಕೆ ಸೇರುತ್ತದೆ ಎನ್ನಲಾಗಿದೆ. ಬಾಣಾಸುರ ವಧೆಗಾಗಿ ಜನ್ಮತಾಳಿದ ಕುಮಾರಿ ಆಕೆಯನ್ನು ವರಿಸಬಯಸಿದ ಶಿವ (ಸ್ಥಾನು) ''ಕಣ್ಣಿಲ್ಲದ ತೆಂಗು, ಗೆಣ್ಣಿಲ್ಲದ ಕಬ್ಬು, ತಂತುವಿಲ್ಲದ ವೀಳ್ಯದೆಲೆಗಳನ್ನು ಬೆಳಗಾಗುವುದರೊಳಗಾಗಿ ತರಬೇಕೆಂಬ'' ಷರತ್ತು ಹಾಕಿದಳಂತೆ. ನಾರದನ ತಂತ್ರದಿಂದಾಗಿ ವಿವಾಹ ನಿಂತು ಹೋಯಿತಂತೆ. ಇದು ಪುರಾಣ ಕತೆಯ ಎಳೆ. ಕನ್ಯಾಕುಮಾರಿಯ ಮಂದಿರ, ದೇವಿಯ ಪಾದದ ಗುರುತಿರುವ ಶ್ರೀಪಾದ ಶಿಲೆ, ಪರಶುರಾಮ ಪ್ರತಿಷ್ಠಿತ ವಿಘ್ನೇಶ್ವರ ಮಂದಿರ, ಭದ್ರಕಾಳಿ ತೀರ್ಥ, ಬಾಣ ತೀರ್ಥ ಇತ್ಯಾದಿಗಳು ಒಂದೊಂದೂ ವಿವರವಾದ ಹಿನ್ನೆಲೆಯನ್ನು ಹೊಂದಿರುವಂತಹವುಗಳು.

ಬಹುತೇಕ ಎಲ್ಲಾ ಪ್ರಸಿದ್ಧ ಸ್ಥಳಗಳಲ್ಲಿರುವಂತೆ ಕನ್ಯಾಕುಮಾರಿಯಲ್ಲಿಯೂ ಬಂದು ಇಳಿದಾಕ್ಷಣ ತಮ್ಮಲ್ಲಿರುವ ವಿದೇಶಿ ವಸ್ತುಗಳನ್ನು ತೋರಿಸಿ ಖರೀದಿಸುವಂತೆ ಒತ್ತಾಯಪಡಿಸುವ ಮಂದಿ, ಪ್ರವಾಸಿಗರ ಊರು ಭಾಷೆಗಳನ್ನರಿತು ಅವರದೇ ಭಾಷೆಯಲ್ಲಿ ವ್ಯವಹರಿಸುವ, ವ್ಯಾಪಾರ ಕುದುರಿಸಿಕೊಳ್ಳುವ, ವ್ಯವಹಾರ




ಚತುರರು ಅಡಿಗಡಿಗೂ ಸಿಗುತ್ತಿರುತ್ತಾರೆ. ಅಂದು ಸಂಜೆ ಅಸ್ತಮಾನದ ಅಪೂರ್ವ ದೃಶ್ಯ ಸಿಗದಂತೆ ಮೋಡದ ಮರೆಯಲ್ಲಿ ಅರಬ್ಬೀ ಸಮುದ್ರದಲ್ಲಿ ಅಸ್ತಂಗತನಾಗಿದ್ದ ಭಾಸ್ಕರನು ಮರುದಿನ ಮುಂಜಾನೆ ಬಂಗಾಳಕೊಲ್ಲಿಯಿಂದ ಉದಯಿಸಿದ್ದ. ನಾವು ತರಾತುರಿಯಿಂದ ಧಾವಿಸಿದ್ದೆವು ಸೂರ್ಯೋದಯದ ಆ ಮನೋಹರ ದೃಶ್ಯವನ್ನು ಕೆಮರಾ ಕಂಗಳಲ್ಲಿ ಸೆರೆಹಿಡಿಯಲು. ಸ್ವಾಮಿ ವಿವೇಕಾನಂದರ ಭವ್ಯ ಸ್ಮಾರಕವಿರುವ ವಿವೇಕಾನಂದ ಬಂಡೆಗೆ ತಲುಪಲು ಬೋಟುಗಳ ವ್ಯವಸ್ಥೆಯಿದ್ದು ಅಲ್ಲಿಗೆ ಸಾಗುವ ಹಾದಿಯಲ್ಲಿ ಇತ್ತೀಚೆಗಷ್ಟೇ ಸ್ಥಾಪಿತವಾಗಿರುವ ತಿರುವಳ್ಳುವರ್ ಪ್ರತಿಮೆಯಿರುವ ಬಂಡೆಗೊಂದು ಕ್ಷಿಪ್ರಭೇಟಿಯನ್ನೂ ಬೋಟುಗಳು ನೀಡುತ್ತವೆ.

ಭಾರತೀಯರಿಗೆ ತಮ್ಮ ಆತ್ಮಗೌರವ, ರಾಷ್ಟ್ರೀಯ ಗೌರವ, ಗಾಂಭೀರ್ಯಗಳನ್ನು ಮರುಕಳಿಸಲು ಶ್ರಮಿಸಿದ ವಿವೇಕಾನಂದರು ೧೮೯೨ರ ಡಿಸೆಂಬರ್ ೨೫, ೨೬, ೨೭ರ ಸುಮಾರಿಗೆ ಭರತವರ್ಷದ ಭೂತ, ವರ್ತಮಾನ, ಭವಿಷ್ಯದ ಬಗ್ಗೆ ಧ್ಯಾನಿಸಿ, ಅದರ ಅಧೋಗತಿಗೆ ಕಾರಣ, ಉನ್ನತಿಯ ಮಾರ್ಗವನ್ನು ಕಂಡುಕೊಂಡಿದ್ದ ತಾಣಕ್ಕೆ ನಾವು ತಲುಪಿದ್ದೆವು. ಪೌರಾಣಿಕ ಹಿನ್ನೆಲೆಯ ಈ ಶ್ರೀಪಾದ ಶಿಲೆಯಲ್ಲಿ ವಿವೇಕಾನಂದರ ಭವ್ಯ ವಿಗ್ರಹ, ಪ್ರಶಾಂತ ಧ್ಯಾನ ಮಂಟಪವಲ್ಲದೆ, ಪುಸ್ತಕ ಭಂಡಾರಗಳೂ ಇವೆ. ತಮ್ಮ ಸಿಂಹವಾಣಿಯಿಂದ ಜನತೆಯನ್ನು ಬಡಿದೆಬ್ಬಿಸಿದ್ದ ಸ್ವಾಮಿ ವಿವೇಕಾನಂದರಿಗೆ ಸ್ಫೂರ್ತಿ ನೀಡಿದ್ದ ಆ ಪ್ರಶಾಂತ ವಾತಾವರಣವು ಸುತ್ತಲೂ ಅಪ್ಪಳಿಸುತ್ತಿದ್ದ ಸಾಗರ ತೆರೆಗಳ ನಡುವೆ ಅದೇನೋ ಹುಮ್ಮಸ್ಸನ್ನು ತುಂಬುವಂತಿತ್ತು. ಕನ್ಯಾಕುಮಾರಿಯಲ್ಲಿ ತ್ರಿವೇಣಿ ಸಂಗಮ, ಶಂಕರಾಚಾರ್ಯ ಪಾರ್ಕ್‌ಗಳೊಂದಿಗೆ ಗಮನ ಸೆಳೆಯುವುದು ಸತ್ಯ ಅಹಿಂಸೆಗಳ ಸಾಕಾರಮೂರ್ತಿ ಗಾಂಧೀಜಿಯ ಸ್ಮಾರಕ. ಗಾಂಧೀ ಮಂಟಪದಲ್ಲಿ ಹಲವಾರು ಅಮೂಲ್ಯವಾದ ಛಾಯಾಚಿತ್ರಗಳೂ ಗಾಂಧೀಜಿ ಸಂದೇಶವೂ ಇದ್ದು, ೧೯೪೮ರ ಫೆಬ್ರವರಿ ೧೨ರಂದು ಅವರ ಚಿತಾಭಸ್ಮವಿರಿಸಿದ್ದ ತಾಣವೂ ಇದಾಗಿದೆ.

ದುರ್ಗಾಪ್ರವೀಣ ಎಂ. ಎ.
ಪುತ್ತೂರು

# ಪೇಟೆಯ ಕಾವು : ಪ್ರಕೃತಿಯ ಸಾವು

ಅದೊಂದು ತಜ್ಞ ಸಮಾವೇಶ. ವಿಶ್ವ ವ್ಯಾಪಾರ ಒಪ್ಪಂದದಿಂದ, ಜಾಗತೀಕರಣದಿಂದ ಆಗುವ ಸಾಧಕ ಬಾಧಕಗಳ ಕುರಿತ ವಿಚಾರಗೋಷ್ಠಿ.

ತಜ್ಞರ ಪ್ರಕಾರ ವಿಶ್ವ ವ್ಯಾಪಾರೀಕರಣ ಇಂದು ಅನಿವಾರ್ಯವಂತೆ. ಇದನ್ನು ಹೊರತು ಪಡಿಸಿ ಭಾರತ ಸ್ವತಂತ್ರವಾಗಿ ನಿರ್ವಹಿಸುವುದು ಸಾಧ್ಯವಿಲ್ಲವಂತೆ. ಭಾರತ ವಿಶ್ವಮಾನ್ಯವಾಗ ಬೇಕಾದರೆ ಇಲ್ಲಿನ ವಸ್ತುಗಳು ಅಲ್ಲಿಗೆ ಹೋಗಬೇಕಂತೆ; ಅಲ್ಲಿನ ವಸ್ತುಗಳು ಇಲ್ಲಿಗೆ ಬರಬೇಕಂತೆ. ಆದರೆ ಈ ಒಪ್ಪಂದದಲ್ಲಿ ಭಾರತಕ್ಕೆ, ವಿಶೇಷವಾಗಿ ಭಾರತದ ಕೃಷಿಗೆ, ತೊಂದರೆಯಾಗುವ ಕೆಲವು ಅಂಶಗಳಿವೆಯಂತೆ. ಇಂಥಾ ದೋಷಗಳನ್ನು ತೆಗೆದುಹಾಕುವ ಕುರಿತು ಭಾರತ ಪ್ರಯತ್ನಿಸ ಬೇಕಂತೆ. ಒಟ್ಟಾಗಿ ಭಾರತದ ಸಮೂಹ ಪ್ರಜ್ಞೆ ಜವಾಬ್ದಾರಿಯುತವಾಗಿ ಕೆಲಸ ಮಾಡದ್ದರಿಂದ, ಗಹನ, ಗಂಭೀರವಾದ ವ್ಯಾಪಾರೀ ಒಪ್ಪಂದಗಳ ಕುರಿತು ಅಧ್ಯಯನ ಮಾಡದ್ದರಿಂದ ಹೀಗಾಗಿದೆಯಂತೆ. ಈ ದೋಷಗಳನ್ನು ತೆಗೆದುಹಾಕಿದರೆ, ನಾವು ಕೂಡ ಬಲು ವಿಧ ವಸ್ತುಗಳನ್ನು ನಿರ್ಯಾತ ಮಾಡಿ, ಡಾಲರ್ ಸಂಪಾದಿಸಿ ಶ್ರೀಮಂತರಾಗಬಹುದಂತೆ. ಬಲುವಿಧ ತಂತ್ರಜ್ಞಾನವನ್ನು ಆಯಾತ ಮಾಡಿ ನಮ್ಮ ನಿರ್ಯಾತ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಬಹುದಂತೆ.

**ನಿಜವಾದ ಪರಿಣಾಮ**

ವ್ಯಾಪಾರ ಹೆಚ್ಚಾಗುವುದು ಅಭಿವೃದ್ಧಿಯ ಲಕ್ಷಣ ಅಲ್ಲ. ವ್ಯಾಪಾರವು ಕೊರತೆಯ ಸಂಕೇತವೇ ಹೊರತು ಸಮೃದ್ಧಿಯ ಸೂಚಿ ಅಲ್ಲ. ವ್ಯಾಪಾರ ಅತ್ಯಂತ ಅನಿವಾರ್ಯ ವಸ್ತುಗಳ ಕುರಿತಾಗಿ ಮಾತ್ರ ಇರಬೇಕು. ಅದು ವರ್ಷದಿಂದ ವರ್ಷಕ್ಕೆ ಹೆಚ್ಚಲಾಗದು. ಬದಲು ಕಡಿಮೆಯಾಗಬೇಕು. ವೈವಿಧ್ಯಗಳ ತವಕದಿಂದ ವ್ಯಕ್ತಿ ಇನ್ನೊಂದೆಡೆಯ ವಸ್ತುವನ್ನು ಖರೀದಿ ಮಾಡುತ್ತಾನೆ ಎಂತಲೇ, ವ್ಯಾಪಾರ ನಡೆಯುತ್ತದೆ. ಆದರೆ ಇಂಥಾ ವ್ಯಾಪಾರ ಮುಂದುವರಿಯುವುದರಿಂದ ಒಂಟಿ ಸಂಸ್ಕೃತಿ, ಒಂಟಿ ಬೆಳೆ ಪದ್ಧತಿ, ಲಾಭದ ದುರಾಸೆ ಹೆಚ್ಚುತ್ತಾ ಹೋಗುತ್ತದೆ. ಪರಿಣಾಮದಲ್ಲಿ ಪ್ರಕೃತಿಯ ವೈವಿಧ್ಯ ನಾಶವಾಗುತ್ತದೆ. ಪರಿಸರ ಸಮಸ್ಯೆ ತಲೆದೋರುತ್ತದೆ. ನಿಜವಾದ ಅಭಿವೃದ್ಧಿಯ ಪರಿಕಲ್ಪನೆಯಲ್ಲಿ ವರ್ಷದಿಂದ ವರ್ಷಕ್ಕೆ ವ್ಯಾಪಾರದ ಅಗತ್ಯ ಕಡಿಮೆ ಆಗಬೇಕು. ವ್ಯಾಪಾರದಿಂದ ನಾವೇನು ಬಯಸುತ್ತೇವೋ ಅದನ್ನು ನಾವೇ ಅಲ್ಲೇ ತಯಾರಿಸಲು, ಸೃಷ್ಟಿಸಲು ಪ್ರಯತ್ನಿಸಬೇಕು. ಇಂಥಾ ಪ್ರಯತ್ನಕ್ಕೆ ಪ್ರಕೃತಿ ನಿಜವಾದ ಬೆಲೆ ಕೊಡುತ್ತದೆ. ಆಗ ನಮ್ಮ ಜೀವನಕ್ಕೆ ನಿಜವಾದ ಬೆಲೆ ಬರುತ್ತದೆ.

ಪ್ರಕೃತಿ ಅತ್ಯಂತ ಸಮೃದ್ಧವಾಗಿದೆ. ಸಬಲವಾಗಿದೆ. ಆಯಾಯ ಪ್ರದೇಶದ ಜೀವಿಗಳಿಗೆ ಬೇಕಾದ ಸಂಪತ್ತನ್ನು ಉತ್ಪಾದಿಸಲು, ತಜ್ಞತೆಯನ್ನು ತಯಾರಿಸಲು ಆ ಭೂಮಿ ಶಕ್ತವಾಗಿದೆ. ಅದರಲ್ಲೂ ಪ್ರಪಂಚದ ಆರನೇ ಒಂದು ಜನಶಕ್ತಿಯುಳ್ಳ (ಇದು ಕೂಡ ಒಂದು ಸಂಪತ್ತು. ನಾವು ಬಳಸಿಕೊಳ್ಳಬೇಕು), ವರ್ಷ ಪೂರ್ತಿ ಉತ್ಪಾದಕವಾದ ಹವಾಗುಣವುಳ್ಳ, ಅರುವತ್ತು ಶತಾಂಶ ಕೃಷಿಯೋಗ್ಯ ಭೂಮಿಯುಳ್ಳ, ಪ್ರಪಂಚದ ಅತ್ಯಂತ ಶ್ರೇಷ್ಠ ಜೀವ (ಸಸ್ಯ) ವೈವಿಧ್ಯವುಳ್ಳ, ಎಲ್ಲಾ ರೀತಿಯ ಖನಿಜಗಳನ್ನುಳ್ಳ, ಪ್ರಕೃತಿಯ ಕನಿಷ್ಠ ಪ್ರಕೋಪಕ್ಕೆ ಒಳಗಾಗಿರುವ ಭಾರತ ಯಾವ ದೃಷ್ಟಿಯಿಂದಲೂ ಪ್ರಪಂಚದ ಮುಂದೆ ಸಣ್ಣದಲ್ಲ. ಸಣ್ಣದಾಗಬೇಕಾಗಿಲ್ಲ.

ಎಲ್ಲರೂ ದೊಡ್ಡವರಾಗಬಯಸುವುದು, ಸ್ವಾಭಿಮಾನಿಗಳಾಗಬಯಸುವುದು ವ್ಯಕ್ತಿಗಳ ಸಹಜ ಲಕ್ಷಣವಾಗಿರುವಾಗ ವಿದೇಶೀಯರ ಮುಂದೆ ಭಿಕ್ಷಾಪಾತ್ರೆ ಹಿಡಿಯುವುದು ನಮ್ಮ 'ತಜ್ಞ'ರಿಗೆ ಅನಿವಾರ್ಯವೆಂದು ಕಾಣುವುದಾದರೂ ಯಾಕೆಂದು ನನಗೆ ಸೋಜಿಗವಾಗಿದೆ.

ಹಂಗಿನರಮನೆಗಿಂತ ವಿಂಗಡದ ಗುಡಿ ಲೇಸು  
ಭಂಗಪಟ್ಟುಂಬ ಬಿಸಿ ಅನ್ನಕ್ಕಿಂತ  
ತಂಗುಳವೆ ಲೇಸು –

ಹೀಗೆಂದ ಸರ್ವಜ್ಞ.

ನಮ್ಮ ಅಭಿವೃದ್ಧಿಯ ಕುರಿತಾದ ಈ ಸ್ಪಷ್ಟ ಸಂದೇಶ ನಮ್ಮ ತಜ್ಞರಿಗೆ ಅಪ್ರಸ್ತುತವಾಯಿತು. ''ನಮ್ಮ ತಂತ್ರವಿದ್ಯೆಯನ್ನು ನೀವು ಕೊಂಡುಕೊಳ್ಳಿ. ನಿಮ್ಮ ಸಂಬಾರ ಪದಾರ್ಥ, ಬಟ್ಟೆ, ಅದಿರು ಇತ್ಯಾದಿತ್ಯಾದಿ ಪ್ರಕೃತಿ ಸಂಪತ್ತನ್ನು ನಮಗೆ ಕೊಡಿ. ನೀವು ಉದ್ಧಾರವಾಗುತ್ತೀರಿ'' ಎಂದು ಹೇಳುವ ವಿದೇಶೀಯರ ಧ್ವನಿ ನಮ್ಮ ತಜ್ಞರಿಗೆ ಆಪ್ಯಾಯಮಾನವಾಯಿತು.

ವಿಶ್ವ ವ್ಯಾಪಾರದ ಒಪ್ಪಂದದೊಳಗಿರುವ ದೋಷಗಳನ್ನು ತೆಗೆದರೆ ಅದು ನಮಗೆ ವರವಂತೆ. ಈ ಮಾತು ಹೇಗಿದೆ ಎಂದರೆ - ''ಆತ ಕಡು ಮೂರ್ಖ ನಿಜ. ಆದರೆ ಆತ ಒಳ್ಳೆಯವ. ಅವನಲ್ಲಿರುವ ಕೆಟ್ಟದ್ದನ್ನು ತೆಗೆದುಹಾಕಿದಾಗ ಆತ ಬಹಳ ಒಳ್ಳೆಯವ. ಅವನ ಮಿತ್ರತ್ವದಿಂದ ನಮಗೆ ಲಾಭ ಇದೆ'' ಎಂದು ಹೇಳುವ ತಜ್ಞರಿಗೆ ''ಮೂರ್ಖರನ್ನು ತಿದ್ದಲು ಸಖ್ಯದಿಂದ ಸಾಧ್ಯವಿಲ್ಲ - ಉದಾಸೀನದಿಂದ ಮಾತ್ರ ಸಾಧ್ಯ'' ಎಂಬ ಅಂಶ ತಿಳಿದಿಲ್ಲದಿರುವುದು ನನಗೆ ವಿಚಿತ್ರವಾಗಿದೆ.

ವ್ಯಾಪಾರದ ನೆವದಲ್ಲಿ ಹಿಂದೊಮ್ಮೆ ನಮ್ಮ ನೆಲವನ್ನು ಆಕ್ರಮಿಸಿದ ವಿದೇಶೀಯರು ಮತ್ತೊಮ್ಮೆ ಸಹಸ್ರಬಾಹುಗಳಿಂದ (ಅಂದು ಒಂದು ವಿದೇಶಿ ಕಂಪೆನಿ, ಇಂದು ನಾಲ್ಕು ಸಾವಿರಕ್ಕೂ ಮಿಕ್ಕಿ ವಿದೇಶಿ ಕಂಪೆನಿಗಳು) ನಮ್ಮ ಸಂಪತ್ತನ್ನು ಕದಿಯಲು ಬರುತ್ತಿರುವ ಈ ದಿನ ಕಳ್ಳರಿಂದ ರಕ್ಷಿಸಿಕೊಳ್ಳಲು ನಮಗೆ ಬೇಲಿ ಬೇಕು. ಇದು ಸ್ವಾವಲಂಬನೆಯ ಬೇಲಿ.

ನಾನೊಬ್ಬ ಕೃಷಿಕ. ನನ್ನ ತೋಟಕ್ಕೆ ಕಳ್ಳರನ್ನು ತಡೆಯಲು ಹಾಕಿದ್ದ ಬೇಲಿ ನನಗೆ ಸಾಕಷ್ಟು ಪ್ರಕೃತಿಯ ಸೂಕ್ಷ್ಮಗಳನ್ನು, ಕೃಷಿಯ ತಜ್ಞತೆಯನ್ನು ಹೇಳಿಕೊಟ್ಟಿತು. ಬೇಲಿ, ಕಳ್ಳರು ಒಳಗೆ ಬರುವುದನ್ನು ತಡೆಯಿತು. ಬೇಲಿ, ನನ್ನ ತೋಟದ ಸಂಪತ್ತು ಹೊರಗೆ ಹೋಗುವುದನ್ನು ತಡೆಯಿತು.

ಆಧುನಿಕ ಕೃಷಿಗಾದರೋ, ಬೀಜ, ಗೊಬ್ಬರ, ಔಷಧಿ, ಉಳುಮೆ ನೀರಾವರಿ ವ್ಯವಸ್ಥೆ ಹಾಗೂ ತಜ್ಞತೆಗಳು ಹೊರಗಿನಿಂದ ಬರಬೇಕು. ಎಂದರೆ - ಪೇಟೆಗಳಿಂದ ಖರೀದಿಸಬೇಕು. ಆಯಾತ ಎಂದರೆ ಇದುವೆ. ಇಂಥಾ ಆಯಾತಕ್ಕೆ ಸಾಲ ಬೇಕು. ಅದಕ್ಕಾಗಿ ಬಂಡವಾಳಶಾಹಿಗಳ ಅಥವಾ ಬ್ಯಾಂಕುಗಳ ಹಂಗಿಗೆ ಬೀಳಬೇಕು. ಆಮೇಲೆ ಕಷ್ಟಪಟ್ಟು, ನಿದ್ದೆ ಕೆಟ್ಟು ದುಡಿಯಬೇಕು. ತನಗೆ ಬೇಡದ, ಜೀವನಾವಶ್ಯಕವಲ್ಲದ, ಆರ್ಥಿಕ ಎಂಬ ಲೇಬಲ್ ಹಾಕಿದ ಬೆಳೆ ಬೆಳೆಯಬೇಕು. ಅದನ್ನು ನಿರ್ಯಾತ ಮಾಡಬೇಕು. ಎಲ್ಲವನ್ನೂ ಕೊಂಡುಕೊಳ್ಳಬೇಕು. ಇಂಥಾ ವ್ಯಾಪಾರ ನೀತಿಯಿಂದ, ತಕ್ಷಣ ಲಾಭದ ಭ್ರಮೆಯಿಂದ ಎರಡು ದಿಕ್ಕುಗಳಲ್ಲೂ ನಷ್ಟ. ಆಯಾತದಲ್ಲೊಮ್ಮೆ ನಷ್ಟ, ನಿರ್ಯಾತದಲ್ಲೊಮ್ಮೆ ನಷ್ಟ.

ನನ್ನ ತೋಟಕ್ಕೆ ಕಳ್ಳರ ವಿರುದ್ಧ ಹಾಕಿದ ಜೀವಂತ ಬೇಲಿ ಮತ್ತೆ ಮತ್ತೆ ಪ್ರಾಕೃತಿಕವಾಗಿ ಬಲಿಷ್ಠವಾಗುತ್ತಾ ತೋಟಕ್ಕೆ ಬೇಕಾಗುವ ಎಲ್ಲ ಗೊಬ್ಬರವನ್ನೂ ನಿರ್ಮಿಸಲು ಶಕ್ತವಾಯಿತು. ಬೀಜ, ಔಷಧಿ ಇತ್ಯಾದಿ ಎಲ್ಲವೂ ಸ್ಥಳೀಯವಾಗಿ ನಿರ್ಮಾಣವಾಗುವ ಪ್ರಕೃತಿಧರ್ಮವನ್ನು ಬೋಧಿಸಿತು. ಸಾವಯವ ಸಾಮರ್ಥ್ಯವನ್ನು ಪ್ರತಿನಿಧಿಸಿತು. ಆಯಾತ-ನಿರ್ಯಾತ (ವ್ಯಾಪಾರ)ಗಳ ಅಗತ್ಯವನ್ನು, ತಂತ್ರವಿದ್ಯೆಯ ಅನಿವಾರ್ಯತೆಯನ್ನು ಬಹಳಷ್ಟು ಕಡಿಮೆ ಮಾಡಿತು. ಬೇಲಿ, ತೋಟವನ್ನು ಕಳ್ಳರಿಂದ ರಕ್ಷಿಸಿ ಸಮೃದ್ಧಿಗೆ ಕಾರಣವಾಯಿತು. ಬೇಲಿ, ಬಾಹ್ಯಾಕರ್ಷಣೆಗೆ ಒಳಗಾಗುವ ಕಳ್ಳ ಮನಸ್ಸನ್ನು ನಿಯಂತ್ರಿಸಿ ಸಮೃದ್ಧ ಚಿಂತನೆಗೆ ದಾರಿ ಮಾಡಿತು. ಕೃಷಿ ಉತ್ಪನ್ನಗಳ ಬೆಲೆಗಳೆಲ್ಲಾ ಬಿದ್ದುಹೋಗಿರುವ ಇಂದಿನ ವಿಷಮ ಪರಿಸ್ಥಿತಿಯನ್ನು ಎದುರಿಸಲು ಬೇಕಾದ ಎಲ್ಲ ಸಾಮರ್ಥ್ಯವನ್ನು ತುಂಬಿಕೊಟ್ಟಿತು.

ಇದೇ ನೀತಿ, ಇದೇ ಸ್ವಾವಲಂಬನೆ ಒಂದು ತುಂಡು ಭೂಮಿಗೂ ನಿಜ. ಇಡೀ ದೇಶಕ್ಕೂ ನಿಜ. ಒಂದೊಂದು ಭೂಭಾಗವೂ, ಒಂದೊಂದು ಹಳ್ಳಿಯೂ ಒಂದು ಪರಿಪೂರ್ಣ ವಿಶ್ವವಾಗಿ ರೂಪು ಪಡೆದಾಗ, ವೈವಿಧ್ಯ ಜೀವ ಪ್ರಭೇದಗಳಿಂದ ಸಮೃದ್ಧವಾದಾಗ ಮಾತ್ರ ವಿಶ್ವಪ್ರೇಮ ಸಾಧ್ಯವೇ ಹೊರತು ವಿಶ್ವ ವ್ಯಾಪಾರದಿಂದ ಸಾಧ್ಯವಿಲ್ಲ. ಸ್ಪರ್ಧೆ ಇರುವಲ್ಲಿ ಸತ್ಯ, ನೀತಿ, ನ್ಯಾಯಗಳು ರಂಜಿಸುವುದಿಲ್ಲ.

ಈ ವಿಚಾರಗಳಲ್ಲಿ ನಮ್ಮ ತಜ್ಞರಿಗೆ, ದೇಶದ ಮುಂದಾಳುಗಳಿಗೆ ಸಹಮತ ಇಲ್ಲ. ಅವರೆಲ್ಲರ ಪ್ರಕಾರ ಸ್ವಾವಲಂಬನೆ ಆದರ್ಶವೇ ಹೊರತು ಆಚರಣೆಗಲ್ಲ. ಅವರೆಲ್ಲರ ಪ್ರಕಾರ ಪ್ರಾಕೃತಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಅದೆಷ್ಟು ಬೆಲೆ ತೆತ್ತಾದರೂ ಅಮೆರಿಕೆಯ ಭೋಗ ಸಾಮಗ್ರಿಗಳನ್ನು ಖರೀದಿಸದೆ ಜೀವನವಿಲ್ಲ. ಆರೆಂಟು ವರ್ಷಗಳ ಮಕ್ಕಳಿಗೆ ಟಿ.ವಿ. ಪರದೆ ತೋರಿಸುವುದೆಲ್ಲ ವಾಸ್ತವವಾಗಿ ಕಾಣುವುದಂತೆ. ಅವರು ಪರದೆಯ ದೃಶ್ಯಕ್ಕೂ, ಪ್ರಕೃತಿಯ ಚಿತ್ರಕ್ಕೂ ನಡುವೆ ಹೆಚ್ಚಿನ ವ್ಯತ್ಯಾಸವನ್ನು ಗುರುತಿಸಲಾರರಂತೆ. ಟಿ.ವಿ. ಮುಂದೆ ಬೆಳೆದ ಮಕ್ಕಳು, ಪ್ರಕೃತಿಯ ದೃಶ್ಯಾವಳಿಗಳಿಂದ ವಂಚಿತವಾದ ಮಕ್ಕಳು, ಟಿ.ವಿ.ಯನ್ನು ಸಾಕ್ಷೀಭೂತವಾಗಿ ಇಟ್ಟುಕೊಂಡು ತಮ್ಮ ಜೀವನದ ಎಲ್ಲ ಸ್ವಾರಸ್ಯಗಳನ್ನೂ ಅನುಭವಿಸುವಂತೆ, ಪೇಟೆಗಳಲ್ಲಿ ಬೆಳೆದ ತಜ್ಞರಿಗೆ ಪ್ರಕೃತಿಯ ನಿಜ ಸಾಮರ್ಥ್ಯವನ್ನು ಅರ್ಥವಿಸದವರಿಗೆ, ಪೇಟೆಯ ಕೃತಕತೆ ಅನಿವಾರ್ಯವೆಂದು ಕಾಣುತ್ತದೆ. ಸ್ವಾವಲಂಬನೆಯ ಕಲ್ಪನೆ ಅವರನ್ನು ಅಧೀರರನ್ನಾಗಿ ಮಾಡುತ್ತದೆ. ಯಂತ್ರ, ತಂತ್ರದ ಹೊರತಾಗಿ ಸ್ವಂತ ಶಕ್ತಿಯ ಮೇಲೆ ಜೀವನ ಅವರಿಗೆ ಅಸಾಧ್ಯವಾಗಿದೆ. ಎಂತಲೇ ತಮ್ಮ ದೈಹಿಕ ಮಾನಸಿಕ ದೌರ್ಬಲ್ಯಗಳು ಮುಚ್ಚಿಕೊಳ್ಳುವಂತೆ, ಬೌದ್ಧಿಕ ಕಸರತ್ತು ಮಾಡುತ್ತಾ, ಸ್ವಾವಲಂಬನೆಯ ಕಲ್ಪನೆಯನ್ನು ವಿರೋಧಿಸುತ್ತಾ, ತಜ್ಞತೆಯ ಹೆಸರಿನಲ್ಲಿ ದಾಸ್ಯವನ್ನು ಒಪ್ಪಿಕೊಳ್ಳುತ್ತಿದ್ದಾರೆ. ಇಡೀ ಪ್ರಪಂಚ ಪ್ರಕೃತಿ ಮಾಲಿನ್ಯದ ಕಾಪಿನಲ್ಲಿ ಒದ್ದಾಡುವಂತೆ ಮಾಡುತ್ತಿದ್ದಾರೆ. ಕೃತಕ ಪ್ಲಾಸ್ಟಿಕ್ ಹೂವಿಗೆ ಮಾಧುರ್ಯ ತುಂಬುವ ವ್ಯರ್ಥ ಪ್ರಯತ್ನ ಮಾಡುವ ಬದಲು, ಅದಾಗಿ ಬೆಳೆದಿರುವ ಕಾಡಿನ ಹೂವುಗಳನ್ನು ಅರಸುವುದರಿಂದ, ಆಸ್ವಾದಿಸುವುದರಿಂದ ಎಲ್ಲರಿಗೂ ನಿಜವಾದ ಲಾಭ ಇದೆ. ಇಂಥಾ ಲಾಭದೆಡೆಗೆ ನಮ್ಮ ತಜ್ಞರು ಮನಕೊಡುವಂತೆ ನಮ್ಮ ಮಣ್ಣಿನ ವಾಸನೆ ಹಬ್ಬಲಿ.

ಎ. ಪಿ. ಚಂದ್ರಶೇಖರ್

'ಇಂದ್ರಪ್ರಸ್ಥ' [illegible]

# ಪರಿಸರ ಚಳವಳಿಗಳ ಸೈದ್ಧಾಂತಿಕ ನೆಲೆಗಳು

**ಮೋಹನ್ ಕೃಷ್ಣ ರೈ ಕೆ.**

ಪರಿಸರ ಚಳವಳಿಗಳು ಇಂದು ಎಲ್ಲೆಂದರಲ್ಲಿ ಕಂಡುಬರುತ್ತಿವೆ. ಅದೇ ರೀತಿ ಪ್ರತಿಯೊಂದು ಪೇಟೆ-ಪಟ್ಟಣಗಳಲ್ಲಿಯೂ ಪರಿಸರ ಸಂಘಟನೆಗಳು ಹುಟ್ಟಿಕೊಳ್ಳುತ್ತಿವೆ. ಆದರೆ ಇವು ಯಾವುವೂ ಮೇಲ್ನೋಟಕ್ಕೆ ಕಂಡಂತೆ ನಡೆಯುತ್ತಿಲ್ಲ. ಪರಿಸರದೊಂದಿಗೆ ಮಾನವ ನಿರ್ಮಿತ ಧೋರಣೆಗಳು ಸೇರಿಕೊಂಡು ಪರಿಸರ ಚಳವಳಿಯನ್ನು ಗೊಂದಲಮಯವನ್ನಾಗಿ ಮಾಡಿವೆ. ಈ ಧೋರಣೆಗಳು ಪರಿಸರ ಚರ್ಚೆಯನ್ನು ಜಾಗತಿಕವನ್ನಾಗಿಸಿ ಪರಿಸರ ಬಿಕ್ಕಟ್ಟು ತಲೆದೋರುವಂತೆಯೂ ಮಾಡಿವೆ. ಬಹುಸಂಖ್ಯಾತ ಜನವರ್ಗದ ಬದುಕನ್ನು ಒಂದು ಸೀಮಿತ ವರ್ಗವು ಬಂಡವಾಳದೊಂದಿಗೆ ನಿರ್ಧರಿಸುತ್ತಿರುವುದೂ ಇದಕ್ಕೆ ಕಾರಣವಾಗಿದೆ. ಸರಕಾರದ ಹೊಸ ಆರ್ಥಿಕ ನೀತಿ ಹಾಗೂ ಅದರ ಅನುಬಂಧಗಳು ಬಹುದೊಡ್ಡ ಸಂಖ್ಯೆಯ ಜನರ ಬದುಕನ್ನು ಪರಿಗಣನೆಗೆ ತೆಗೆದುಕೊಳ್ಳದೆ ಆಧುನೀಕರಣವನ್ನು ಮುಂದುವರಿಸಿವೆ. ಇದರೊಡನೆ ಸಂಪ್ರದಾಯ ಮತ್ತು ಆಧುನಿಕತೆಗಳನ್ನು ವಿಷಯವನ್ನಾಗಿ ಇಟ್ಟುಕೊಂಡು ಮೇಲ್ವರ್ಗಗಳು ನಡೆಸುತ್ತಿರುವ ಸಾಂಸ್ಕೃತಿಕ ರಾಜಕೀಯವೂ ಸೇರಿಕೊಂಡಿದೆ. ಈ ಕಾರಣಕ್ಕಾಗಿಯೇ ಪರಿಸರ ಚಳವಳಿಗಳನ್ನು ಶ್ರೀಮಂತವರ್ಗದ ಸಾಂಸ್ಕೃತಿಕ ರಾಜಕೀಯ ಎಂಬ ಹೆಸರಿನಿಂದಲೂ ಕರೆಯಬಹುದಾಗಿದೆ.

ಮೇಲ್ವರ್ಗದ ಜನರು ತಮ್ಮ ಹಿತಾಸಕ್ತಿಗಳನ್ನು ಕಾಪಾಡುವುದಕ್ಕೋಸ್ಕರ ಪರಿಸರವನ್ನು ವಸ್ತುವನ್ನಾಗಿ ಬಳಸಿಕೊಳ್ಳುತ್ತಾರೆ. ಇಂಥ ಸಂದರ್ಭಗಳಲ್ಲಿ ಪರಿಸರ, ಪರಿಸರವಾದಿ ಮತ್ತು ಪರಿಸರವಾದ ಎನ್ನುವ ಪದಗಳು ಅರ್ಥವನ್ನು ಕಳೆದುಕೊಂಡುಬಿಡುತ್ತವೆ. ಆಧುನೀಕರಣದ ಎಲ್ಲ ಸೌಲಭ್ಯಗಳನ್ನು ತನ್ನಲ್ಲೇ ಕೇಂದ್ರೀಕರಿಸಿಕೊಳ್ಳುವ ಹಾಗೂ ಕೆಳವರ್ಗ ಇದರಿಂದ ವಂಚಿತವಾಗುವಂತೆ ನೋಡಿಕೊಳ್ಳುವ ಉದ್ದೇಶವನ್ನು ಮೇಲ್ವರ್ಗ ಹೊಂದಿರುತ್ತದೆ. ಶ್ರೀಮಂತ ಬಂಡವಾಳಶಾಹಿಯ ಪ್ರವೇಶವಾದರೆ ತಾವು ಸ್ಪರ್ಧೆ ನೀಡಲಾರೆವೇನೋ ಎನ್ನುವ ಭಯವೂ ಈ ವರ್ಗವನ್ನು ಹೊಸ ಯೋಜನೆಗಳನ್ನು ವಿರೋಧಿಸುವಂತೆ ಮಾಡಿರಬೇಕು. ಹೊಸ ಯೋಜನೆಗಳಿಂದಾಗಿ ಪರಿಸರ ಮಾಲಿನ್ಯ ಉಂಟಾಗುತ್ತದೆ ಎನ್ನುವ ಪರಿಸರಪರ ಕಾಳಜಿ ತೋರಿಸಿ ಸ್ಥಳೀಯ ಜನರು ಉದ್ದಿಮೆಗಳನ್ನು ವಿರೋಧಿಸುವಂತೆ ಪ್ರಚೋದನೆ ನೀಡಲಾಯಿತು. ಇದು ಕೇವಲ ಸಾಂಸ್ಕೃತಿಕ ರಾಜಕೀಯವೇ ಹೊರತು ಪರಿಸರ ಮಾಲಿನ್ಯವನ್ನು ತಡೆಗಟ್ಟುವ ಪ್ರಯತ್ನವಲ್ಲ.

ಪರಿಸರ ಚಳವಳಿಗಳಲ್ಲಿ ಎಲ್ಲ ಜನವರ್ಗಗಳು ಜಾತಿ, ವರ್ಗ ಭೇದವಿಲ್ಲದೆ ಭಾಗವಹಿಸಿದವು ಎನ್ನುವ ವರದಿಗಳು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುತ್ತವೆ. ಆದರೆ ನಿಜಾರ್ಥದಲ್ಲಿ ಬೂರ್ಷ್ವಾ ವರ್ಗವೇ ನಾಯಕತ್ವ ವಹಿಸಿರುತ್ತದೆ ಹಾಗೂ ಅದರ ವರ್ಗ ಹಿನ್ನೆಲೆ ಒಟ್ಟು ಆಶಯವನ್ನು ನಿಯಂತ್ರಿಸುತ್ತಿರುತ್ತದೆ. ಇದು ಸಮಾಜದ ಮೇಲ್‌ರಚನೆಯ ಮತ್ತು ಕೆಳರಚನೆಯ ರಾಜಕೀಯವಾಗಿದ್ದು, ಪುರೋಗಾಮಿ ಅಥವಾ ಪ್ರತಿಗಾಮಿ ಸ್ವರೂಪವನ್ನು ಹೊಂದಿದೆ. ಆದ್ದರಿಂದಲೆ ಘಟಿಸಿದ ಹೆಚ್ಚಿನ ಚಳವಳಿಗಳು ವಿಫಲವಾಗುತ್ತವೆ.

> *ಸೂಕ್ತವಾದ ಪ್ರಜ್ಞೆಯು ಮೂಡಬೇಕಾದರೆ ಅದಕ್ಕೆ ಅಗತ್ಯವಾದ ಪರಿಸರವನ್ನು ನಿರ್ಮಿಸುವುದರಲ್ಲಿ ಸೋಲು ಒಂದು ಕಡೆಗಾದರೆ ಪರಿಸರದ ಬಗೆಗಿನ ಸತ್ವರಹಿತ ಪ್ರಜ್ಞೆ ಇನ್ನೊಂದು ಕಡೆ - ಇದು ನಮ್ಮ ಪರಿಸರ ರಕ್ಷಣೆಗಿರುವ ಒಂದು ತೊಡಕು. ಇದಕ್ಕೆ ಉದಾಹರಣೆಗಳು ಹತ್ತಾರು. ಒಂದನ್ನು ಹೆಸರಿಸಬೇಕೆಂದರೆ ಕುದುರೆಮುಖ ಪ್ರಸಂಗವನ್ನು ನೋಡಬಹುದು. ಅದು ಪ್ರಾರಂಭವಾಗುವ ಹಂತದಲ್ಲೇ ಪ್ರಜ್ಞಾವಂತರು ಅದನ್ನು ವಿರೋಧಿಸಿದ್ದರು. ಕಚ್ಚಾವಸ್ತುಗಳನ್ನು ಹರಾಜಿಗಿಟ್ಟು ದೇಶ ಬೆಳೆಯಲಾರದೆಂಬುದು ಅವರ ಒಂದು ವಾದವಾಗಿತ್ತು. ಅಂದು ಉಸಿರೆತ್ತದೆ ಇದ್ದವರನೇಕರು ಇಂದು ಪರಿಸರದ ರಕ್ಷಣೆಗೆ ಧಾವಿಸುತ್ತಿದ್ದಾರೆ. ರಕ್ಷಣೆ ಅತ್ಯಗತ್ಯ. ಆದರೆ ಹೇಗೆ ಎಂಬುದೇ ಪ್ರಶ್ನೆ*



*ಕುದುರೆಮುಖದ ಒಂದು ದೃಶ್ಯ.*

ಚಳವಳಿಗಳು ಸ್ವಲ್ಪಮಟ್ಟಿನ ಯಶಸ್ಸನ್ನು ಕಾಣಬೇಕಾದರೆ ಮಧ್ಯಮ ವರ್ಗದ ಭಾಗವಹಿಸುವಿಕೆ ಅನಿವಾರ್ಯ. ಮಧ್ಯಮವರ್ಗವು ಅಸ್ತಿತ್ವದಲ್ಲಿರದ ಸಮಾಜವು ಸಂಪೂರ್ಣವಾಗಿ ಊಳಿಗಮಾನ್ಯ ವ್ಯವಸ್ಥೆಯಲ್ಲಿಯೇ ಮುಂದುವರಿಯುವ ಒತ್ತಾಯಕ್ಕೆ ಒಳಗಾಗಿರುತ್ತದೆ. ಆದರೆ ಮಧ್ಯಮವರ್ಗ ತಾನು ಅಧಿಕಾರ ಮತ್ತು ಸವಲತ್ತುಗಳನ್ನು ಪಡೆದುಕೊಂಡ ಬಳಿಕ ಶ್ರೀಮಂತ ವರ್ಗದಂತೆಯೇ ಕಾರ್ಯ ನಿರ್ವಹಿಸಲು ಆರಂಭಿಸುತ್ತದೆ. ಈ ಬೆಳವಣಿಗೆ ಕೆಳವರ್ಗಕ್ಕೆ ಇನ್ನಷ್ಟು ಅಪಾಯಕಾರಿ. ಸಂಪನ್ಮೂಲಗಳ ಹಂಚಿಕೆಯಲ್ಲಾಗುವ ಏರುಪೇರುಗಳು ಬಂಡವಾಳಶಾಹಿ ವ್ಯವಸ್ಥೆ ಕ್ಷೀಣಿಸದಂತೆ ನೋಡಿಕೊಳ್ಳುತ್ತದೆ. ಇದು ಪರಿಸರ ಮತ್ತು ಅಭಿವೃದ್ಧಿಯ ನಡುವೆ ತಾತ್ಕಾಲಿಕವಾದ ಸಮನ್ವಯವನ್ನು ಸಾಧಿಸಿ ಪರಿಸರ ಚಳವಳಿಗಳ ಸ್ವರೂಪವನ್ನೇ ಬದಲಾಯಿಸಿಬಿಡುತ್ತದೆ.

ಪರಿಸರ ಚಳವಳಿಗಳಲ್ಲಿ ಮೇಲ್ವರ್ಗವು ಕೆಳವರ್ಗದೊಂದಿಗೆ ಮಾಡಿಕೊಳ್ಳುವ ಹೊಂದಾಣಿಕೆಯ ಸ್ವರೂಪವನ್ನು ಅರ್ಥೈಸಿಕೊಳ್ಳಬೇಕಾದರೆ ಸಮಾಜದ ಕೆಳಸ್ತರದ ಅಧ್ಯಯನ ನಡೆಸಬೇಕಾಗುತ್ತದೆ. ಈ ಅಧ್ಯಯನ ಬುಡಕಟ್ಟು ಮತ್ತು ಗ್ರಾಮೀಣ ಪ್ರದೇಶದ ಜನರು ಪರಿಸರ ಚಳವಳಿಗಳಲ್ಲಿ ಯಾವ ರೀತಿ ಭಾಗವಹಿಸಿದರು ಹಾಗೂ ಯಾವ ರೀತಿ ಮೋಸಹೋದರು ಎನ್ನುವುದನ್ನು ತಿಳಿಸುತ್ತದೆ. ಪರಿಸರ ರಕ್ಷಣೆಯ ಹೋರಾಟದಲ್ಲಿ ಬುಡಕಟ್ಟುಗಳದ್ದು ಅಸ್ತಿತ್ವದ ಪ್ರಶ್ನೆಯಾದರೆ, ನಗರ ಬುದ್ಧಿಜೀವಿಗಳಿಗೆ ಅದು ಶೋಕಿಯ ಹೋರಾಟ. ಇವರನ್ನು ಪರಿಸರವಾದಿಗಳು ಎನ್ನುವ ಬದಲು ಅವಕಾಶವಾದಿಗಳು ಎಂದೇ ಕರೆಯಬೇಕಾಗುತ್ತದೆ. ತಾತ್ಕಾಲಿಕ ಸಮಸ್ಯೆಗಳು ಮತ್ತು ವೈಯಕ್ತಿಕ ಹಿತಾಸಕ್ತಿಗಳಷ್ಟೇ ಚಳವಳಿಗಳಲ್ಲಿ ತುಂಬಿಕೊಂಡಾಗ ಚಳವಳಿಗಳು ಯಶಸ್ಸನ್ನು ಕಾಣಲು ಸಾಧ್ಯವಿಲ್ಲ. ಇದು ಚಳವಳಿಗಳಿಗೆ ಖಚಿತವಾದ ಸೈದ್ಧಾಂತಿಕ ತಳಹದಿ ಇಲ್ಲದಿರುವುದನ್ನು ಸೂಚಿಸುತ್ತದೆ. ಇನ್ನು ಪರಿಸರ ಸಂಘಟನೆಗಳು ಹಾಗೂ ಶೈಕ್ಷಣಿಕ ಸಂಘ-ಸಂಸ್ಥೆಗಳು ಏರ್ಪಡಿಸುವ ಪರಿಸರ ಸಂಬಂಧಿತ ಸಮ್ಮೇಳನಗಳಲ್ಲಿ ತಾಂತ್ರಿಕವಾದ ಪ್ರಬಂಧಗಳು ಹಾಗೂ ಸ್ವಾನುಭವಗಳಷ್ಟೇ ಮಂಡಿಸಲ್ಪಡುತ್ತವೆ. ತಮಗೆ ಸಿಗಬಹುದಾದ ಭತ್ಯೆಗಳನ್ನಷ್ಟೇ ಗಮನದಲ್ಲಿರಿಸಿಕೊಂಡು ಸಮ್ಮೇಳನಗಳಿಗೆ ಬರುವ ವಿದ್ವಾಂಸರ (ಪರಿಸರವಾದಿಗಳ) ಸಂಖ್ಯೆಯೇ ಹೆಚ್ಚು. ಇವರ್ಯಾರೂ ಪರಿಸರ ಮಾಲಿನ್ಯಕ್ಕೆ ಇರಬಹುದಾದ ಮೂಲ ಕಾರಣಗಳನ್ನು ಕೆದಕಿ ಮಾತನಾಡಲು ಇಷ್ಟಪಡುವುದಿಲ್ಲ. ಸರಕಾರದ ಇಲ್ಲವೇ ಉದ್ದಿಮೆಗಾರರ ಪರವಾಗಿ ವಾದಿಸುವ ಪರಿಸರವಾದಿಗಳೂ ಇದ್ದಾರೆ. ಇವರಲ್ಲಿ ಪರಿಸರ ವಿಜ್ಞಾನಿಗಳನ್ನು ಹಾಗೂ ಸಂಬಂಧಿಸಿದ ಇಲಾಖೆಗಳನ್ನು ಸೇರಿಸಬಹುದು. ಇವರನ್ನು ಸರಕಾರಿ ಪರಿಸರವಾದಿಗಳು ಇಲ್ಲವೇ ಬಂಡವಾಳಶಾಹಿ ಪರಿಸರವಾದಿಗಳು ಎಂದು ಕರೆಯಬಹುದು. ಇವರ ಪ್ರಚಾರಪ್ರಿಯತೆ ಹಾಗೂ ಆತ್ಮವಂಚಕ ವ್ಯಕ್ತಿತ್ವದಿಂದಾಗಿ ಪರಿಸರ ಚಳವಳಿಗಳು ದಾರಿ ತಪ್ಪುತ್ತಿವೆ. ನಿಜವಾದ ಪರಿಸರ ಕಾಳಜಿ ಹೊಂದಿರುವ ವ್ಯಕ್ತಿ ಪರಿಸರದಿಂದ ಲಂಚವನ್ನು ಬಯಸುವುದಿಲ್ಲ.

ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆಯಲ್ಲಿ ಪರಿಸರ ಮತ್ತು ಅಭಿವೃದ್ಧಿಯ ನಡುವೆ ಹೊಂದಾಣಿಕೆ ಏರ್ಪಡಿಸಿಕೊಳ್ಳುವುದು ಕಷ್ಟದ ಕೆಲಸ. ಪರಿಸರವೂ ಮಾಲಿನ್ಯಕ್ಕೊಳಗಾಗಬಾರದು ಹಾಗೂ ಅಭಿವೃದ್ಧಿಯೂ ನಿರಂತರವಾಗಿ ನಡೆಯುತ್ತಿರಬೇಕು ಎನ್ನುವ ಸಿದ್ಧಾಂತವನ್ನು ಒಪ್ಪಲು ಸಾಧ್ಯವಾಗುವುದಿಲ್ಲ. ಪರಿಸರ ಮತ್ತು ಅಭಿವೃದ್ಧಿಗಳೆರಡೂ ಸೀಮಿತಾರ್ಥದಲ್ಲಿ ಬಳಕೆಯಾಗುತ್ತಿದ್ದು, ಅದನ್ನು ಸಂಪ್ರದಾಯ ಮತ್ತು ಆಧುನಿಕತೆಗಳ

ನಡುವಿನ ತಿಕ್ಕಾಟವಾಗಿ ಉದ್ದೇಶಪೂರ್ವಕವಾಗಿ ಪರಿವರ್ತಿಸಿರುವುದು ಪರಿಸರ ಬಿಕ್ಕಟ್ಟು ತಲೆದೋರುವಂತೆ ಮಾಡಿತು. ಇದರಲ್ಲಿ ನವಸಂಪ್ರದಾಯವಾದಿಗಳು ಮತ್ತು ಪೋಸ್ಟ್ ಮಾಡರ್ನಿಸ್ಟರ ಕೈವಾಡ ಎದ್ದು ಕಾಣುತ್ತದೆ. ಆಧುನಿಕತೆಯನ್ನು ಆರಂಭಿಕ ಹಂತದಲ್ಲಿ ವಿರೋಧಿಸದೆ, ಅದರ ಸಂಪೂರ್ಣ ಲಾಭವನ್ನು ಪಡೆದುಕೊಂಡ ವರ್ಗ ಅದೇ ಆಧುನಿಕತೆಯಿಂದ ಸಮಾಜದ ಕೆಳಸ್ತರದ ಜನರಿಗೆ ಲಾಭವಾಗುತ್ತದೆ ಎಂದಾಗ ವಿರೋಧಿಸಲು ಆರಂಭಿಸಿತು. ಇದು ಮಾನವ ಮತ್ತು ಪರಿಸರದ ಸಂಬಂಧಗಳು ಅಸ್ಪಷ್ಟಗೊಳ್ಳುವಂತೆಯೂ ಮಾಡಿತು. ಇದರಲ್ಲಿ ಸ್ಥಳೀಯ ಶ್ರೀಮಂತವರ್ಗ, ಉದ್ಯಮಿಗಳು, ಕೆಲವು ರಾಜಕೀಯ ಪಕ್ಷಗಳು ಮತ್ತು ಸರಕಾರದ ಧೋರಣೆಗಳು ಸೇರಿಕೊಂಡಿವೆ. ಇವೆಲ್ಲವೂ ಸೇರಿಕೊಂಡು ಪರಿಸರ ಚಳವಳಿಗಳು ಪರಿಸರವನ್ನೇ ಮರೆತುಬಿಡುವಂತೆ, ಪ್ರಕೃತಿ ಒಂದು ನೆಪವಾಗಿ ಕಾಣಿಸಿಕೊಳ್ಳುವಂತೆ ಹಾಗೂ ಪ್ರಕೃತಿಯನ್ನು ನಂಬಿ ದುಡಿಯುತ್ತಿರುವ ದುಡಿಯುವ ವರ್ಗ ಪರಿಸರ ಶಿಕ್ಷಣದಿಂದ ವಂಚಿತರಾಗುವಂತೆ ಮಾಡಿವೆ. ಇದರಿಂದಾಗಿ ಪರಿಸರ ಚಳವಳಿಗಳು ಅಸ್ಪಷ್ಟಗೊಂಡು ಅಲ್ಲಿರುವ ಸೂಕ್ಷ್ಮಗಳನ್ನು ಅರಿತುಕೊಳ್ಳಲು ಸಾಧ್ಯವಾಗದೆ ಬಹುರಾಷ್ಟ್ರೀಯ ಕಂಪೆನಿಗಳಿಗೆ ಇನ್ನಷ್ಟು ಅನುಕೂಲವನ್ನೇ ಒದಗಿಸಿಕೊಟ್ಟವು.

ಮುಂದುವರಿದ ರಾಷ್ಟ್ರಗಳಿಗೆ ತಮ್ಮ ಬಂಡವಾಳ ಶೇಖರಣೆಯ ಗೀಳನ್ನು ಪೂರೈಸಿಕೊಳ್ಳಲು ಪರಿಸರ ಚಳವಳಿಗಳೊಳಗಿನ ದ್ವಂದ್ವಗಳು ಸಹಕಾರಿಯಾದವು. ಭಾರತದಲ್ಲಿ ಪರಿಸರ ನಾಶವಾದರೆ ಬಹುರಾಷ್ಟ್ರೀಯ ಕಂಪೆನಿಗಳಿಗೇನೂ ನಷ್ಟವಿಲ್ಲ. ಬಹುರಾಷ್ಟ್ರೀಯ ಕಂಪೆನಿಗಳು ಪರಿಸರಕ್ಕೆ ಧಕ್ಕೆ ಉಂಟುಮಾಡುವ ಉದ್ದಿಮೆಗಳನ್ನು ಹೊರರಾಷ್ಟ್ರಗಳಲ್ಲಿ ಸ್ಥಾಪಿಸಿ ಲಾಭವನ್ನು ಮಾತ್ರ ಪಡೆಯುವ ಉದ್ದೇಶವನ್ನು ಹೊಂದಿರುತ್ತವೆ. ಪರಿಸರ ನಾಶದ ಕಡೆಗೆ ಗಮನಕೊಡದೆ ಉದ್ದಿಮೆಗಳನ್ನು ಸ್ಥಾಪಿಸುವುದು ಬಂಡವಾಳದ ದೃಷ್ಟಿಯಿಂದ ಲಾಭದಾಯಕ. ಮುಂದುವರಿದ ರಾಷ್ಟ್ರಗಳು ತಮ್ಮ ರಾಷ್ಟ್ರಗಳಲ್ಲಿ ಎಲ್ಲ ಮುನ್ನೆಚ್ಚರಿಕೆಯ ಕ್ರಮಗಳನ್ನು ಕೈಗೊಂಡು ಉದ್ದಿಮೆಗಳನ್ನು ಸ್ಥಾಪಿಸುವುದರಿಂದಾಗಿ ಪರಿಸರ ಮಾಲಿನ್ಯದ ಪ್ರಮಾಣವನ್ನು ಸಾಕಷ್ಟು ಕಡಿಮೆಗೊಳಿಸಿಕೊಂಡಿವೆ. ಆದರೆ ತಾವು ಬಂಡವಾಳ ಹೂಡುತ್ತಿರುವ ಬಡರಾಷ್ಟ್ರಗಳಲ್ಲೂ ಅಂಥದೇ ಮುನ್ನೆಚ್ಚರಿಕೆಯ ಕ್ರಮಗಳನ್ನು ಜಾರಿಗೊಳಿಸುವ ಯಾವ ಪ್ರಾಮಾಣಿಕ ಪ್ರಯತ್ನವನ್ನೂ ಮಾಡುತ್ತಿಲ್ಲ. ಉದ್ದಿಮೆಗಳನ್ನು ವಿರೋಧಿಸುವ ಧೋರಣೆ ಹಾಗೂ ಪರಿಸರ ರಕ್ಷಣೆಯ ಕುರಿತು ವಿವೇಚಿಸುವುದು ಬಂಡವಾಳಶಾಹಿಗಳಿಗೆ ಇಷ್ಟವಲ್ಲದ ವಿಚಾರಗಳು. ಶ್ರೇಣೀಕೃತ ಸಮಾಜ ವ್ಯವಸ್ಥೆಯನ್ನು ಯಥಾಪ್ರಕಾರ ಕಾಯ್ದುಕೊಂಡು ಬರುವ ಪ್ರಯತ್ನದಲ್ಲಿರುವ ಸ್ಥಳೀಯ ಶ್ರೀಮಂತವರ್ಗಗಳಿಗೆ ಬಂಡವಾಳಶಾಹಿಯ ಅವತಾರಗಳು ಕಾಣಿಸುವುದೇ ಇಲ್ಲ.

ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡರಿಕ್ ಏಂಗೆಲ್ಸ್‌ರವರು ಸುಮಾರು ನೂರೈವತ್ತು ವರ್ಷಗಳ ಹಿಂದೆಯೇ ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆಯ ಕುರಿತಾಗಿ ನೀಡಿರುವ ಹೇಳಿಕೆಗಳು ಇಂದಿಗೂ ಪ್ರಸ್ತುತವೆನಿಸುತ್ತವೆ. ಅವರ ಪ್ರಕಾರ, 'ಪ್ರಕೃತಿಯ ವಿರುದ್ಧ ನಡೆಸುವ ಪ್ರತಿಯೊಂದು ಹೋರಾಟದಲ್ಲಿಯೂ ಮನುಷ್ಯನಿಗೆ ಊಹಿಸಿದಂತೆ ಮೊದಲ ಹಂತದಲ್ಲಿ ಜಯ ಲಭಿಸುತ್ತದೆ. ಆದರೆ ಎರಡನೆಯ ಮತ್ತು ಮೂರನೆಯ ಹಂತದಲ್ಲಿ ನಾವು ಊಹಿಸಲಾಗದ ಪರಿಣಾಮಗಳು ಉಂಟಾಗಿ ಅನೇಕ ವೇಳೆ ಮೊದಲನೆಯ ಹಂತದಲ್ಲಿ ಲಭಿಸಿದ್ದ ಗೆಲುವು ಸಹ ನಿಷ್ಪ್ರಯೋಜಕವಾಗುತ್ತದೆ.' ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆಯು ಉತ್ಪಾದನಾ ವಿಧಾನ ಹಾಗೂ ಸಂಬಂಧಗಳಲ್ಲಿ ತಂದಿರುವ ಬದಲಾವಣೆಗಳು ಪ್ರಕೃತಿಯ ನಿಯಮದ ವಿರುದ್ಧ ನಡೆಯುತ್ತಿರುವ ಪ್ರಕ್ರಿಯೆಗಳು ಎನ್ನುವುದು ಅವರ ವಾದ. ಯಂತ್ರಗಾರಿಕೆಯಲ್ಲಾದ ಆವಿಷ್ಕಾರಗಳು ಉತ್ಪಾದನಾ ವಿಧಾನ ಮತ್ತು ಸಂಬಂಧಗಳಲ್ಲಿ ಮೂಲಭೂತ ಬದಲಾವಣೆಯನ್ನು ತಂದು ಪ್ರಕೃತಿಯ ಮೇಲೆ ಅತಿಯಾದ ಒತ್ತಡವನ್ನು ಹೇರಿದ್ದು ಇಂದಿನ ಪರಿಸರ ಬಿಕ್ಕಟ್ಟಿಗೆ ಮೂಲಕಾರಣ. ಅದು ಅತಿಯಾದ ನಗರೀಕರಣ ಮತ್ತು ಕೈಗಾರಿಕೀಕರಣಗಳ ಮೂಲಕ ಕಾಣಿಸಿಕೊಂಡಿದೆ. ಇದು ಪರಿಸರ ಜಾಗತಿಕ ಮಟ್ಟದಲ್ಲಿ ಚರ್ಚೆಗೆ ಒಳಗಾಗುವಂತೆ ಮಾಡಿತು. ಆರಂಭಿಕ ಹಂತದಲ್ಲಿ ಪ್ರಕೃತಿಯ ಮೇಲೆ ಅತಿಯಾದ ಭರವಸೆಯನ್ನು ಹೊಂದಿದ್ದೇ ಇಂದಿನ ಪರಿಸರ ಬಿಕ್ಕಟ್ಟಿಗೆ ಮೂಲಕಾರಣ ಎನ್ನುವುದಂತೂ ಸ್ಪಷ್ಟ.




ಪರಿಸರ ಚಳವಳಿಗಳು ಹೆಚ್ಚಿನ ಪ್ರಚಾರವನ್ನು ಪಡೆದುಕೊಂಡಿರುವುದು ಅವು ಜಾಗತಿಕ ಮಟ್ಟದಲ್ಲಿ ಪ್ರಶ್ನೆಗೊಳಗಾದಾಗ. ಜಾಗತಿಕ ಮಟ್ಟದಲ್ಲಿ ಪರಿಸರ ಸಮಸ್ಯೆಗೆ ಸಂಬಂಧಪಟ್ಟಂತೆ ಅನೇಕ ವಿಚಾರ ಸಂಕಿರಣಗಳು, ಸಮ್ಮೇಳನಗಳು ನಡೆದಿವೆ. ಅಲ್ಲಿ ಎತ್ತಿರುವ ಪ್ರಶ್ನೆಗಳು ಬಂಡವಾಳಶಾಹಿಯ ಉದ್ದೇಶಗಳಿಗೆ ಪೂರಕವಾದವೇ ಆಗಿವೆ. ೧೯೭೨ರಲ್ಲಿ ಸ್ವೀಡನ್‌ನ ಸ್ಟಾಕ್‌ಹೋಮ್‌ನಲ್ಲಿ, ೧೯೯೨ರ ಜೂನ್‌ನಲ್ಲಿ ಬ್ರೆಜಿಲ್‌ನ ಪೂರ್ವ ಕರಾವಳಿಯ ರಿಯೋ ನಗರದಲ್ಲಿ ಹಾಗೂ ೧೯೯೭ರಲ್ಲಿ ನ್ಯೂಯಾರ್ಕ್‌ನಲ್ಲಿ ನಡೆದ ಸಮ್ಮೇಳನಗಳು ಪರಿಸರವನ್ನು ಕೇಂದ್ರವಸ್ತುವನ್ನಾಗಿ ಇಟ್ಟುಕೊಂಡಿದ್ದವು ಎನ್ನುವುದು ನಿಜ. ಆದರೆ ಈ ಸಮ್ಮೇಳನಗಳಲ್ಲಿ ಬಡರಾಷ್ಟ್ರಗಳಿಗೆ ಸಾಂತ್ವನವಷ್ಟೇ ದೊರಕಿತು. ಬಂಡವಾಳಶಾಹಿ ರಾಷ್ಟ್ರಗಳು ಮತ್ತೊಮ್ಮೆ ತಮ್ಮ ನೀತಿಗಳನ್ನು ಪುನರ್‌ರಚಿಸಿಕೊಂಡವು. ಶಕ್ತಿಶಾಲಿ ರಾಷ್ಟ್ರಗಳಿಗೆ ಶಕ್ತಿಹೀನ ರಾಷ್ಟ್ರಗಳು ನೈಸರ್ಗಿಕ ಸಂಪನ್ಮೂಲಗಳನ್ನು ಕೊಡುವ ಭರವಸೆಯಿತ್ತು ಆರ್ಥಿಕ ಸಹಾಯವನ್ನು ಯಾಚಿಸಿದವು. ಇದು ಅಂತರ ರಾಷ್ಟ್ರೀಯ ಪರಿಸರ ಸಮ್ಮೇಳನಗಳ ಒಟ್ಟು ಫಲಿತಾಂಶ ಮತ್ತು ಪರಿಣಾಮ ! ಆದರೆ ಈ ಸಮ್ಮೇಳನಗಳ ಪ್ರಭಾವದಿಂದಾಗಿ ಜಗತ್ತಿನಾದ್ಯಂತ ಪರಿಸರ ಸಂಘಟನೆಗಳು, ಸಮ್ಮೇಳನಗಳು ಕಾಣಿಸಿಕೊಂಡವು. ಇದರರ್ಥ ಪರಿಸರ ಸಮಸ್ಯೆಗೊಂದು ಪರಿಹಾರ ದೊರಕಿತೆಂಬುದು ಅಲ್ಲ. ಬದಲಾಗಿ ಪರಿಸರದ ಮೂಲಕ ವ್ಯವಸ್ಥಿತ ರಾಜಕೀಯವೊಂದನ್ನು ಹುಟ್ಟುಹಾಕುವ ವೇದಿಕೆ ನಿರ್ಮಾಣಗೊಂಡಿತು. ಈ ವೇದಿಕೆಯ ಮೂಲಕ ಯಜಮಾನಿಕೆಯನ್ನು ಸ್ಥಾಪಿಸುವ ಹಾಗೂ ಶೋಷಣೆ ನಡೆಸುವ ಕೆಲಸಗಳು ಅಸ್ತಿತ್ವಕ್ಕೆ ಬಂದವು. ಪರಿಸರ ಚಳವಳಿಯು ಪರಿಸರವನ್ನೇ ಮರೆತುಬಿಡುವ, ಪರಿಸರವಾದಿಗಳು ಅವಕಾಶವಾದಿಗಳಾಗುವ ಹಾಗೂ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳು ಮೂಲೆಗುಂಪಾಗುವ ಅಪಾಯಕಾರಿ ಧೋರಣೆಗಳು ಕಾಣಿಸಿಕೊಳ್ಳಲಾರಂಭಿಸಿದವು.

ಅಧಿಕಾರಶಾಹಿ, ಸರಕಾರ ಮತ್ತು ಉದ್ಯಮಪತಿಗಳ ಕೂಡುವಿಕೆಯಿಂದಾಗಿ ಚಳವಳಿಗಳ ಸ್ವರೂಪವೇ ಬದಲಾಯಿತು. ಶ್ರೀಮಂತವರ್ಗ ತನ್ನ ಅನುಕೂಲಕ್ಕೆ ತಕ್ಕಂತೆ ಚಳವಳಿಯಲ್ಲಿ ಮಾರ್ಪಾಡು ಮಾಡಿಕೊಂಡಿತು. ಯಾವುದೋ ಒಂದು ಘಟನೆಯನ್ನು ವಿರೋಧಿಸಿ ನಡೆಯುವ ಚಳವಳಿಗಳ ಸಂಖ್ಯೆಯೇ ಹೆಚ್ಚಾಯಿತು. ಇದು ನಮ್ಮ ಪ್ರದೇಶದಲ್ಲಿ ಉದ್ದಿಮೆಗಳು ಸ್ಥಾಪನೆಗೊಳ್ಳುವುದು ಬೇಡ ಎನ್ನುವ ಸಂಕುಚಿತ ಮನೋಭಾವದ ಚಳವಳಿ. ಇದು ಉದ್ದಿಮೆಗಳನ್ನು ಸ್ಥಳಾಂತರಿಸುವ ಕೆಲಸವನ್ನಷ್ಟೇ ಮಾಡಲು ಸಾಧ್ಯ. ಪರಿಸರ ಜಾಗತಿಕ ನೆಲೆಯಲ್ಲಿ ಚರ್ಚೆಗೊಳ್ಳುತ್ತಿರುವ ವಸ್ತು ಎನ್ನುವುದು ಇಲ್ಲಿ ಅಪ್ರಸ್ತುತ. ಅದೇ ರೀತಿ ಪರಿಸರದ ಹೆಸರಿನಲ್ಲಿ ಪ್ರಚಾರ ಗಿಟ್ಟಿಸಿಕೊಳ್ಳುವ, ಹಣ ಸಂಗ್ರಹಿಸುವ, ರಾಜಕೀಯ ಲಾಭ ಪಡೆಯುವ ಹಾಗೂ ಪ್ರಶಸ್ತಿಗಳನ್ನು ಪಡೆದುಕೊಳ್ಳುವ ಜನರು ಸದಾ ಚುರುಕಾಗಿ ಕೆಲಸ ಮಾಡುತ್ತಿರುತ್ತಾರೆ. ಇವರದು ನಿರಂತರ ಪರಿಸರ ಹೋರಾಟ. ಇವರಿಗೆ ಪರಿಸರ ನಿರಂತರವಾಗಿ ಚರ್ಚೆಯ ವಸ್ತುವಾಗಿಯೇ ಇರಬೇಕು. ಖಚಿತವಾದ ಸೈದ್ಧಾಂತಿಕ ನಿಲುವುಗಳನ್ನು ಹೊಂದಿರದ ಪರಿಸರ ಹೋರಾಟಗಾರರ ಸಂಖ್ಯೆಯೇ ಹೆಚ್ಚಿನದು. ನಿಜವಾದ ಪರಿಸರ ಚಳವಳಿಗಳಲ್ಲಿ ಉತ್ಪಾದಕ ಮತ್ತು ಅನುತ್ಪಾದಕ ವರ್ಗಗಳ ನಡುವಿನ ಸಂಬಂಧ, ಯಜಮಾನಿಕೆಯ ಸಂಕೇತಗಳಾದ ರಾಜಕೀಯ ಮತ್ತು ಅಧಿಕಾರದ ಪ್ರಶ್ನೆಗಳು ಸೇರಿಕೊಂಡಿರಬೇಕಾಗುತ್ತದೆ. ಆದರೆ ಇವು ಯಾವುವೂ ಇಲ್ಲದೆ ಚಳವಳಿಗಳು ನಡೆಯುತ್ತಿರುವುದು ಅವುಗಳ ಹಿಮ್ಮೆಟ್ಟುವಿಕೆಗೆ ಕಾರಣವಾಗಿದೆ. ಬಂಡವಾಳಶಾಹಿ ವ್ಯವಸ್ಥೆ ಇದರ ಸಂಪೂರ್ಣ ಲಾಭವನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾಗಿದೆ.

ಮೋಹನ್ ಕೃಷ್ಣ ರೈ ಕೆ.
ಅಧ್ಯಾಪಕ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ,



ಭೌತಿಕವಾದಿ ದೃಷ್ಟಿಕೋನದಿಂದ ೧೨ನೇ ಶತಮಾನದಲ್ಲಿ ಆಗಿಹೋದ ಬಸವಣ್ಣ ಮತ್ತು ಆತ ಹುಟ್ಟುಹಾಕಿದ ಕ್ರಾಂತಿಯ ಭೌತಿಕ ನೆಲೆಗಟ್ಟನ್ನು ಪರಿಚಯಿಸುವ ಸುತ್ತ್ಯಯತ್ನವನ್ನು ಪಿ. ಎಸ್. ಪಾಟೀಲರು ''ಕ್ರಾಂತಿದೂತ ಬಸವಣ್ಣ'' ಪುಸ್ತಕದಲ್ಲಿ ಕೈಗೊಂಡಿದ್ದಾರೆ. ಈ ದಾರಿಯಲ್ಲಿ ಇನ್ನೂ ಹೆಚ್ಚು ಮೌಲಿಕವಾದ ಕೃತಿಗಳು ಹೊರಬರಲೆಂದು ಅವರು ೧೯೬೭ರಲ್ಲಿ ತಮ್ಮ ಮುನ್ನುಡಿಯಲ್ಲಿ ಹಾರೈಸಿದ್ದರು. ಅವರ ಹಾರೈಕೆ ಶತಮಾನದ ಕೊನೆಯಾದರೂ ಇನ್ನೂ ಫಲಿಸದೇ ಇರುವುದನ್ನು ನಾವು ಕಾಣುತ್ತೇವೆ.

ಸಮಾಜಶಾಸ್ತ್ರೀಯ ವಿಷಯಗಳು ಅಭಿವೃದ್ಧಿಗೊಂಡು ಅರ್ಥಶಾಸ್ತ್ರ, ಸಮಾಜಶಾಸ್ತ್ರ, ವೈದ್ಯಶಾಸ್ತ್ರ, ರಾಜಕೀಯಶಾಸ್ತ್ರ, ನೀತಿಶಾಸ್ತ್ರ ಹೀಗೆ ಹತ್ತು ಹಲವಾರು ಶಾಖೆಗಳಾಗಿ ವಿಂಗಡನೆ ಆಗುವ ಪೂರ್ವದಲ್ಲಿ ಮಾನವ ಸಮಾಜದ ಮೇಲ್‌ಸ್ತರದ ಒಟ್ಟು ತಿರುಳನ್ನು ಆ ಕಾಲದ ''ಧರ್ಮ'' ಪ್ರತಿನಿಧಿಸುತ್ತಿತ್ತು. ಆ ಕಾಲದ ಮಠಗಳೆಂದರೆ ಶಿಕ್ಷಣ, ವೈದ್ಯಕೀಯ, ನ್ಯಾಯದಾನದಂತಹ ಸಾಮಾಜಿಕ ಅವಶ್ಯಕತೆಗಳನ್ನು ನೆರವೇರಿಸಬಲ್ಲ ಕೇಂದ್ರಗಳಾಗಿದ್ದವು.

ಸಮಾಜದ ಉತ್ಪಾದಕ ಶಕ್ತಿ ಅಭಿವೃದ್ಧಿಗೊಂಡು ಹೊಸ ಹೊಸ ವರ್ಗಗಳು ಕಾಣಿಸಿಕೊಂಡಾಗ ಹಳೆಯ ವ್ಯವಸ್ಥೆಯಲ್ಲಿ ಅವುಗಳಿಗೆ ಪ್ರಾತಿನಿಧ್ಯ ಸಿಕ್ಕಿರದಿದ್ದ ಸನ್ನಿವೇಶದಲ್ಲಿ ಉದಯೋನ್ಮುಖ ವರ್ಗಗಳು ಸಮಾಜದ ಮೇಲ್‌ಸ್ತರದಲ್ಲಿ ತಮ್ಮ ಪ್ರಾತಿನಿಧ್ಯ ಪಡೆಯಲು ಹಳೆಯ ವ್ಯವಸ್ಥೆಗೆ ವಿರುದ್ಧವಾಗಿ ಸೆಟೆದೆದ್ದು ತಾವು ಅಪೇಕ್ಷಿಸುವ ನ್ಯಾಯಕ್ಕಾಗಿ ಯುದ್ಧ ಘೋಷಣೆ ಮಾಡುತ್ತವೆ. ಇದು ಇತಿಹಾಸದಲ್ಲಿ ನಡೆದುಕೊಂಡು ಬಂದ ದಾರಿ. ಇಂಥ ಯುದ್ಧ ಸಾರುವಾಗ ಉದಯೋನ್ಮುಖ ವರ್ಗ ಒಂಟಿಯಾಗಿ ದಾಳಿ ನಡೆಸದು. ಅದಕ್ಕೆ ವ್ಯಾಪಕ ಜನ ಬೆಂಬಲ ಬೇಕು. ಇಂಥ ವ್ಯಾಪಕ ಜನ ಬೆಂಬಲ ಅಪೇಕ್ಷಿಸಿ ಹಳೆಯದರ ಅನ್ಯಾಯದ ವಿರುದ್ಧ ನ್ಯಾಯ ಪತಾಕೆಯನ್ನು, ಕ್ರಾಂತಿ ಪತಾಕೆಯನ್ನು ಈ ವರ್ಗ ಜನರ ಮುಂದೆ ಇಡುತ್ತದೆ. ಮಧ್ಯಯುಗದ ಸಂದರ್ಭದಲ್ಲಿ ಇಂಥ ಪತಾಕೆಗಳು ಧಾರ್ಮಿಕ ಪತಾಕೆಗಳೇ ಆಗಿರುತ್ತಿದ್ದವು.




ಪುಟ : ೯೬ ಬೆಲೆ : ರೂ. ೩೫
ದಿ. ಬಂಥನಾಳ ವೃಷಭಲಿಂಗೇಶ್ವರ ವಿದ್ಯಾವರ್ಧಕ ಟ್ರಸ್ಟ್

ಯುರೋಪಿನಲ್ಲಿನ ಪ್ರೊಟೆಸ್ಟಂಟ್ ಚಳವಳಿ, ನಮ್ಮ ದೇಶದಲ್ಲಿ ಸಿಖ್ ಪಂಥ, ಭಕ್ತಿ ಪಂಥ, ದಾಸ, ಶರಣ ಚಳವಳಿಗಳು ಇದಕ್ಕೆ ಸಾಕ್ಷಿ. ನಮ್ಮ ದೇಶದಲ್ಲಿ ನಡೆದುಹೋದ ಇಂಥ ಧಾರ್ಮಿಕ ಪತಾಕೆಗಳ ಅಡಿಯಲ್ಲಿನ ಕ್ರಾಂತಿಗಳಲ್ಲಿ ೧೨ನೇ ಶತಮಾನದ ಬಸವಣ್ಣನವರ ಕ್ರಾಂತಿ ತನ್ನ ಉದ್ದೇಶಗಳ ಸ್ಪಷ್ಟತೆ, ಸಾಮಾಜಿಕ ನ್ಯಾಯದ ವ್ಯಾಪಕತೆ ದೃಷ್ಟಿಯಿಂದ ಆ ಕಾಲಘಟ್ಟದ ಭರತಖಂಡದ ಇತಿಹಾಸದಲ್ಲಿಯೇ ಒಂದು ವಿಶಿಷ್ಟವಾದ ಅಧ್ಯಾಯವನ್ನು ತೆರೆಯಿತು ಮತ್ತು ಸಾವಿರಾರು ವರ್ಷಗಳಿಂದ ಸಮಾಜವನ್ನು ತನ್ನ ಕ್ರೂರಬಂಧನದಲ್ಲಿ ಇಟ್ಟಿದ್ದ ಚಾತುರ್ವರ್ಣ್ಯ ಪದ್ಧತಿಯ ಚೌಕಟ್ಟಿಗೆ ಪ್ರಥಮಬಾರಿಯಾಗಿ ಅರ್ಥಪೂರ್ಣ ಲಗ್ಗೆ ಇಟ್ಟಿತು.

ಬಸವ ಚಳವಳಿಯ ಸಾಮಾಜಿಕ ತಿರುಳು, ಆ ಕಾಲಘಟ್ಟದ ಅವಶ್ಯಕತೆ ಮತ್ತು ಮಾರ್ಗದ ಆಯ್ಕೆಯಲ್ಲಿ ಬಸವಣ್ಣನವರ ಚಾಣಾಕ್ಷತೆ ಇವುಗಳನ್ನು ವಾಸ್ತವಿಕ ನೆಲೆಗಟ್ಟಿನ ಮೇಲೆ ನೋಡಲು ಪಾಟೀಲರು ಬಹಳಷ್ಟು ಶ್ರಮಪಟ್ಟಿದ್ದಾರೆ. ಅವರ ಈ ಯತ್ನ ಹೊಸ ಮೈಲುಗಲ್ಲಾಗಿದ್ದರಿಂದ ಸ್ವಾಭಾವಿಕವಾಗಿಯೇ ಅವರ ಕಷ್ಟ ಇಮ್ಮಡಿಯಾಗಿರಲೂ ಸಾಕು. ಬಸವ ಚಳವಳಿಯನ್ನು ಭೌತಿಕವಾದಿ ದೃಷ್ಟಿಕೋನದಿಂದ ನೋಡಬೇಕೆಂಬ ಅವರ ಅಭಿಲಾಷೆ ಒಮ್ಮೊಮ್ಮೆ ಅತಿರೇಕದ ತೀರ್ಮಾನದತ್ತ ಕೊಂಡೊಯ್ಯುತ್ತದೆ. ''೧೨ನೆಯ ಶತಮಾನದಲ್ಲಿ ಆರಂಭವಾದ ಪ್ರಜಾಪ್ರಭುತ್ವ ಕ್ರಾಂತಿ ಇಂದಿಗೂ ಪೂರ್ಣ ಸಫಲತೆ ಪಡೆದಿಲ್ಲ'' (ಪು. ೪೪) ಎಂಬ ಅವರ ಮಾತು ಆ ಕಾಲಕ್ಕೆ ಅವಾಸ್ತವಿಕ ಎನಿಸದೆ ಇರದು. ೧೨ನೇ ಶತಮಾನದಲ್ಲಿನ ಉತ್ಪಾದಕ ಶಕ್ತಿಯ ದೃಷ್ಟಿಯಿಂದ ಆ ಕಾಲಘಟ್ಟದಲ್ಲಿ ಸ್ಫೋಟಗೊಂಡ ಕ್ರಾಂತಿ ಪ್ರಜಾಪ್ರಭುತ್ವ ಕ್ರಾಂತಿ ಆಗಿರಲು ಸಾಧ್ಯವಿರಲಿಲ್ಲ. ಯಾವುದೇ ಧಾರ್ಮಿಕ ಅಥವಾ ಸಾಮಾಜಿಕ ಕ್ರಾಂತಿಯ ಘೋಷಿತ ಉದ್ದೇಶ ಎಷ್ಟೇ ಉದಾತ್ತವಾಗಿದ್ದರೂ ಅದು ಕಾಲಘಟ್ಟದಲ್ಲಿನ ಉತ್ಪಾದಕ ಶಕ್ತಿಗಳನ್ನು ಮೀರಿ ಪರಿಹಾರ ನೀಡದು ಎಂಬ ಸತ್ಯವನ್ನು ಮರೆಯಲಾಗದು. ''ಪ್ರಜಾಪ್ರಭುತ್ವ ಕ್ರಾಂತಿ'' ಎನ್ನುವ ಪಾಟೀಲರ ಕಲ್ಪನೆಗೆ ೩೪ನೇ ಪುಟದಲ್ಲಿ ವ್ಯತಿರಿಕ್ತ ಉಲ್ಲೇಖವಿರುವುದನ್ನು ಗಮನಿಸಬೇಕು: ''ಇಂದಿಗೂ ಲಿಂಗಾಯತರಲ್ಲಿ ಎರಡು ವಿಚಾರ ಪ್ರಭೇದಗಳಿವೆ. ಮಠ ಪೀಠಾಧೀಶರು ಹಾಗೂ ಭಕ್ತರು (ಆಸ್ತಿ ಗಳಿಸಿದ-ಮೇಲ್ವರ್ಗದ ಕೆಲವರು ಹಾಗೂ ಅವರ ಶ್ರೀಮಂತ ಬೆಂಬಲಿಗರು) ವರ್ಣಾಶ್ರಮ ಧರ್ಮ, ವೈದಿಕತೆ ಮತ್ತು ಪೀಠಾಧೀಶರ ಬಗೆಗೆ ಆದರ ತೋರುತ್ತಿದ್ದರೆ ಭಕ್ತರಾದ ಬಸವ ಪಕ್ಷಪಾತಿಗಳು ಅದನ್ನೆಲ್ಲ ನಿರಾಕರಿಸುತ್ತಾರೆ.'' ಘೋಷಿತ ಗುರಿಯಿಂದ ಕಾಲಕ್ರಮೇಣ ಧರ್ಮಗಳು ಹೇಗೆ ವಿಮುಖವಾಗುತ್ತವೆಯೋ ಅದೇ ರೀತಿಯಲ್ಲಿ ಬಸವ ಚಳವಳಿ ಕಾಲಕ್ರಮೇಣ ಪೂರ್ತಿಯಾಗಿ ಆಳುವ ವರ್ಗದ ಸೊತ್ತಾದಲ್ಲಿ ಆಶ್ಚರ್ಯಪಡಬೇಕಿಲ್ಲ. ವೈದಿಕ ಧರ್ಮಕ್ಕೆ ಪ್ರತಿಯಾಗಿ ಉದಯಿಸಿದ ಜೈನಧರ್ಮ ಮುಂದೆ ಕಾಲಾಂತರದಲ್ಲಿ ವೈದಿಕ ಧರ್ಮವನ್ನು ಮೀರಿಸುವಷ್ಟು ಮಡಿವಂತಿಕೆ ಮತ್ತು ಕಂದಾಚಾರಗಳಿಗೆ ಅಂಟಿಕೊಂಡಿದ್ದನ್ನು ಕಾಣುತ್ತೇವೆ. ಅದೇ ತೆರನಾಗಿ ಬಸವಣ್ಣನವರಿಂದ ಪುರೋಗಾಮಿ ಚಳವಳಿಯಾಗಿ ಜನ್ಮ ತಾಳಿದ ಲಿಂಗಾಯತ ಕ್ರಾಂತಿ ಮಠಾಧೀಶರ ಪಾದಪೂಜೆಯಂತಹ ಕಂದಾಚಾರಕ್ಕೆ ಬಲಿಯಾಗಿದೆ. ಬಹಳಷ್ಟು ಮಠಗಳಿಗೆ ಪೀಠಾಧಿಕಾರಿಗಳನ್ನು ಆಯ್ಕೆ ಮಾಡುವಾಗ ಅವರು ಕನ್ನಡ ಪಂಡಿತರೇ ಹೇಗೆ ಎನ್ನುವ ಗೊಡವೆಗೆ ಯಾರೂ ಹೋಗುವುದಿಲ್ಲ. ಕಾಶೀ ವಿದ್ಯಾಪೀಠದ ಸಂಸ್ಕೃತ ಪಂಡಿತನಾಗಿರಬೇಕು ಎನ್ನುವುದನ್ನು ನೋಡುತ್ತಾರೆ. ಲಿಂಗಾಯತ ಧರ್ಮ ''ಕೆಳಗಿನ ವರ್ಗದ ಚಳವಳಿಯಾಗಿ ಆರಂಭವಾಗಿ ಕ್ರಮೇಣ ಮೇಲ್ವರ್ಗದ'' ಧರ್ಮವಾಗಿ ಉಳಿಯಿತೆನ್ನುವುದು ಐತಿಹಾಸಿಕ ಭೌತಿಕವಾದದ ವಿಶೇಷ ವಿಶ್ಲೇಷಣೆಗೆ ಸರಿಹೊಂದುವ ಮಾತೇ ಆಗಿರುತ್ತದೆ.

''ಈ ಹೊಸ ಮತ, ಹೊಸ ಸಮಾಜ ದರ್ಶನ, ಅಂದಿನ ಶ್ರಮಜೀವಿ ವರ್ಗಕ್ಕೆ ಸೇರಿದ ಜನ ವಿಭಾಗಗಳ ಭವಿಷ್ಯ ದರ್ಶನವೆಂದು ನಾವು ಕಂಡಿದ್ದೇವೆ'' (ಪುಟ ೪೬) ಎನ್ನುವ ಮಾತಿನಲ್ಲಿ ೨೦ನೇ ಶತಮಾನದ ತಿಳಿವಳಿಕೆಯನ್ನು ೧೨ನೇ ಶತಮಾನಕ್ಕೆ ಸೇರಿಸಿ ಮಾತನಾಡಿದಂತಾಗುತ್ತದೆ. ಆ ಕಾಲದಲ್ಲಿ ಕನ್ನಡ ಭಾಷೆಯಲ್ಲಿ ವಚನ ರಚಿಸಿದ ಕಾಯಕ ಜೀವಿಗಳನ್ನು ''ಶ್ರಮಜೀವಿ'' ಎಂದು ಕರೆಯಲಾಗದು. ''ಶ್ರಮಜೀವಿ'' ಎಂಬ ಐತಿಹಾಸಿಕ ಕಲ್ಪನೆ ಔದ್ಯಮಿಕ ಕ್ರಾಂತಿಯ ನಂತರದ ಬಂಡವಾಳ ವ್ಯವಸ್ಥೆಯಲ್ಲಿ ಕಾಣಬರುತ್ತದೆ. ಅದಕ್ಕೆ ಎದುರಾಗಿ ''ಶ್ರಮಜೀವಿ'' ಎನ್ನುವ ಪದ ಬಂದಿದೆ. ಅದು ೧೨ನೇ ಶತಮಾನದ ಕಾಯಕ ಜೀವಿಗಳಿಗೆ ಅನ್ವಯವಾಗಲಾರದು. ಮಧ್ಯಯುಗದಲ್ಲಿ ವೃತ್ತಿ ನಿರತ ಗುಂಪುಗಳು ಸಾಮಾಜಿಕ ಉತ್ಪಾದನೆಯಲ್ಲಿ ಉನ್ನತ ಹಂತ ತಲುಪಿ ತಮ್ಮ ಉತ್ಪಾದಕ ಶಕ್ತಿಯಿಂದಾಗಿ ಹೊಸ ಆರ್ಥಿಕ ಗುಂಪುಗಳಾಗಿ (ಗಿಲ್ಡ್ ಎಂತಲೂ ಕರೆಯಬಹುದು) ಅಭಿವೃದ್ಧಿ ಹೊಂದುತ್ತಿದ್ದಾಗ ಭಾರತೀಯ ಸಮಾಜದಲ್ಲಿನ ಜಾತಿ ಪದ್ಧತಿ ಇನ್ನೂ ಗಾಢವಾಗಿಯೇ ಉಳಿದಿತ್ತು. ಅದನ್ನು ಧಿಕ್ಕರಿಸಿ ಮುಂದೆ ಸಾಗಬೇಕಾದ ಅವಶ್ಯಕತೆಯಿಂದಾಗಿ ವೃತ್ತಿನಿರತ ಸಂಘಗಳೆಲ್ಲ ಒಂದಾಗಬೇಕಾದ ಸಂದರ್ಭವಿದ್ದಿತು. ಇಂಥ ವೃತ್ತಿನಿರತ ಸಂಘಗಳ ಉತ್ಪಾದನೆಗೆ ಮಾರುಕಟ್ಟೆಯ ಸೌಲಭ್ಯ ಕಲ್ಪಿಸುವಲ್ಲಿ ಕೊಂಡಿಯಂತೆ ಕಾರ್ಯ ನಿರ್ವಹಿಸುತ್ತಿದ್ದ ವ್ಯಾಪಾರಿ ಜನಾಂಗ, ಅಂದರೆ ಬಣಜಿಗ ಸಮಾಜ, ಈ ವೃತ್ತಿನಿರತ ಸಂಘಗಳನ್ನು ಒಂದುಗೂಡಿಸುವಲ್ಲಿಯೂ ಕೊಂಡಿಯಾಗಿ ಮುಂಚೂಣಿಯ ಪಾತ್ರ ವಹಿಸಿದ್ದರಿಂದ ೧೨ನೇ ಶತಮಾನದ ಕ್ರಾಂತಿಯ ನಾಯಕತ್ವ ಮತ್ತು ಮುಂದೆ ಅದರ ವಾರಸುದಾರಿಕೆಯನ್ನು ಬಣಜಿಗ ಸಮಾಜ ಪಡೆದುದು ಸ್ವಾಭಾವಿಕವಾಗಿರುತ್ತದೆ. ಒಟ್ಟಿನಲ್ಲಿ ೧೨ನೇ ಶತಮಾನದಲ್ಲಿ ಬಸವಣ್ಣನವರು ಉದಯೋನ್ಮುಖ ವರ್ಗದ ವಕ್ತಾರರಾಗಿ, ಅದರ ನಾಯಕರಾಗಿ ಇತಿಹಾಸದಲ್ಲಿ ನಿಲ್ಲುತ್ತಾರೆ. ಅವರ ಕ್ರಾಂತಿ ಎಷ್ಟು ಬೇಗ ಜನಾಂದೋಲನವಾಗಿ ಬೆಳೆದುಬಂದಿತೋ ಅಷ್ಟೇ ತೀವ್ರಗತಿಯಲ್ಲಿ ಅದನ್ನು ಹತ್ತಿಕ್ಕಲಾಯಿತು. ಆದರೆ ಆ ಕ್ರಾಂತಿ ನೀಡಿದ ಸ್ಫೂರ್ತಿಯ ಸಂದೇಶ ಇಂದಿಗೂ ಜೀವಂತವಾಗಿರುವುದು ಆ ಮಹಾನಾಯಕನಿಗೆ ಸಲ್ಲಬೇಕಾದ ಗೌರವವಾಗಿರುತ್ತದೆ. ಬಸವಣ್ಣನವರ ಕುರಿತು ಎಷ್ಟೋ ಪುರಾಣಗಳು, ರಗಳೆಗಳು, ಚರಿತ್ರೆಗಳು ರಚನೆಯಾಗಿವೆ. ಆದರೆ ಐತಿಹಾಸಿಕ ಭೌತಿಕವಾದಿ ದೃಷ್ಟಿಕೋನದಿಂದ ೧೨ನೇ ಶತಮಾನದ ಕ್ರಾಂತಿಯ ಅಧ್ಯಯನ ವ್ಯಾಪಕವಾಗಿ ನಡೆಯಬೇಕಾದುದು ಇಂದಿನ ಅಗತ್ಯವಾಗಿದೆ. ಹಿಂದಿನ ಚಳವಳಿಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಮುಂದಿನದನ್ನು ರೂಪಿಸುವುದು ಕಷ್ಟದ ಕೆಲಸ. ಈ ದೃಷ್ಟಿಯಿಂದ ಪಿ. ಎಸ್. ಪಾಟೀಲರ ಕೃತಿ ಇಂದಿಗೂ ಸಂಶೋಧಕರಿಗೆ, ಹೊಸ ದೃಷ್ಟಿಕೋನದಿಂದ ಅಧ್ಯಯನ ಕೈಗೊಳ್ಳುವ ಜನರಿಗೆ ಮಾರ್ಗದರ್ಶನ ನೀಡುವ ಕೃತಿಯಾಗಿ ಹೊರಹೊಮ್ಮಿದೆ. ಖಂಡಿತವಾಗಿಯೂ ಈ ಕೃತಿ ಓದುಗರಿಗೆ, ವಿದ್ಯಾರ್ಥಿಗಳಿಗೆ ಒಂದು ಅಮೂಲ್ಯ ಕೃತಿಯಾಗಿದೆ.

ರವೀಂದ್ರ ಹಳಿಂಗಳಿ
ವಕೀಲರು, ಗಣಪತಿಗಲ್ಲಿ, ಜಮಖಂಡಿ-೫೮೭೩೦೧, ಬಾಗಲಕೋಟೆ ಜಿಲ್ಲೆ

## ಡಾ॥ ರಹಮತ್ ತರೀಕೆರೆ ಅವರ

# ಅಂಡಮಾನ್ ಪ್ರವಾಸ ಕುರಿತು



**ಡಾ॥** ರಹಮತ್ ತರೀಕೆರೆ ಅವರಿಗೆ ಸುತ್ತಾಟವೆಂದರೆ ಬಲು ಪ್ರೀತಿ. ಸೂಕ್ಷ್ಮ ಸಂವೇದನಾಶೀಲ ಅಂತಃಕರಣವುಳ್ಳ ಇವರಿಗೆ ಅಲಕ್ಷಿತ ಸಮಾಜಗಳ ದೀನಾನಾಥ ಬದುಕಿನ ಬಗ್ಗೆ ಅಪಾರ ದುಂಬಾಲು. ಇವರ ದೇಶಾಟನೆ ಕೇವಲ ಪ್ರವಾಸ ಮಾತ್ರವಲ್ಲ ಆ ಸಮಯದಲ್ಲಿ ಅವರು ಕಂಡುಂಡ ಸಹಮಾನವರ ಬದುಕಿನ ಬಗೆಗೆ ವಿಸ್ಮಯಕರ ಸಂಗತಿಗಳನ್ನು ಓದುಗ ವಲಯಕ್ಕೆ ಪರಿಚಯಿಸುತ್ತಾರೆ. ರಹಮತ್ ಅವರ ಪ್ರವಾಸ ಕಥನಗಳನ್ನು ಓದುತ್ತಾ ಹೋದಂತೆ ಅಂಗೈಯಲ್ಲಿರುವ ಬರವಣಿಗೆಯ ಮೂಲಕವೇ ಡಿಸ್ಕವರಿ ಚಾನಲ್ ಅಥವಾ ನ್ಯಾಷನಲ್ ಜಿಯಾಗ್ರಫಿಕ್ ಚಾನಲ್‌ಗಳನ್ನು ವೀಕ್ಷಿಸಿದ ಅನುಭವವಾಗುತ್ತದೆ. ಉದಾಹರಣೆಗೆ, ೧೯೯೯ರ ನವೆಂಬರ್‌ನಿಂದ ೨೦೦೦ ಡಿಸೆಂಬರ್‌ವರೆಗೆ 'ಹೊಸತು' ಮಾಸಿಕದಲ್ಲಿ ಬಂದಿದ್ದ ಅವರ ಅಂಡಮಾನ್ ಪ್ರವಾಸ ಕುರಿತಾದ ಲೇಖನಗಳ ಪುಸ್ತಕವನ್ನು ನೋಡಬಹುದು. ರಹಮತ್ ಪ್ರವಾಸ ಹೊರಟರೆಂದರೆ ಅವರ ನೆನಪಿನ ಜೋಳಿಗೆಯಲ್ಲಿ ತರಾವರಿ ಅನುಭವಗಳು. ಕಿನ್ನರ ಕಥೆಗಳು, ಆರ್ಥಿಕ, ಸಾಮಾಜಿಕ, ಇತಿಹಾಸ, ಶೈಕ್ಷಣಿಕ ಸುದ್ದಿ ಸಂಗತಿಗಳು, ಎಲ್ಲಕ್ಕಿಂತ ಮಿಗಿಲಾಗಿ ವಾಸ್ತವ ಬದುಕಿನ ಕಠೋರ ಕ್ಷಣಗಳು, ರೂಕ್ಷ ಧಾರ್ಮಿಕ ದುರಂತಗಳ ಚಿತ್ರಗಳು ತುಂಬಿ ತುಳುಕುತ್ತವೆ. 'ಅಂತೂ ಎಲ್ಲರಂತಲ್ಲ ನಮ್ಮ ಈ ಸಾಬಣ್ಣ' ಎಂಬ ಉದ್ಗಾರ ಸಣ್ಣಗೆ ನಮ್ಮಿಂದ ಹೊರಸೂಸುವಂತೆ ಇವರ ಬರವಣಿಗೆ. ಮಲೆನಾಡಿನ ಸೆರಗಂಚಿನ ತರೀಕೆರೆಯಲ್ಲಿ ಹುಟ್ಟಿಬೆಳೆದ ಈ ಜನ ಘಟ್ಟದ ಮೇಲಕ್ಕೂ ಅತ್ತ ಕಡಲಕರೆಗೂ ಅದೆಷ್ಟೋ ಸಲ ಹತ್ತಿ ಇಳಿದು ಸುತ್ತಿ ಬಂದಿದ್ದಾರೆ. ಕನ್ನಡ ನೆಲದ ಗಾಳಿ ಬೆಳಕು ಬೆಂಕಿ ಬಿಸಿಲುಗಳನ್ನು ಅವರು ಚೆನ್ನಾಗಿ ಬಲ್ಲರು. ಮಲೆನಾಡಿನ ನಿಸರ್ಗ ಸೌಂದರ್ಯಕ್ಕೆ ಮಾರುಹೋಗಿರುವಂತೆಯೇ ಉತ್ತರ ಕರ್ನಾಟಕದ ಬಯಲು ಬಂಡಾಟದ ಬದುಕಿಗೂ ತೆರೆದುಕೊಂಡಿದ್ದಾರೆ. ಈ ಸುತ್ತಾಟದ ಹುಚ್ಚಿನಿಂದ ಏಕಾಂಗಿಯಾಗಿ ಸ್ನೇಹಿತರ, ಕುಟುಂಬದವರ ಒಡನಾಡಿಯಾಗಿ ಕನ್ನಡ ಸೀಮೆಯನ್ನು ಸುತ್ತುಬಂದಿದ್ದಾರೆ. ಸಾಹಿತ್ಯ ಚಟುವಟಿಕೆಗಳಲ್ಲಿ ಭಾಗವಹಿಸುವುದೊಂದು ನೆಪವಾಗಿ ಅವರು ಎಲ್ಲೆಂದರಲ್ಲಿಗೆ ಸುತ್ತುವುದು ಈ ಪ್ರವೃತ್ತಿಯಿಂದಲೇ. ರಹಮತ್ ಕನ್ನಡ ವಿಶ್ವವಿದ್ಯಾಲಯಕ್ಕೆ ಸೇರ್ಪಡೆಯಾದ ಮೇಲೆ ಕಬ್ಬು ತಿನ್ನಲು ಕೂಲಿ ಕೊಟ್ಟಂತಾಗಿ ಅವರ ಅಲೆಮಾರಿ ಜೀವನಕ್ಕೊಂದು ಗರಿ ಮೂಡಿದಂತಾಯಿತು. ಅದರ ಫಲವಾಗಿ 'ಕರ್ನಾಟಕದ ಸೂಫಿಗಳು' (೧೯೯೮) ಎಂಬ ಅವರ ಕೃತಿ ಪ್ರಕಟವಾಯಿತು. ಕರ್ನಾಟಕದ ಧಾರ್ಮಿಕ ಪಂಥಗಳ 'ದೋಸ್ತಾರದೀನ್' ಎಂದರೆ ಧಾರ್ಮಿಕ ಗೆಳೆತನ ಕಾಲಕಾಲಕ್ಕೆ ಹೇಗೆ ಬೆಳೆದುಬಂದಿದೆ, ಅಮಾಯಕ ಸಾಮಾನ್ಯ ಜನ ಹೇಗೆ ಇಂಥ ಅಲುಗದ ಧಾರ್ಮಿಕ ಹೊಂದಾಣಿಕೆಯನ್ನು ಮಾಡಿಕೊಂಡಿದ್ದಾರೆ ಎಂಬುದನ್ನು ಪ್ರತ್ಯಕ್ಷ ಕಂಡು, ಅನುಭವಿಸಿ, ಚಿಂತಿಸಿ, ಧ್ಯಾನಿಸಿ ತಂದ ಕೃತಿ ಇದು.

ರಹಮತ್ **'ಕರ್ನಾಟಕದ ಸೂಫಿಗಳು'** ಕೃತಿ ರಚನೆಯ ಕಾಲಕ್ಕೆ ಇತ್ತ ಕಾವೇರಿಯ ದಕ್ಷಿಣಕ್ಕೂ ಅತ್ತ ತುಂಗಭದ್ರೆಯ ಉತ್ತರೋತ್ತರ ಗಡಿನಾಡುಗಳಿಗೆಲ್ಲ ಎಡತಾಕಿ ಬಂದರು. ಕರ್ನಾಟಕದ ಗಡಿ ಸೀಮೆಗಳ ಉಪಭಾಷೆಗಳಲ್ಲಿರುವ ಮರಾಠಿ, ತೆಲುಗು, ತಮಿಳು ಭಾಷೆಗಳ ಪ್ರಭಾವವನ್ನು ಗಮನಿಸಿದರು. ಸೂಫಿ ಸಂತರ ದರ್ಗಾಗಳಲ್ಲಿ ಕಂಡುಬರುವ ಧಾರ್ಮಿಕ, ಭಾಷಿಕ ಸಾಮರಸ್ಯವನ್ನು ಕಂಡು ಸಂತೋಷಪಟ್ಟರು. ಈ ಸೂಫಿ ಸಂತರ ದರ್ಗಾಗಳು ತಮ್ಮ ನೋವು ರೋಗಗಳನ್ನು ಕಳೆಯುತ್ತವೆ ಎಂಬ ನಂಬಿಕೆಯಿಂದ ನಡೆದುಕೊಳ್ಳುತ್ತಿರುವ ಬಹುಸಂಖ್ಯಾತ ಜನಪದರನ್ನು ಕಂಡು ಮರುಗಿದರು; ಅವರ ಮೌಢ್ಯತೆಗೆ ರೇಗಿದರು ಕೂಡ; ಆದರೂ ಅಂಥವರಲ್ಲಿ ಪುಟಿದೇಳುವ ಸೃಜನಶೀಲತೆಗೆ ಬೆರಗಾದರು. ಕರ್ನಾಟಕದ ಸೀಮೆಯ ಜನ ಇವರನ್ನು ಪ್ರೀತಿಯಿಂದ ಉಪಚರಿಸಿ, ದಾರಿ ತೋರಿಸಿ, ತಮ್ಮ ತಿಳಿವಳಿಕೆಯನ್ನು ಕೊಟ್ಟದ್ದಕ್ಕಾಗಿ ನಮ್ರರಾದರು. ಆದ್ದರಿಂದಲೇ ಅವರು 'ಕರ್ನಾಟಕದ ಸೂಫಿಗಳನ್ನು ಅಧ್ಯಯನ ಮಾಡಲೆಂದು ಸಾಂಸ್ಕೃತಿಕವಾದ ಕರ್ನಾಟಕ ಸೀಮೆಯಲ್ಲಿ ಮೂರು ವರ್ಷ ಕಾಲ ತಿರುಗಾಟ ಮಾಡಿದ್ದು, ನನ್ನ ಜೀವನದ ಬಹುದೊಡ್ಡ ಅನುಭವ. ಸಾಹಿತ್ಯ ವಿದ್ಯಾರ್ಥಿಯಾಗಿ ಅಚ್ಚಾದ ಪುಸ್ತಕಗಳಿಗೆ ಅಂಟಿಕೊಂಡೆ ಕೆಲಸ ಮಾಡುವ ಕಾಯಿಲೆಯಿಂದ ಸೂಫಿಗಳ ಅಧ್ಯಯನ ನನ್ನನ್ನು ಬಿಡುಗಡೆ ಮಾಡಿತೆನ್ನಬೇಕು' ಎಂದು ತಮ್ಮ ಸುತ್ತಾಟದ ಅನುಭವಗಳ ಬಗ್ಗೆ ಹೇಳಿಕೊಳ್ಳುತ್ತಾರೆ. ಈ ಕಾರಣದಿಂದಲೇ ಅವರ **ಪ್ರತಿಸಂಸ್ಕೃತಿ** (೧೯೯೩) ಮತ್ತು **ಮರದೊಳಗಣ ಕಿಚ್ಚು** (೧೯೯೬) ಎಂಬ ಪ್ರತಿ ಸಂಸ್ಕೃತಿಯ ಬಗೆಗಿನ ಸಾಹಿತ್ಯಕ ಅಧ್ಯಯನಗಳಿಗಿಂತ *ಕರ್ನಾಟಕದ ಸೂಫಿಗಳು* ಎಂಬ ಈ ಕೃತಿ ಭಿನ್ನವಾಗಿ ನಿಲ್ಲುತ್ತದೆ. ''ಬಾಬಾಬುಡನ್-ದತ್ತಾತ್ರೇಯ : ಎತ್ತಣ ಸಂಬಂಧ'' (ಹೊಸತು, ಆಗಸ್ಟ್ ೧೯೯೯) ಎಂಬ ಲೇಖನವನ್ನೂ ಇಲ್ಲಿ ಉಲ್ಲೇಖಿಸಬಹುದು. ಇವತ್ತಿನ ಸಂದರ್ಭದಲ್ಲಿ ಇಂಥ ಕೃತಿಗಳ ಮಹತ್ವ ಎಷ್ಟೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಆದರೆ ನಾನಿಲ್ಲಿ ಪ್ರಸ್ತಾಪಿಸ ಹೊರಟಿರುವುದು ಇದಕ್ಕೂ ಭಿನ್ನವಾದ ಅವರ ಅಂಡಮಾನ್ ಪ್ರವಾಸದ ಬಗ್ಗೆ. *'ಕರ್ನಾಟಕದ ಸೂಫಿಗಳು'* ಬಗ್ಗೆ ಇಷ್ಟು ದೀರ್ಘವಾಗಿ ಪ್ರಸ್ತಾಪಿಸಿದ್ದು ಏಕೆಂದರೆ ಆ ಕೃತಿಯ ರಚನೆಯ ಹಿನ್ನೆಲೆಯಲ್ಲೂ ಅವರ ಪ್ರವಾಸ ಕಥನವೇ ಇದೆ ಮತ್ತು ಸೂಫಿಗಳ ಜೀವನವೂ ಕೂಡ ಒಂದರ್ಥದಲ್ಲಿ ಸುತ್ತಾಟದ ಬದುಕೇ ಆಗಿದೆ. ವೇದಾಂತದ ಪರಿಭಾಷೆಯಲ್ಲಿ ಹೇಳುವುದಾದರೆ ಮಾನವ ಬದುಕು ಎಂದರೆ ಹುಟ್ಟು ಸಾವಿನ ಸುತ್ತಾಟವೇ ತಾನೆ ? ಅದಿರಲಿ.

ರಹಮತ್ ತರೀಕೆರೆ ಎಂಬ ಈ ನಾಡಾಡಿ ಜೀವ ತನ್ನ ಹೆಂಡತಿ ಮತ್ತು ಗೆಳೆಯರ ಜೊತೆಗೂಡಿ ೧೯೯೭ರಲ್ಲಿ ಅಂಡಮಾನ್ ದ್ವೀಪ ಸಮೂಹಕ್ಕೆ ಪ್ರವಾಸ ಹೋಗಿಬಂದು, ಆ ತಮ್ಮ ಅನುಭವಗಳನ್ನು 'ಹೊಸತು' (ನವಕರ್ನಾಟಕ ಪ್ರಕಾಶನ) ಸಂಚಿಕೆಗೆ ಕೊಟ್ಟಿದ್ದಾರೆ. ಅಂಡಮಾನ್ ದ್ವೀಪ ಸಮೂಹಗಳು ಕೇವಲ ನಿಸರ್ಗ ಸೌಂದರ್ಯದ ತಾಣಗಳಲ್ಲ, ಅಲ್ಲಿ ನಮ್ಮ ಇತಿಹಾಸದ ದಟ್ಟ ನೆನಪುಗಳನ್ನು ತರುವ ಸ್ಮಾರಕಗಳು ಉಳಿದಿವೆ. ಈ ದ್ವೀಪಾಂತರಗಳಲ್ಲಿ ಇಂದಿಗೂ ಅಳಿದುಳಿದಿರುವ ಬುಡಕಟ್ಟು ಜನಾಂಗಗಳ ಬಗ್ಗೆ ಅನೇಕ ಜನ ಸಮಾಜ ವಿಜ್ಞಾನಿಗಳು ಬೆಳಕು ಚೆಲ್ಲಿದ್ದಾರೆ. ಆದರೆ ಜಾಗತೀಕರಣ ಕ್ಕೊಳಗಾಗಿ ಬದಲಾಗುತ್ತಿರುವ ಅಂಡಮಾನಿನ ಮೂಲ ನಿವಾಸಿಗಳೂ ಸೇರಿ, ಆ ದ್ವೀಪ ಸಮೂಹಕ್ಕೆ ವಲಸಿಗರಾಗಿ ಬಂದಿರುವ ಇತರ ಭಾಷಾ ಸಮಾಜಗಳ ಪರಿಚಯವನ್ನು ಡಾ॥ ರಹಮತ್ ತರೀಕೆರೆಯವರು ಅಲ್ಲಿನ ಸಾಮಾಜಿಕ ಸಾಂಸ್ಕೃತಿಕ ಒಳನೋಟಗಳಿಂದ ವಿಶ್ಲೇಷಿಸಿ ನೋಡುತ್ತಾರೆ. ಜಾಗತೀಕರಣವೆಂಬ ಜಗದೇಕ ಸಂಸ್ಕೃತಿ ಹರಡುತ್ತಿರುವ ಇಂದಿನ ಸನ್ನಿವೇಶದಲ್ಲಿ ಪ್ರತಿ ಸಂಸ್ಕೃತಿಗಳ ಬಗ್ಗೆ ಅಪಾರ ಅಂತಃಕರಣವುಳ್ಳ ರಹಮತ್ ಈ ಕಾರಣದಿಂದಲೇ ಬದುಕು ಮತ್ತು ಬರಹದಲ್ಲಿ ತೀವ್ರ ಚಿಂತಿತರಾಗಿದ್ದಾರೆ. ಇದಕ್ಕೆ ನಿದರ್ಶನವಾಗಿ ಅವರ ಈವರೆಗಿನ ಎಲ್ಲ ಬರಹಗಳನ್ನು ನೋಡಬಹುದು. ಈ ನಿಟ್ಟಿನಲ್ಲಿ ಹೆಸರಿಸಬೇಕಾದ ಅವರ ಒಂದು ಕೃತಿ 'ವಸಾಹತು ಪ್ರಜ್ಞೆ ಮತ್ತು ವಿಮೋಚನೆ' (೧೯೯೬). ಇದು ಕೀನ್ಯಾದ ಗೂಗಿವಾ ಥಿಯೋಂಗೊ ಎಂಬ ಲೇಖಕನ De-colonising the Mind ಎಂಬ ಕೃತಿಯ ಕನ್ನಡಾನುವಾದ. ಕೀನ್ಯಾದಲ್ಲಿ ಹುಟ್ಟಿ ಬೆಳೆದ ಗೂಗಿ ಇಂಗ್ಲಿಷಿನಲ್ಲಿ ವಿದ್ಯಾಭ್ಯಾಸ ಪಡೆದು, ನಮ್ಮ ಕುವೆಂಪು ಅವರಂತೆ, ಇಂಗ್ಲಿಷಿನಲ್ಲಿಯೇ ಸಾಹಿತ್ಯ ರಚನೆಗೆ ತೊಡಗಿದರಾದರೂ ತನ್ನ ದೇಶದ ಜನಾಂದೋಳನದಲ್ಲಿ ತೊಡಗಿಸಿಕೊಂಡ ಮೇಲೆ ಅವರಿಗೆ ಇಂಗ್ಲಿಷಿನ ಭ್ರಮೆ ಹರಿಯಿತು. ಆಮೇಲೆ ದೇಶೀ ಭಾಷೆಯಾದ ಸ್ವಾಹಿಲಿಯಲ್ಲಿ ಬರೆಯತೊಡಗಿದರು. ಗೂಗಿವಾ ಥಿಯೋಂಗೊ ಅವರ ಈ ನಿಲುವು ರಹಮತ್ ಅವರಿಗೂ ವಿವೇಕಯುತವಾಗಿ ಕಂಡಿದೆ. ಆದ್ದರಿಂದ ಅವರ ಆಸಕ್ತಿಯ ಕೇಂದ್ರಬಿಂದು ಅಲಕ್ಷಿತ ಸಮಾಜಗಳ ಹುಡುಕಾಟದಲ್ಲಿದೆ ಎನ್ನಬಹುದು. ಅವರ ಈ ಬಗೆಯ ಚಿಂತನೆಗೆ 'ಅಂಡಮಾನಿನ ಪ್ರವಾಸ' [illegible]

ಶಿವರಾಮಯ್ಯ

ಚಾಲನೆ ಕೊಟ್ಟಿದೆ. ಲೇಖಕರು ತಮ್ಮ ಪ್ರವಾಸ ಕಥನದ ಕಂತುಗಳಿಗೆ ಕೊಟ್ಟ ಶೀರ್ಷಿಕೆಗಳೇ ಅವರ ದೃಷ್ಟಿ ಧೋರಣೆಗೆ ಸಾಕ್ಷಿ ನುಡಿಯುತ್ತವೆ: ಅಂಡಮಾನಿನ ಹಡಗಿನಲ್ಲಿ ಬಂಕರ್ ಎಂಬ ನರಕಗಳು; ಮಾತಿನ ಮಲ್ಲರನ್ನು ಮಾಡುವ ಅಂಡಮಾನ್; ಅದೃಶ್ಯ ಸಮುದಾಯ : ಜರವಾಗಳು; ಅಂಡಮಾನಿನ ಕಾಡು, ಬೆಟ್ಟ, ಹೊಳೆ, ಅಂಡಮಾನಿನ ಕೆಲವು ಜನ; ಅಂಡಮಾನಿನ ಕಡಲಗರ್ಭದೊಳಗೆ; ಕತ್ತಿ ಯಾವುದಾದರೇನು ? ಕಡಲಲ್ಲಿ ನೆಲದ ಸೆಳೆತ.

ಚೆನ್ನೈನಿಂದ ಅಂಡಮಾನಿನ ನಡುವೆ ತಿರುಗುವ 'ನಾನ್‌ಕೌರಿ' ಎಂಬ ಹಡಗಿಗೆ ಟಿಕೆಟ್ ಪಡೆಯುವುದಕ್ಕೂ ಪ್ರಯಾಸ ಬೀಳಬೇಕು. ಮಧ್ಯವರ್ತಿಗಳ ಕಿರುಕುಳ ಅಲ್ಲಿಯೂ ಬಿಟ್ಟಿದ್ದಲ್ಲ. ಹಡಗಿನಲ್ಲಿ ಪ್ರಯಾಣಿಕರ ಸೌಲಭ್ಯಗಳಲ್ಲಿ ತಾರತಮ್ಯತೆ; ಉಳ್ಳವರಿಗೆ ಉಪ್ಪರಿಗೆಯ ಕ್ಯಾಬಿನ್, ಇಲ್ಲದವರಿಗೆ ಈ ಬಂಕರ್ ಎಂಬ ನರಕ; ವರ್ಗ ತಾರತಮ್ಯ ತುಂಬಿ ತುಳುಕುತ್ತಿರುವ ಮಿನಿ ಭಾರತದಂತಹ ಈ ಹಡಗಿನಲ್ಲಿ ಯಾನ ಹೊರಟಿರುವ ಜನ ಕೇವಲ ಪ್ರವಾಸಿಗರಷ್ಟೇ ಅಲ್ಲ; ಎಷ್ಟೋ ದೇಶದ ಎಷ್ಟೋ ಭಾಷೆಗಳ ಜನ ಎಷ್ಟೆಷ್ಟೋ ಕನಸು ಹೊತ್ತು ಅಂಡಮಾನಿಗೆ ಹೊರಟಿದ್ದಾರೆ, ಅಲ್ಲಿ ಕೈಗೂಡುವುದೆಷ್ಟೋ !

ಅಂಡಮಾನ್ ದ್ವೀಪದಲ್ಲಿ ಅನೇಕ ಬುಡಕಟ್ಟುಗಳ ಜನ ವಾಸಿಸುತ್ತಿದ್ದಾರೆ. ಅಲ್ಲಿನ ರಕ್ಷಿತಾರಣ್ಯದಲ್ಲಿ 'ಜರವಾಗಳು' ಎಂಬ ಅದೃಶ್ಯ ಜನಸಮುದಾಯವಿದ್ದರೆ, ಉಳಿದಂತೆ ಓಂಗೀ, ಸೆಂಟಿನಲೀಸರು, ಶಾಂಪೇನರು, ನಿಕೋಬಾರಿಗಳು ಎಂಬ ಬುಡಕಟ್ಟು ಜನರು ಈಗಾಗಲೇ ನಾಗರಿಕ ವಲಯಕ್ಕೆ ಬಂದು ಮರದ ಕಾರ್ಖಾನೆಗಳಲ್ಲಿ ಕೂಲಿನಾಲಿ ಮಾಡುತ್ತಿದ್ದಾರೆ. ಆದರೆ ತಮ್ಮ ಕಾಡನ್ನು ಇನ್ನೂ ಉಳಿಸಿಕೊಂಡು ಸ್ವತಂತ್ರವಾಗಿ ಧೀಮಂತರಾದ ಜರವಾಗಳನ್ನು ನಾಗರಿಕ ಸಮಾಜ ಕ್ರೂರ ಜನಾಂಗ ಎಂದು ಹಣೆಪಟ್ಟಿ ಕೊಟ್ಟು ಅವರು ಮಾಡದ ಹಲ್ಲೆಗಳಿಗೆ ಹೆದರಿಕೊಂಡು, ಅವರನ್ನು ಕಂಡರೆ ಗುಂಡಿಕ್ಕಿ ಕೊಲ್ಲುವ ವಿಚಾರ ತಿಳಿದು ರಹಮತ್ ತೀವ್ರ ನೊಂದುಕೊಳ್ಳುವುದು ಸ್ವಾಭಾವಿಕವಾಗಿದೆ. ರವಿ ಮುಳುಗದ ಸಾಮ್ರಾಜ್ಯ ಕಟ್ಟಿ ಆಳಿದ ಅಂದಿನ ಬ್ರಿಟಿಷರು ಬುಡಕಟ್ಟು ಜನರ ಮೇಲೆ ಮಾಡಿದ ಹಲ್ಲೆ, ಅತ್ಯಾಚಾರ, ಕೊಲೆ ಸಾಲದೆಂಬಂತೆ, ಇವತ್ತಿನ ಸ್ವತಂತ್ರ ದೇಶಗಳೂ ಸಹ ಅಮೆಜಾನಿನ ಕಾಡಿನಲ್ಲಿ, ಆಫ್ರಿಕಾದ ಕಗ್ಗತ್ತಲಲ್ಲಿ, ಇಂಡಿಯಾದ ಮಲೆನಾಡುಗಳಲ್ಲಿ, ಅಂಡಮಾನಿನ ಅರಣ್ಯಗಳಲ್ಲಿ ತಮ್ಮ ಪಾಡಿಗೆ ತಾವಿರುವ ಬುಡಕಟ್ಟುಗಳನ್ನು ಬಡಿದು ಹಾಕುವುದು ಯಾವ ನ್ಯಾಯ ಎಂಬುದು ಈ ಲೇಖಕರಿಗೆ ದುಗುಡ ತರಿಸುತ್ತದೆ. ಎಂದರೆ ಕತ್ತಿ ಯಾವುದಾದರೇನು ? ಅಲಕ್ಷಿತ ದುರ್ಬಲ ಸಮಾಜಗಳನ್ನು ಶೋಷಿಸುವಾಗ ದೇಸೀ ಅಥವಾ ವಿದೇಶೀ ಆಳ್ವಿಕೆಗಳೆಲ್ಲ ಒಂದೇ ಮಾದರಿ. ಇಂಥ ದೀನಾನಾಥ ಬುಡಕಟ್ಟುಗಳ ಬಗ್ಗೆ ಚಿಂತಿಸುವಾಗ ರಹಮತ್ ಅವರ ಅಂತಃಕರಣ ಭಾರವಾಗುತ್ತದೆ. ಹಾಗೆಯೇ ದುಡಿವ ವರ್ಗದ ಕಾರ್ಯಕ್ಷಮತೆಯ ಬಗ್ಗೆ, ಅವರ ಆಸೆ ಆಕಾಂಕ್ಷೆಗಳ ಬಗ್ಗೆ, ವಿವಿಧ ಭಾಷಾವರ್ಗಗಳು ಒಂದೆಡೆ ಸಹಬಾಳ್ವೆ ಮಾಡುವುದನ್ನು ಕಂಡಾಗ ಲೇಖಕರಿಗೆ ಖುಷಿಯಾಗುತ್ತದೆ.

ರಹಮತ್ ಪ್ರವಾಸ ಕಾಲದಲ್ಲಿಯೆ ಅನೇಕ ಬಗೆಯ ಜನರನ್ನು ಸಂಧಿಸುತ್ತಾರೆ. ಅವರಲ್ಲಿ ಕೆಲವರು ನೆನಪಿನಲ್ಲಿ ಉಳಿದಿದ್ದಾರೆ. ಅವರಲ್ಲಿ 'ಬೈರಿಗೆ', 'ಸುತ್ತಿಗೆ'ಗಳಾದ ಬೋರ ಮತ್ತು ಪಾಂಡೆ, ದೋಣಿ ಚಾಲಕ ಆಶುತೋಶ್, ಆಂಧ್ರದ ನರಸಿಂಗಲು, ಚಿಡಿಯಾ ಟಾಪಿನ ಡ್ರೈವರ್, ದಿಲ್‌ದಾರ್ ಮನುಷ್ಯ ಹಲಧರ್, ತರುಣ ಪಾದ್ರಿ, ಪೋಕರ್ ಎಂಬ ಕಲಾವಿದ, ಇರುಳಿಗರ ತಾತ ಮುಂತಾದವರು ಮುಖ್ಯರು. ಕಡಲ ನಾವಿಕರು, ಪ್ರವಾಸಿಗಳು ಯಾನ ಹೊರಟ ಸಂದರ್ಭದಲ್ಲಿ, ಆಕಸ್ಮಿಕ ದುರಂತಗಳಿಂದ ಕಡಲ ನಡುಗಡ್ಡೆಗಳಲ್ಲಿ ಉಳಿದ ಪ್ರಸಂಗಗಳಲ್ಲಿ, ಅವರಿಗೆ ಏಕತಾನತೆಯ ಬೇಸರ ಬಂದೊದಗಿದಾಗ ಅವರು ಸೃಜನಶೀಲರಾಗಿರಬಹುದು ಎಂಬ ರಹಮತರ ಚಿಂತನಧಾರೆ ಸರಿಯೇ ಇದೆ. ಅರೇಬಿಯನ್ ನೈಟ್ಸ್, ಹವಳ ದ್ವೀಪ, ಗಲಿವರನ ಪ್ರವಾಸ ಇಂಥ ಸಾಹಸಮಯ ಕಲ್ಪಕತೆಗಳು ಇಂಥ ಸನ್ನಿವೇಶದಲ್ಲಿ ರಚಿತವಾಗಿರಬಹುದು ಎಂಬುದು ನಿಜ. ಖೈದಿಗಳಿಗೆ ದ್ವೀಪಾಂತರಗಳಲ್ಲಿ ಜೈಲುಗಳನ್ನು ಕಟ್ಟಿ ಸಹಮಾನವರನ್ನು ಸೋದರರಂತೆ ಪ್ರೀತಿಸು ಎಂದು ಹೇಳಿದ ಅವರ ಧರ್ಮಕ್ಕೆ ವಿರುದ್ಧವಾಗಿ ದಂಡಿಸಿದ್ದು ನಿಜಕ್ಕೂ ವೈರುಧ್ಯವಾಗಿದೆ ಎಂದು ರಹಮತ್ ಅಂಡಮಾನಿನ ಜೈಲು ಕಂಡು ಆಂಗ್ಲರ ಬಗ್ಗೆ ವಿಷಾದಿಸುತ್ತಾರೆ.

ಅಂಡಮಾನಿನ ಕಾಡು, ಬೆಟ್ಟ, ಹೊಳೆಯನ್ನು ಕುರಿತು ಬರೆಯುವಾಗ ಲೇಖಕರು ನಮ್ಮ ಮಲೆನಾಡಿನ ನಿಸರ್ಗ ಸೌಂದರ್ಯವನ್ನು ತಪ್ಪದೆ ನೆನೆಯುತ್ತ ಅಲ್ಲಿನ ಚಿಡಿಯಾ ಟಾಪು ಕಾಡಿನ ಹಕ್ಕಿಗಳನ್ನು ಚಿಟ್ಟೆಗಳನ್ನು ಕಾಣಲು ಕಾತರಿಸುತ್ತಾರೆ. ಆ ಕಾಡಿನ ಅಪೂರ್ವ ವೃಕ್ಷ 'ಪೊಡಾಕ್' ಎಂಬುದರ ಉಪಯುಕ್ತತೆಯನ್ನು ಕುರಿತು ಲೆಕ್ಕ ಹಾಕುತ್ತಾರೆ. ಅಂಡಮಾನಿನ ಕಡಲ ಗರ್ಭದೊಳಗಿನ ಚೆಂದ ಚೆಂದದ ಮೀನುಗಳ ಮಾಟಕ್ಕೆ ಮಾರುಹೋಗುವ ರಹಮತ್ ಅವರಿಗೆ ಅವು ಗಳನ್ನು ತಿಂದು ನೋಡಬೇಕೆಂಬ ಪ್ರಜ್ಞೆಯೂ ಕಾಡುತ್ತದೆ.

ಕಡೆಯದಾಗಿ, ನವಸಾಮ್ರಾಜ್ಯಶಾಹಿಯ ಸರಕು ಸಂಸ್ಕೃತಿ ಸಿದ್ಧಾಂತಗಳೇ ಇಂದು ಮೌಲ್ಯಗಳಾಗಿ ಮಾನವೀಯ ಮೌಲ್ಯಗಳು ಮೂಲೆಗುಂಪಾಗುತ್ತಿವೆ. ಅತ್ತ ಎಡಪಂಥೀಯ ಪ್ರಭುತ್ವಗಳು ಎಡವಿಬಿದ್ದು, ಇತ್ತ ಬಲಪಂಥೀಯ ಉದಾರವಾದಿ ನಿಲುವುಗಳು ತಾವೇ ಸರ್ವೋತ್ತಮ ಎಂದು ಜಾಹೀರಾತು ಮಾಡುತ್ತಿವೆ. ನಮ್ಮ ಸಾಹಿತ್ಯ ಸಂದರ್ಭದಲ್ಲೂ ಇವುಗಳ ಪ್ರಭಾವ ಎದ್ದು ಕಾಣುತ್ತಿದೆ. ಇಂಥಲ್ಲಿ ಅಮಾಯಕರನ್ನು ನಿರ್ದಯವಾಗಿ ದಂಡಿಸುವ ಶೋಷಕರ ಬಗ್ಗೆ ರಹಮತ್ ಅವರಿಗೆ ಸಿಟ್ಟಿದೆ; ಮತ ಮೌಢ್ಯಗಳ ವಿರುದ್ಧ ಬಂಡಾಯವಿದೆ; ಶ್ರಮಿಕ ವರ್ಗದ ಬಗ್ಗೆ ಅಪಾರ ಆತ್ಮೀಯ ನಂಟಿದೆ; ನಿಜ ಬದುಕಿನಲ್ಲಿ ವಿಷಾದದೊಂದಿಗೆ ವಿನೋದವೂ ಇದೆ. ಆದ್ದರಿಂದಲೇ 'ಕತ್ತಿ ಯಾವುದಾದರೇನು ?' ಎಂಬ ಮೊನಚು ಮಾತಿನಿಂದ ಆಳುವ ವರ್ಗವನ್ನು ತಿವಿಯುತ್ತಾರೆ; ಹಾಗೆಯೇ ಜೀವನೋತ್ಸಾಹದಿಂದ ಸಹಮಾನವರೊಂದಿಗೆ ಬೆರೆಯುತ್ತಾ ವಿದ್ವತ್ ಮಂಡಳಿಯ ಹಮ್ಮು ಬಿಮ್ಮುಗಳಿಗೆ ಬೇಸರಿಸುತ್ತಾರೆ. ಇದು ರಹಮತ್ ಅವರ ಜೀವನ ವಿಧಾನ. ಇದಕ್ಕೆ ಪೂರಕವಾಗಿ ಅವರ ಸಾಹಿತ್ಯ ಚಟುವಟಿಕೆಗಳು, ಪುಸ್ತಕ ಬರಹಗಳು, ಪ್ರವಾಸಿ ಆಶಯಗಳು ಮೂಡಿಬರುತ್ತಿವೆ.


ಶಿವರಾಮಯ್ಯ

'ಅಪ್ಪಾಜಿ' ನಂ. ೧೨೧, ೧೩ನೇ ಮುಖ್ಯರಸ್ತೆ, ಬಿನ್ನಿ ಲೇ ಔಟ್,
ವಿಜಯನಗರ, ಬೆಂಗಳೂರು - ೪೦


## ಕರಿ ತಾಯಿ

ತಾಯೆ –<br>
ಅಂತ ಕರೆದಿರಲು ನಾನಾರೆಂದು ತಿಳಿಯುವೆ ತಾಯಿ<br>
ಅತ್ತು ಅತ್ತು ಅಳು ಕಲಿಸಿದ ತಾಯೆ<br>
ಹೊಲಗದ್ದೆ ಅಂಗಗಳ ಅಡವಿಟ್ಟು<br>
ಪಟ್ಟ ಪಹಣಿಯ ಬೇಡಿ<br>
ನೆರಳಿನಲ್ಲಿ ನ್ಯಾಯ ಹರಾಜು<br>
ಇಂಡಿಯಾ ತಾಯೆ –

೨

ರಕ್ತ ಸಮುದ್ರದಲಿ ಚಿಕ್ಕ ಚುಕ್ಕೆ<br>
ನಿನ್ನಲ್ಲಿ ಮೈಮರೆತ ದಾನವರು<br>
ಗಣಿತ ನಿನ್ನದಲ್ಲ ; ಗಣಿತದ ಶೂನ್ಯ ನಿನ್ನದು<br>
ತುಂಡಿನ ಮೈ ರಾಜ್ಯ<br>
ಮುಳ್ಳಿನಿಂದ ಮುಚ್ಚಿದವರ ಸಂಖ್ಯೆ ಎಷ್ಟು ?<br>
ಎದೆ ತೊಡೆಯಲ್ಲಿ ಹರಿಯೊ<br>
ರಕ್ತ ಮಾಂಸ ಪುಟಿದು ತುಡಿಯೊ<br>
ಗಂಗೆ ಕಾವೇರಿ ನೀರ ಮುಟ್ಟಬಾರದೆ ?<br>
ಮಮತೆಯ ಸುಖ ಪಡೆದ ಸಿರಿವಂತರ<br>
ತೊಟ್ಟಿಲು ತೂಗುವುದೆ<br>
ನಿನ್ನ ಹೃದಯದ ಬೆಳ್ಳಿ ಬೆಂಡಿಗೇರಿ<br>
ಕ್ಯಾನ್ಸರ್ ಗಾಯಗಳಿಗೆ ಮದ್ದೆಲ್ಲಿದೆ<br>
ದೇಹದ ಅಕ್ಷಾಂಶ ರೇಖಾಂಶ ಅಂತರಂಗ<br>
ಆಳದಲ್ಲಿ ನನ್ನೆಲ್ಲಿಟ್ಟೆ<br>
ಬಹಿರಂಗ ಬೀದಿ ತಳ<br>
ತಲೆ ಮೇಲೆ ಉಚ್ಚ ಹುಚ್ಚ<br>
ನಿನ್ನ ಲೋಕ ವಿಷ ದ್ವೇಷ ಮುಳ್ಳಿನ ಮಾಲೆ



ನಾನೊ ನಿನ್ನ ಪಾಪದ ಕೂಸು<br>
ಸೇಡಿನ ಉಗುಳು.

೩

ಸತ್ತ ಕರುವಿಗೆ, ಕರುಬಾಡಿಗೆ ಸಂತಸ<br>
ಸಾಕಿ ಸಲಹಿ ಸುಟ್ಟು<br>
ಊರೂರು ಅಲೆದನು ತಪ್ಪಿಸಿಕೊಂಡ ನೆಮ್ಮದಿಗೆ<br>
ಫಲವತ್ತಾದ ಮೈ ಕಪ್ಪು ಅಲ್ಲಿ<br>
ಹಸಿರು ವಿಂಧ್ಯಾ ಪರ್ವತ ಕೆಳಗೆ<br>
ಇನ್ನೂ ಕೆಳಗೆ ಕರಿಪಟ್ಟಗಳು<br>
ಪುತಪುತನೆ ಹೊರಗೋಡಿದ್ದಾರೆ ಕಂಬಳಿ ಹುಳುಗಳಂತೆ<br>
ಎಲ್ಲಿಗೂ ನನಗೆ ಪ್ರವೇಶವಿಲ್ಲ


ಗಂಗಾರಾಂ ಚಂಡಾಳ

೧೬, ಕೆ. ಹೆಚ್. ಬಿ., ೩ನೇ ಹಂತ, ಕುವೆಂಪುನಗರ, ಮೈಸೂರು-೫೭೦ ೦೨೩

# ಮಧ್ಯಕಾಲೀನ ಭಾರತದ ಸಾಮಾಜಿಕ ಚಿಂತನೆಗಳು

**ಮ**ಧ್ಯಕಾಲೀನ ಭಾರತೀಯರು ಶೈವ ಇಲ್ಲವೆ ವೈಷ್ಣವ ಪಂಥಗಳ ಪ್ರಭಾವಕ್ಕೆ ಒಳಗಾಗಿದ್ದರು. ಅವರಲ್ಲಿ ಹಲವರು ಭಕ್ತಿಪಂಥಕ್ಕೆ ಸೇರಿದವರಾಗಿದ್ದರು. ಇವರಲ್ಲಿ ಕೆಲವರು ಮಾತ್ರ ಬ್ರಾಹ್ಮಣ ವರ್ಗದಿಂದ ಬಂದವರಾಗಿದ್ದು ಬಹುತೇಕರು ಕೆಳಜಾತಿಗಳಿಗೆ ಸೇರಿದ ವೃತ್ತಿಜೀವಿಗಳಾಗಿದ್ದರು. ಕಾಶ್ಮೀರದಿಂದ ಕನ್ಯಾಕುಮಾರಿವರೆಗೆ ಈ ಚಳವಳಿ ಇಡೀ ಭಾರತವನ್ನೇ ಆವರಿಸಿತ್ತು. ಇದರ ಜೊತೆಗೆ ಇಸ್ಲಾಂ ಅನುಯಾಯಿಗಳ ನಡುವೆ ಸೂಫಿ ಪಂಥ ಕೂಡ ಹರಡಿತ್ತು. ಇವೆರಡೂ ಚಳವಳಿಗಳು ಪರಸ್ಪರ ಪ್ರಭಾವ ಬೀರುವುದನ್ನು ಗಮನಿಸಬಹುದು. ಇದರ ಈ ಪ್ರಭಾವ ಎಷ್ಟರಮಟ್ಟಿಗೆ ಆಗಿತ್ತು ಎಂಬುದನ್ನು ನಿಖರವಾಗಿ ಹೇಳಲಾಗುವುದಿಲ್ಲ.

ಭಕ್ತಿ, ಸೂಫಿ ಚಳವಳಿಗಳಿಗೆ ಮಿಲಿಯಾಂತರ ಜನ ಆಕರ್ಷಿತರಾಗಿದ್ದರು. ಈ ಚಳವಳಿಗಳು ಬಹುತೇಕ ಅಶಿಕ್ಷಿತ ಸಾಮಾನ್ಯ ಜನರ ನಾಯಕತ್ವದಲ್ಲಿದ್ದು ತಮ್ಮ ಚಿಂತನೆಗಳನ್ನು ಅವರು 'ಹಾಡು' ಮತ್ತು ಕವಿತೆಗಳ ಮೂಲಕ ಪ್ರಸಾರ ಮಾಡಿದ್ದರು. ಇಡೀ ದೇಶವನ್ನು ಒಟ್ಟಾರೆಯಾಗಿ ತೆಗೆದುಕೊಂಡರೆ ಭಕ್ತಿ, ಸೂಫಿ ಚಳವಳಿಗಳ ನಾಯಕತ್ವ ವಹಿಸಿದವರ ಸಂಖ್ಯೆ ಸುಮಾರು ಐದುನೂರು ಇರಬಹುದು. ಇವರಲ್ಲಿ ಕೃಷಿ ಕಾರ್ಮಿಕರು, ಕ್ಷೌರಿಕರು, ಚಮ್ಮಾರರು, ನೇಕಾರರು, ಮೀನುಗಾರರು ಮುಂತಾದ ವೃತ್ತಿಜೀವಿಗಳಿದ್ದರು. ಮೀರಾಬಾಯಿ, ಜ್ಞಾನಬಾಯಿ, ಆಂಡಾಳ್, ಲಲ್ಲಾ ಮತ್ತು ಅಕ್ಕಮಹಾದೇವಿ ಮುಂತಾದ ಮಹಿಳೆಯರು ಇವರಲ್ಲಿ ಇದ್ದಾರೆ. ಈ ಚಳವಳಿಯ ಪ್ರಮುಖ ಲಕ್ಷಣಗಳೆಂದರೆ :

ಅ) ಭಕ್ತಿ-ಸೂಫಿ ಚಳವಳಿ ಪ್ರಾದೇಶಿಕ ಭಾಷೆಗಳ ಬೆಳವಣಿಗೆಗೆ ಸಹಾಯಕವಾಯಿತು. ಪರ್ಷಿಯನ್ ಭಾಷೆ ಸುಲ್ತಾನರ ಭಾಷೆ ಆದರೂ ಪ್ರಾದೇಶಿಕ ಭಾಷೆಗಳ ದಮನವನ್ನು ಅವರು ಮಾಡಲಿಲ್ಲ. ಭಕ್ತಿ ಚಳವಳಿಯ ಕವಿಗಳು ಸಹ ಪ್ರಾದೇಶಿಕ ಭಾಷೆಗಳಿಗೆ ಪ್ರೋತ್ಸಾಹ ನೀಡಿದರು. ಉದಾಹರಣೆಗೆ, ಬಂಗಾಲಿಯಲ್ಲಿ ಚೈತನ್ಯ, ತಮಿಳಿನಲ್ಲಿ ರಾಮಾನುಜ, ಕನ್ನಡದಲ್ಲಿ ಬಸವೇಶ್ವರ, ಕನಕ, ಪುರಂದರ, ಪಂಜಾಬಿಯಲ್ಲಿ ನಾನಕ್, ಕಾಶ್ಮೀರಿಯಲ್ಲಿ ಲಲ್ಲಾ, ರಾಜಾಸ್ತಾನಿಯಲ್ಲಿ ಮೀರಾಬಾಯಿ, ಹಿಂದಿಯಲ್ಲಿ ತುಳಸಿದಾಸ್, ಸೂರದಾಸ್, ಕಬೀರ ಮತ್ತು ರಮಾನಂದ, ಅಸ್ಸಾಮಿಯಲ್ಲಿ ಶಂಕರದೇವ, ಗುಜರಾತಿಯಲ್ಲಿ ನರಸಿಂಹ ಮೆಹತಾ, ಮರಾಠಿಯಲ್ಲಿ ನಾಮದೇವ, ಜ್ಞಾನೇಶ್ವರ, ಮಲೆಯಾಳಂನಲ್ಲಿ ಎಳುತ್ತಚ್ಚನ್ ಇತ್ಯಾದಿ ಇವರೆಲ್ಲಾ ಆಯಾ ಭಾಷೆಗಳ ಪ್ರಸಿದ್ಧಿಗೆ ಕಾರಣರಾಗಿದ್ದರು.

ಆ) ಈ ಚಳವಳಿಯ ಇನ್ನೊಂದು ಲಕ್ಷಣವೆಂದರೆ ಅದು ವರ್ಣಾಶ್ರಮ ಪದ್ಧತಿ ವ್ಯವಸ್ಥೆಯ ವಿರೋಧಿಯಾಗಿತ್ತು. ರಮಾನಂದ, ಚೈತನ್ಯ, ತುಳಸಿದಾಸ್, ಬಸವೇಶ್ವರ ಮತ್ತಿತರರು ತಮ್ಮ ವಚನ ಹಾಗೂ ಕವಿತೆಗಳಲ್ಲಿ ಜಾತಿ ವ್ಯವಸ್ಥೆಯನ್ನು ಖಂಡಿಸಿದರು. ಇವರಲ್ಲಿ ಹಲವರು ಅಸ್ಪೃಶ್ಯರು ಅಥವಾ ಅಂತಹವರ ಒಡನಾಡಿಗಳಾಗಿದ್ದರು. ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎಂಬುದನ್ನು ಹಾಗೂ ಮಾನವೀಯತೆ ಅಂಶಗಳನ್ನು ತಮ್ಮ ಕೃತಿಗಳಲ್ಲಿ ಎತ್ತಿಹಿಡಿದರು.

ಮೇಲ್ಜಾತಿಗಳ ಶ್ರೇಷ್ಠತೆಯನ್ನು ಬಿಟ್ಟುಕೊಡದೆ ಶೂದ್ರರಿಗೆ ದೇವಾಲಯ ಪ್ರವೇಶವನ್ನು ರಾಮಾನುಜರು ಕೋರಿದರು.

> *ಮಧ್ಯಕಾಲೀನ ಭಾರತದ ಎಲ್ಲ ಭಕ್ತಿ ಚಳವಳಿಗಳು ರಾಜತ್ವ, ಊಳಿಗಮಾನ್ಯ ವ್ಯವಸ್ಥೆಯನ್ನು ವಿರೋಧಿಸುವ ನೆಲೆಯಿಂದಲೇ, ಕೆಳವರ್ಗದ ದುಡಿಯುವ ಜನರಿಂದಲೇ ಪ್ರಾರಂಭವಾದವು. ಆದರೆ ಈ ಎಲ್ಲ ಚಳವಳಿಗಳ ತಾತ್ವಿಕ ನೆಲೆಗಟ್ಟು ದೇವರ ಕಡೆಗೆ ಇದ್ದುದರಿಂದ ವಾಸ್ತವ ಬದುಕಿನ ಕಟುಸತ್ಯಗಳಿಗೆ ಸ್ಪಂದಿಸಲಾಗದೆ ಹೋಗಿ ಒಂದು ರೀತಿಯ ಪಲಾಯನವಾದದಲ್ಲಿ ಅಂತ್ಯಗೊಳ್ಳುವಂತಾಯಿತು.*

ಬಸವೇಶ್ವರ ವೀರಶೈವ ಧರ್ಮ ಸ್ಥಾಪನೆ ಮಾಡಿದರು. ವೇದಗಳ ಪಾರಮ್ಯವನ್ನು ತಿರಸ್ಕರಿಸಿದರು. ಪುನರ್‌ಜನ್ಮವನ್ನು ಮತ್ತು ಜಾತಿ ವ್ಯವಸ್ಥೆಯನ್ನು ಖಂಡಿಸಿ ಸ್ತ್ರೀ-ಪುರುಷರ ಸಮಾನತೆಯ ತತ್ವವನ್ನು ಪ್ರತಿಪಾದಿಸಿದರು. ಶೈವ ಪರಂಪರೆ ಕರ್ನಾಟಕವಲ್ಲದೆ ಆಂಧ್ರ, ಮಹಾರಾಷ್ಟ್ರ ತಮಿಳುನಾಡಿನಲ್ಲಿಯೂ ಹಬ್ಬಿತು.

ವೀರಶೈವ ಚಳವಳಿ ಸಾಮಾಜಿಕ ಆಸ್ತಿಯ ಕಲ್ಪನೆಯನ್ನು ಹರಡಿತು. ಭಕ್ತನೊಬ್ಬ ಅವನ ಸಂಪಾದನೆಯನ್ನು ಇತರರ ಜೊತೆ ಹಂಚಿಕೊಳ್ಳಬೇಕೆಂಬುದನ್ನು ಈ ಚಳವಳಿ ಸಾರಿತು. ಯಾರಿಗೂ ಸಹ ಗಳಿಕೆಯ ಬಗ್ಗೆ ಅಸಮಾಧಾನವಿರಲಿಲ್ಲ. ಶೈವ ಚಳವಳಿ ಸಮಾಜದಲ್ಲಿ ಕಾಯಕದ ಸಹೋದರತ್ವವನ್ನು ಸ್ಥಾಪಿಸಿತು. ಅದನ್ನು 'ಕಾಯಕ', 'ಕಾಯಕವೇ ಕೈಲಾಸ' ಎಂದು ಶ್ಲಾಘನೆ ಮಾಡಿದರು.

ಈ ಚಳವಳಿಯು ಜಾತಿವಿರೋಧವಾಗಿತ್ತು. ಹಲವಾರು ಜನ ಕೆಳಜಾತಿಗಳಿಂದ ಬಂದವರಾಗಿದ್ದರು. ದಾಸಿಮಯ್ಯ ನೇಕಾರ, ಅಪ್ಪಣ್ಣ ಕ್ಷೌರಿಕ, ಮಾಚಯ್ಯ ಅಗಸ, ಚನ್ನಯ್ಯ ಚಮ್ಮಾರ ಇತ್ಯಾದಿ.

ಹಲವಾರು ಮಹಿಳೆಯರು ಸಹ ಧಾರ್ಮಿಕ ಮಹತ್ವದ ಸ್ಥಾನ ಪಡೆದಿದ್ದರು. ಮಹಾದೇವಿ ಅಕ್ಕ, ಅಕ್ಕನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆ ಇತ್ಯಾದಿ. ವೀರಶೈವ ಚಳುವಳಿ ಮಹಿಳಾ ಸಮಾನತೆಯನ್ನು ಎತ್ತಿಹಿಡಿಯಿತು. ವಚನ ಚಳುವಳಿ ಕನ್ನಡ ಭಾಷೆಯ ಬೆಳವಣಿಗೆಗೆ ಅಪಾರವಾಗಿ ಸಹಾಯಕವಾಯಿತು.

ಇ) ಭಕ್ತಿ - ಸೂಫಿ ಚಳವಳಿಯ ಇನ್ನೊಂದು ಲಕ್ಷಣವೆಂದರೆ ಹಿಂದೂ ಮುಸ್ಲಿಂ ಐಕಮತ್ಯಕ್ಕೆ ಪ್ರಾಮುಖ್ಯತೆ ನೀಡಿದ್ದು. ಎಲ್ಲಾ ಕವಿಗಳೂ ಹಿಂದೂ ಮುಸ್ಲಿಮರ ಐಕಮತ್ಯದ ಬಗ್ಗೆ ಹೇಳದಿದ್ದರೂ, ಕಬೀರ್, ನಾನಕ್, ತುಳಸಿದಾಸ್ ಮತ್ತು ಕೆಲವು ಸೂಫಿ ಕವಿಗಳು ಇದಕ್ಕೆ ಮಹತ್ವ ನೀಡಿದರು. ರಮಾನಂದರ ಅನುಯಾಯಿಯಾಗಿ ಪ್ರಾರಂಭಿಸಿದ ಕಬೀರ್ ಮುಂದೆ ತನ್ನದೇ ಆದ ಚಿಂತನೆ ಹಾಗೂ ತತ್ವಬೋಧನೆಯನ್ನು ಬೆಳೆಸಿದ. ಆತ ಕೆಳಜಾತಿಯ ನೇಕಾರನಾಗಿ, ಮುಸ್ಲಿಂ ಆಗಿ ಬೆಳೆದ. ಮೂಲತಃ ಅವನ ಕವಿತೆ ಜನಸಾಮಾನ್ಯರ ಕವಿತೆಯಾಗಿತ್ತು. ಮುಸ್ಲಿಮರು ಅವನನ್ನು ಸೂಫಿಯಂತೆ ಕಂಡರೆ ಹಿಂದೂಗಳು ಅವನನ್ನು ರಾಮಭಕ್ತನಂತೆ ನೋಡಿದರು.

ಚೈತನ್ಯ ಕೇವಲ ಭಕ್ತಿ ಚಳವಳಿಯ ಸಂತನಾಗಿರದೆ ತೀವ್ರವಾದ ಸಮಾಜ ಸುಧಾರಕನೂ ಆಗಿದ್ದ. ಆತ ಸಂಘಟಿಸಿದ ವೈಷ್ಣವ ಚಳವಳಿಯಲ್ಲಿ ಬಹುಪಾಲು ಜನ ಮಿಡ್ನಾಪುರದ ಬುಡಕಟ್ಟಿನ ಜನ ಹಾಗೂ ಕೆಳಜಾತಿಯವರಾಗಿದ್ದರು. ಚೈತನ್ಯರ ಕವಿತೆಗಳು ಶ್ರೀಧರ ದಾಸನಂತಹ ತರಕಾರಿ ಮಾರಾಟಗಾರನನ್ನು ಮುಟ್ಟಬಲ್ಲದಾಗಿತ್ತು. ಚೈತನ್ಯರ ಶಿಷ್ಯ ನಿತ್ಯಾನಂದ ಬುಡಕಟ್ಟಿನ ಜನರ ಜೊತೆ ಕೆಲಸ ಮಾಡಿದ. ರಮಾನಂದರು ಜಾತಿ ವ್ಯವಸ್ಥೆಯನ್ನು ವಿರೋಧಿಸುವುದಲ್ಲದೆ ಹಲವಾರು ಮುಸ್ಲಿಮರನ್ನು ಸಹ ತಮ್ಮ ಅನುಯಾಯಿಗಳನ್ನಾಗಿ ಹೊಂದಿದ್ದರು. ಅವರವರ ನಂಬಿಕೆಯ ಪ್ರಕಾರ ಪ್ರಾರ್ಥಿಸಲು ಶಿಷ್ಯರಿಗೆ ಅವಕಾಶ ಮಾಡಿಕೊಟ್ಟರು. ಸೂಫಿಗಳು ಇಸ್ಲಾಂನಲ್ಲಿರುವ ದುಷ್ಟ ಪದ್ಧತಿಗಳನ್ನು ವಿರೋಧಿಸಿದರು ಮತ್ತು ಉಲೇಮಾದ ಧಾರ್ಮಿಕ ವಿಶ್ಲೇಷಣೆಯನ್ನು ಬಹಿರಂಗವಾಗಿ ಪ್ರಶ್ನಿಸಿದರು. ದೇವರು ಮತ್ತು ಮನುಷ್ಯನ ಸಂಬಂಧಗಳನ್ನು ಇಸ್ಲಾಂ ವ್ಯಾಖ್ಯಾನಿಸಿದ್ದು, ಅದನ್ನು ಹೊಸ ರೀತಿಯಲ್ಲಿ ವ್ಯಾಖ್ಯಾನಿಸುವುದು ಸಾಧ್ಯವಿಲ್ಲ ಎಂಬ ಉಲೇಮಾಗಳ ವಾದವನ್ನು ಸೂಫಿಗಳು ಒಪ್ಪಲಿಲ್ಲ. ದೇವರನ್ನು ಕಾಣುವುದು ಪ್ರೇಮದಿಂದಲೇ ವಿನಾ ಭಯದಿಂದಲ್ಲ ಮತ್ತು ದೈವ ಪ್ರೀತಿಯು ಎಲ್ಲಾ ಧರ್ಮಗಳಿಗಿಂತ ಮಿಗಿಲಾದ್ದು ಎಂದು ಹೇಳಿದರು. ಸ್ವಾಭಾವಿಕವಾಗಿ ಸೂಫಿಗಳನ್ನು ಖಲೀಫರು ಹಿಂಸಿಸಿದರು ಹಾಗೂ ಶಿಕ್ಷಿಸಿದರು. ಹಲವಾರು ಮುಸ್ಲಿಂ ದೊರೆಗಳು ಅವರಿಗೆ ಆಶ್ರಯ ನೀಡಲು ನಿರಾಕರಿಸಿದರು.

ಸೂಫಿಗಳಲ್ಲಿ ನಾಲ್ಕು ಪಂಥಗಳಿವೆ: ಅವುಗಳೆಂದರೆ ಕದ್ರಿ, ಸೂಹ್ರಾವರ್ದಿ, ನಕ್ಷಾಬಂದಿ ಮತ್ತು ಚಿಸ್ತಿ. ಇವುಗಳೆಲ್ಲಾ ಆಯಾ ಸ್ಥಳಗಳಿಗೆ ಸಂಬಂಧಪಟ್ಟ ಹೆಸರುಗಳು. ಇವುಗಳಲ್ಲಿ ಕೊನೆಯದು (ಪರ್ಷಿಯಾದ ಚಿಸ್ತಿ ಎಂಬ ಸ್ಥಳದಿಂದ ಬಂದದ್ದು) ಭಾರತದಲ್ಲಿ ಜನಪ್ರಿಯವಾಗಿದ್ದು ಅಷ್ಟಾಗಿ ತೊಂದರೆಗೆ ಒಳಗಾಗಲಿಲ್ಲ.

ಲಾಹೋರ್‌ನ ನಭಾ ಶೇಖ್ ಫರೀದ್ (೧೧೭೩-೧೨೬೫) ಮಹಾನ್ ಸೂಫಿ ಸಂತನಾಗಿದ್ದ. ಸ್ತ್ರೀ-ಪುರುಷರ ಸಮಾನತೆಯ ಸಂದೇಶವನ್ನು ಪ್ರಸಾರಮಾಡಿದ್ದ ಆತ ಪರ್ಷಿಯನ್ ಭಾಷೆಯಲ್ಲಿ ವಿದ್ವಾಂಸನಾಗಿದ್ದ. ಈತ ಪಂಜಾಬಿ ಭಾಷೆಯ ಬೆಳವಣಿಗೆಗೆ ಸಹಾಯಕನಾಗಿದ್ದುದಲ್ಲದೆ ಹಲವಾರು ಕವಿತೆಗಳನ್ನು ಪಂಜಾಬಿಯಲ್ಲಿ ರಚಿಸಿದ. ಹಲವಾರು ಹಿಂದೂಗಳು ಸಹ ಅವನ ಅನುಯಾಯಿಗಳಾಗಿದ್ದರು. ಅವನ 'ಎಲ್ಲಾ ಹೃದಯಗಳೂ ರತ್ನಗಳೇ, ಅವುಗಳಿಗೆ ಕೆಡುಕನ್ನು ಮಾಡದಿರಿ,' ಎಂದು ಪ್ರಾರಂಭವಾಗುವ ನಾಲ್ಕು ಕವಿತೆಗಳನ್ನು ''ಗುರು ಗ್ರಂಥ ಸಾಹಿಬ್''ನಲ್ಲಿ ಸೇರಿಸಲಾಗಿದೆ. ಫರೀದನ ಕವನಗಳ ವಾಚನವನ್ನು ಸಿಖ್ಖರು ಬಹಳವಾಗಿ ಪ್ರೀತಿಸುತ್ತಾರೆ. ಖ್ವಾಜಾ ನಿಜಾಮುದ್ದೀನ್ ಔಲಿಯ, ಸೈಯದ್ ಅಶ್ರಾಫ್ ಖ್ವಾಜಾ ಮೋಹಿದ್ದೀನ್ ಚಿಸ್ತಿ, ಮಹಮದ್ ಭಕ್ತಿಯಾರ್ ಕಾಫಿ ಮುಂತಾದ ಸೂಫಿ ಸಂತರು ಪ್ರೇಮ ಮತ್ತು ಧಾರ್ಮಿಕ ಸಹೋದರತ್ವದ ಬಗ್ಗೆ ಹಾಡಿದ್ದಾರೆ. ಮುಸ್ಲಿಮರ ಅರಸರು ಧರ್ಮಕ್ಕಿಂತ ತಮ್ಮ ಆಳ್ವಿಕೆಗೆ ಆಧ್ಯತೆ ನೀಡಿದ್ದಾರೆ ಎಂಬುದು ಸೂಫಿಗಳ ಟೀಕೆ. ಕಾಬಾ-ಕಾಶಿ, ರಾಮ-ರಹೀಮ ಒಂದೇ ಎನ್ನುವ ಅಭಿಪ್ರಾಯವನ್ನು ಕಬೀರ್-ನಾನಕ್ ಹರಡಿದರು. ಹಿಂದೂ-ಮುಸ್ಲಿಮರು ಸಹೋದರರು

ಮುಂದಿನ ಪುಟಕ್ಕೆ

# ಮೂಗುರ್ಚಿಗಳು



**ಪ್ರಾ**ಣಿಗಳನ್ನು ಪಳಗಿಸಿ ತನ್ನ ಅನುಕೂಲಕ್ಕೆ ತಕ್ಕಂತೆ ನಡೆಸಿಕೊಳ್ಳಲು ಮನುಷ್ಯ ಕಂಡುಕೊಂಡಿರುವ ಚತುರೋಪಾಯಗಳು ಹಲವಾರಿವೆ. ದನಕರುಗಳಿಗೆ ಮೂಗುದಾರ-ಬಾಯಿಬುಟ್ಟಿ, ಕುದುರೆಗಳಿಗೆ ಲಂಗುಲಗಾಮು, ಕತ್ತೆಗಳಿಗೆ ಮುಂಗಾಲ್‌ಕಟ್ಟು ಇವನ್ನೆಲ್ಲ ನೀವು ಪ್ರತ್ಯಕ್ಷ ನೋಡಿರಬಹುದು. ಆದರೆ ಹಂದಿಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ ನಡೆಸಿಕೊಳ್ಳುವುದು ಹೇಗೆ ?

ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ 'ನಸೆಹಳ್ಳ'ವೆಂಬ ಗಿರಿಗ್ರಾಮವಿದೆ. ಇಲ್ಲಿಗೆ ಕುದುರೆಮುಖ ಶಿಬಿರದ ಚಾರಣಕ್ಕಾಗಿ ಹೋಗಿದ್ದಾಗ ಕಂಡ ದೃಶ್ಯವಿದು. ನಸೆಹಳ್ಳದ ಗೌಡ ಕುಟುಂಬದ ಮನೆಯಲ್ಲಿ ಸಾಕಿಕೊಂಡಿದ್ದ ಹಂದಿಯ ಮೂಗಿಗೆ ಕಂಬಿಯೊಂದನ್ನು ಚುಚ್ಚಿ ಸುರುಳಿ ಸುತ್ತಿದ್ದರು (ಚಿತ್ರ ನೋಡಿ). ಇದನ್ನು ಅವರು 'ಮೂಗುತಿ' ಎನ್ನುತ್ತಿದ್ದರು. ಹಂದಿ ಮೂತಿಗೆ ಇದೆಂಥ ಮೂಗುತಿ ಎಂದು ಸೋಜಿಗವಾಯಿತು. ಹಂದಿಯ ಮುಖವೆಂದರೆ ಜೀವಂತ ನೇಗಿಲು ಎಂದೇ ಅರ್ಥ ! ನೇಗಿಲಿನ ತಲೆಗೆ ಜೀವ ಬಂದರೆ ಅದು ಹಂದಿಯ ಮುಖವೆಂದೇ ಹೇಳಬಹುದು. ತನ್ನ ಮುಸುಡಿಯಿಂದ ನೆಲವನ್ನು ಉತ್ತು ಗಡ್ಡೆ ಮತ್ತು ಬೇರುಗಳನ್ನು ಬಗೆದು ತಿನ್ನುವ ಹಂದಿಯ ಉಳುಮೆ ಕಾರ್ಯ ರೈತಾಪಿ ಜನಗಳಿಗೆ ಪರಿಚಿತವಾದುದು. ಹೊಟ್ಟೆಪಾಡಿಗಾಗಿ ನೆಲವನ್ನು ಉತ್ಖನನ ಮಾಡುವ ಹಂದಿಯ ಬಲಿಷ್ಠ ದಾಡೆಗಳಿಗೆ ಹುಲಿ ಕೂಡ ಹೆದರುವುದುಂಟು. ಇಂಥ ದಾಡೆಗಳಿಂದಲೇ ವರಾಹ ಸ್ವಾಮಿಯು ಭೂದೇವಿಯನ್ನು ಉದ್ಧರಿಸಿದ ಕಥೆ ಪುರಾಣಪ್ರಸಿದ್ಧವಾಗಿದೆ.

ಆದರೆ ಕೇವಲ ಚೋಟುದ್ದದ ಕಂಬಿಯೊಂದು ಹಂದಿ ಮೂತಿಗೆ ಮೂಗುತಿಯಾಗಿ ಪ್ರಾಣಿಧರ್ಮವನ್ನೇ ಬದಲಾಯಿಸಿದ ಪ್ರತ್ಯಕ್ಷ ಪ್ರಮಾಣವನ್ನು ನಸೆಹಳ್ಳದಲ್ಲಿ ಕಂಡು ನರನ ಬುದ್ಧಿಯ ಕುಣಿತಕ್ಕೆ ಬೆರಗುಂಟಾಯಿತು. ಈ ಗಿರಿಗ್ರಾಮದ ಗೌಡ ಕುಟುಂಬಗಳ ಸುತ್ತಮುತ್ತ ವಿಸ್ತರಿಸಿಕೊಂಡಿರುವ ಬಾಳೆಯ ತೋಟದಲ್ಲಿ ಗಡ್ಡೆಗಳು ಮತ್ತು ನಾನಾ ಜಾತಿಯ ಬೇರುಗಳು ಸಮೃದ್ಧಿಯಾಗಿವೆ. ಇವನ್ನೆಲ್ಲ ಉತ್ತು ಹಂದಿಗಳು ಹಾಳು ಮಾಡುವುದನ್ನು ತಪ್ಪಿಸುವ ಸಲುವಾಗಿಯೆ ಅಲ್ಲಿನ ನಿವಾಸಿಗಳು ಹಂದಿಗೆ ಮೂಗುತಿ ಹಾಕುವ ಚತುರೋಪಾಯವನ್ನು ಕಂಡುಕೊಂಡಿದ್ದರು. ಇದರಿಂದ ನೆಲವನ್ನು ಉತ್ತು ಬಗೆಯಲಿಕ್ಕೆ ಆಗದ ಹಂದಿಗಳು ಒಡೆಯರು ಹಾಕಿದ್ದನ್ನು ತಿಂದುಕೊಂಡು ವಿಧೇಯವಾಗಿ ಬಿದ್ದಿರುತ್ತವೆ.

ಹೀಗೆ ಸಾಕು ಪ್ರಾಣಗಳ ಮೂಗು ಚುಚ್ಚಿ ತನ್ನ ಅಂಕೆಯಲ್ಲಿಟ್ಟುಕೊಳ್ಳುವ ವಿಧಾನಕ್ಕೆ ಮೂಗುರ್ಚಿಗಳು (ಮೂಗು ಚುಚ್ಚಿಸಿಕೊಳ್ಳುವ ಜೀವಿಗಳು) ಎನ್ನುತ್ತಾರೆ. ಕೀಚಕನ ಉಪಟಳಕ್ಕೆ ಬೇಸತ್ತ ದ್ರೌಪದಿಯು ರಾಜಸಭೆಯಲ್ಲಿ ಭಂಗಿತಳಾದಾಗ ಸುಮ್ಮನೆ ಕುಳಿತಿದ್ದ ಪಾಂಡವರನ್ನು ಮೂದಲಿಸುತ್ತಾ ''ಬಡಿಹೋರಿಗಳು ಪಾಂಡವರಂತೆ ಮೂಗುರ್ಚಿಗಳು ಅದಿನ್ನಾರುಂಟು ?'' ಎಂದು ಪ್ರಶ್ನಿಸುತ್ತಾಳೆ. ಬಡಿಸಿಕೊಳ್ಳುವ ಹೋರಿಗಳಂತೆ ಸುಮ್ಮನೆ ಕುಳಿತಿರುವ ಪಾಂಡವರಂಥ 'ಮೂಗುರ್ಚಿಗಳು' (ಮೂಗು ಚುಚ್ಚಿಸಿಕೊಂಡವರು) ಇನ್ನಾರುಂಟು ? - ಎಂಬ ದ್ರೌಪದಿಯ ಕಟಕಿಯಲ್ಲಿ ಗ್ರಾಮೀಣ ಜೀವನಾನುಭವ ಮತ್ತು ಒರಟು ಮಾತು ಸಹಜವಾಗಿ ಮೂಡಿಬಂದಿದೆ.

ಮದುವೆಯಾಗುವ ಹೆಣ್ಣು ಮಕ್ಕಳಿಗೆ ಮೂಗು ಚುಚ್ಚಿ 'ಮೂಗುರ್ಚಿ' ಮಾಡುತ್ತಾರಾದರೂ ಇಲ್ಲಿ ಶಿಕ್ಷೆಗಿಂತಲೂ ಅಲಂಕಾರ ದೃಷ್ಟಿಯೇ ಹೆಚ್ಚಿರುತ್ತದೆ. ಹಂದಿಯ ಪಾಲಿಗೆ ಶಿಕ್ಷೆಯಾಗುವ ಮೂಗುತಿ ಹೆಣ್ಣುಮಕ್ಕಳ ಪಾಲಿಗೆ ಅಲಂಕಾರವಾಗಿಬಿಡುವುದನ್ನಿಲ್ಲಿ ಗ್ರಹಿಸಬೇಕು. ಪೋಲಿ ತಿರುಗುವ ಗಂಡುಮಕ್ಕಳಿಗೆ ಸರಿದಾರಿಗೆ ತರುವುದಕ್ಕೆ ಮದುವೆ ಮಾಡಿಬಿಡುವುದು ಒಂದು ದೃಷ್ಟಿಯಲ್ಲಿ ಹೋರಿಗೆ ಮೂಗುದಾರ ಹಾಕಿದಂತೆಯೇ ಸರಿ ! ಇಲ್ಲೆಲ್ಲ ಮೂಗುರ್ಚಿಯ ಅರ್ಥ ವ್ಯಾಪ್ತಿ ಬಾಳನಡೆಯ ನುಡಿಗಟ್ಟಾಗಿರುವುದನ್ನು ಗಮನಿಸಬೇಕು.

ತೃತೀಯ ಜಗತ್ತಿನ ದೇಶಗಳನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳಲು ಶಕ್ತಿರಾಷ್ಟ್ರಗಳು ನಡೆಸುವ ಹುನ್ನಾರಗಳು ಕೂಡ ಮೂಗುದಾರ-ಬಾಯಿಬುಟ್ಟಿ, ಲಂಗುಲಗಾಮು, ಮುಂಗಾಲ್‌ಕಟ್ಟು, ಮೂಗುತಿಗಳನ್ನು ಹೋಲುವಂಥವೆಂದು ಹೇಳಬಹುದು. ವಿಶ್ವ ವಾಣಿಜ್ಯ ಒಪ್ಪಂದಗಳು, ಸಿ.ಟಿ.ಬಿ.ಟಿ, ನಾಸ ಷರತ್ತುಗಳು, ವಿಶ್ವಸಂಸ್ಥೆಯ ನಿಯಮಗಳು ಮುಂತಾದ ಜಾಗತೀಕರಣದ ನೆಲೆಗಳು ಕೂಡ ತೃತೀಯ ಜಗತ್ತಿನ ದೇಶಗಳ ಪಾಲಿಗೆ ಮೂಗುರ್ಚಿಯೇ ಸರಿ ! ಆದರೆ ಇದು ಹಂದಿಯ ಪಾಲಿನ ಮೂಗುತಿಯಂತೆ ಶಿಕ್ಷೆಯಾಗದೆ, ಹೆಣ್ಣು ಮಕ್ಕಳ ಪಾಲಿನ ಮೂಗುತಿಯಂತೆ ಅಲಂಕಾರವಾಗಬಲ್ಲುದೆ ?

**ವಿ. ಚಂದ್ರಶೇಖರ ನಂಗಲಿ**
೩೮೮೪, ಪಿ. ಸಿ. ಬಡಾವಣೆ, ಕೋಲಾರ - ೫೬೩ ೧೦೧

---

*ಹಿಂದಿನ ಪುಟದಿಂದ*

ಎಂಬುದನ್ನು ಇಬ್ಬರೂ ಅವರ ಕವಿತೆಗಳಲ್ಲಿ ಹೇಳಿದ್ದಾರೆ. ಅವರ ಬಹುಪಾಲು ಅನುಯಾಯಿಗಳು ಕೃಷಿ ಕಾರ್ಮಿಕರು ಇಲ್ಲವೆ ವೃತ್ತಿ ಜೀವಿಗಳು. ತುಳಸಿದಾಸ್ ಬ್ರಾಹ್ಮಣನಾಗಿದ್ದರೂ ಅಸ್ಪೃಶ್ಯರಿಂದ ಆಹಾರ ಸ್ವೀಕರಿಸಿದ್ದನು. 'ಹರಿಜನ' ಶಬ್ದವನ್ನು ಮೊದಲು ಬಳಸಿದವನು ಗುಜರಾತಿನ ನರಸಿಂಹ ಮೆಹತಾ.

ಹೀಗಾಗಿ ಜನಸಾಮಾನ್ಯರು ಭಕ್ತಿ ಚಳವಳಿಗಳನ್ನು ಪೋಷಿಸಿ ಬೆಂಬಲಿಸಿದರೂ ಸಹ ಅವರ ಭೌತಿಕ ಬದುಕನ್ನು ಪರಂಪರಾಗತ ಶೋಷಣೆಗಳಿಂದ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ.

ಈ ಚಿಂತನೆಗಳು ಸಾಮಾನ್ಯ ಜನರಿಗೆ ಧಾರ್ಮಿಕ ಸಾಂತ್ವನ ಹಾಗೂ ಸುಧಾರಣೆಗಳನ್ನು ನೀಡಲಷ್ಟೇ ಸಫಲವಾದವು. ಕೊನೆಗೆ ಈ ಎಲ್ಲ ಭಕ್ತಿ ಚಳವಳಿಗಳು ಸನಾತನ ಧಾರ್ಮಿಕ ವ್ಯವಸ್ಥೆಯ ಭಾಗವಾಗಿಹೋಗಿದ್ದು ಇತಿಹಾಸದ ವಿಪರ್ಯಾಸವೇ ಆಗಿದೆ. ಕೆಲವೊಂದು ಮೂಢನಂಬಿಕೆಗಳು ಕ್ರಮೇಣ ನಶಿಸಿದವು, ನಿಜ; ಉಳಿದಂತೆ ಸಾಮಾಜಿಕ ವ್ಯವಸ್ಥೆಯಲ್ಲಿ, ಭೌತಿಕ ಸಂಪತ್ತಿನ ಉತ್ಪಾದನಾ ವಿಧಾನಗಳಲ್ಲಿ, ಬದಲಾವಣೆಗಳು ಆಗದೇ ಇದ್ದುದರಿಂದ ಸಾಮಾಜಿಕ ವ್ಯವಸ್ಥೆಯು ನಿಂತಲ್ಲೇ ನಿಂತಿತು.

ಮಧ್ಯಕಾಲೀನ ಚಿಂತನೆಗಳು ಸಮಾಜದ ಉತ್ಪಾದನಾ ಸಂಬಂಧಗಳನ್ನು ವ್ಯಾಪಕವಾಗಿ ಮಾರ್ಪಾಟು ಮಾಡಿ ಆರ್ಥಿಕ ವ್ಯವಸ್ಥೆಯಲ್ಲಿ ಬದಲಾವಣೆ ತರುವಂತಹ ರಾಜಕೀಯ, ಸಾಮಾಜಿಕ ಚಿಂತನೆ ಹಾಗೂ ಕ್ರಿಯೆಗಳಿಗೆ ಅತ್ಯಂತ ಪ್ರಭಾವಶಾಲಿಯಾಗಿ ನಾಂದಿ ಹಾಡಲಿಲ್ಲವೆಂದರೆ ಆಗಿನ ಸುಧಾರಕರಿಗೆ ಅಪಚಾರ ಬಗೆಯುವ ಮಾತಾಗುವುದಿಲ್ಲ. ಏಕೆಂದರೆ, ಅಂದಿನ ಚಾರಿತ್ರಿಕ ಸೀಮಾರೇಖೆಗಳನ್ನು ದಾಟಲು ಮೂಲಭೂತ ವ್ಯವಸ್ಥೆಯ ಅಡಚಣೆ ಗಂಭೀರವಾಗಿತ್ತು. ಬಹುತೇಕ ಯುರೋಪಿನ ವಸಾಹತುಗಾರರು ಬರುವವರೆಗೆ ಕೈಗಾರಿಕಾ ಬೆಳವಣಿಗೆಗಳು ಮತ್ತು ಕೃಷಿಯ ವಾಣಿಜ್ಯೀಕರಣವಾಗುವವರೆಗೆ ಮಧ್ಯಕಾಲೀನ ಭಾರತದ ಸಾಮಾಜಿಕ ವ್ಯವಸ್ಥೆ ಬಹುತೇಕ ಸ್ಥಗಿತವಾಗಿಯೇ ಉಳಿದಿತ್ತು. ಅದರ ಲಕ್ಷಣಗಳು ಇಂದಿಗೂ ಪೂರ್ತಿಯಾಗಿ ಅಳಿಸಿಹೋಗಿಲ್ಲ. ಕಾಲ ಕಾಲಕ್ಕೆ ಸಾಮಾಜಿಕ ಅಗತ್ಯಗಳಿಗೆ ಅನುಗುಣವಾಗಿ ಆಗಬೇಕಾಗಿದ್ದ ಬದಲಾವಣೆಗಳು ಆಗಲಿಲ್ಲ ಎನ್ನುವುದು ಸಹ ಗಮನಿಸಬೇಕಾದ ಅಂಶವಾಗಿದೆ. ಹೀಗಾಗಿ ಉತ್ಪಾದನಾ ವಿಧಾನಗಳಲ್ಲಿ ಪ್ರಗತಿ ಹೊಂದಿದ್ದ ಯುರೋಪಿನ ವಸಾಹತುವಾದಿ ದೇಶಗಳು ಬಲು ಬೇಗನೆ ನಮ್ಮ ದೇಶವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಲು ಸಾಧ್ಯವಾಯಿತು. ಇದನ್ನು ಹಿಮ್ಮೆಟ್ಟಿಸುವ ಸಾಮಾಜಿಕ ವ್ಯವಸ್ಥೆ, ಸಾಮಾಜಿಕ ಚಿಂತನೆಗಳು ಆಗಿನ್ನೂ ನಮ್ಮ ದೇಶದಲ್ಲಿ ಮೂಡಿರಲಿಲ್ಲ ಎಂಬುದು ಸಹ ಅಷ್ಟೇ ವಾಸ್ತವವಾಗಿದೆ. ಒಂದು ದೇಶದ ಕಲ್ಪನೆಯೇ ಬಹುಶಃ ಆಗ ಇರಲಿಲ್ಲವೆಂದರೂ ತಪ್ಪಾಗುವುದಿಲ್ಲ. ಭಾವನಾತ್ಮಕ ಐಕ್ಯತೆ ಇತ್ತೆಂದು ಹೇಳಲಾದ ನಮ್ಮ ದೇಶದಲ್ಲಿ ಆರ್ಥಿಕ ಮತ್ತು ರಾಜಕೀಯ ಸಹಭಾಗಿತ್ವವಾಗಲಿ, ಐಕ್ಯತೆಯಾಗಲಿ ಆವಿರ್ಭವಿಸಲಿಲ್ಲ. ಅದು ಇಂದಿಗೂ ಮುಕ್ತಾಯವಾಗದಿರುವ ಅಧ್ಯಾಯವಾಗಿಯೇ ಇದೆಯೆಂಬುದು ಅನುಭವದ ವಿಷಯ.

**ಡಾ|| ಸಿದ್ದಲಿಂಗಸ್ವಾಮಿ**
ಡಿ-೮, ಪಿ.ಡಬ್ಲ್ಯು.ಡಿ ಕ್ವಾರ್ಟರ್ಸ್, ಜೀವನ ಭೀಮಾನಗರ, ಎಚ್. ಎ. ಎಲ್. ೩ನೇ ಹಂತ, ಬೆಂಗಳೂರು-೭೫

# ಬುದ್ಧನ ದೃಷ್ಟಿಯಲ್ಲಿ ಜಾತಿ ಮತ್ತು ಧರ್ಮ

**ಸು**ಮಾರು ೨೬೦೦ ವರ್ಷಗಳಷ್ಟು ಹಿಂದೆಯೆ ಜಾತಿ ಮತ್ತು ಧರ್ಮಗಳನ್ನು ವೈಜ್ಞಾನಿಕ ದೃಷ್ಟಿಯಿಂದ ವಿಶ್ಲೇಷಿಸಿದವನು ಗೌತಮ ಬುದ್ಧ. ವೇದಕಾಲದ ಪ್ರಕೃತಿಯ ಅಧ್ಯಯನ ಹಾಗೂ ಉಪನಿಷತ್ ಕಾಲದ ಚೈತನ್ಯದ ವಿಶ್ವವ್ಯಾಪಕ ಶಕ್ತಿಯನ್ನು ಕುರಿತ ವಿಶ್ಲೇಷಣೆ ಭಾರತದ ಮಹತ್ವದ ಕೊಡುಗೆಗಳು. ಆದರೆ ಅವು ಜಾತಿ ಮತಗಳ ಸಂಕುಚಿತ ದೃಷ್ಟಿಗೆ ಒಳಗಾಗಿ ತಮ್ಮ ವಿಶ್ವ ವ್ಯಾಪಕತೆಗೆ ಕುಂದು ತಂದುಕೊಂಡವು.

ಬದುಕಿನಲ್ಲಿ ಸಾಕ್ಷಾತ್ಕಾರಗೊಳಿಸಿಕೊಳ್ಳಬೇಕಾದ ಧರ್ಮ ಕೇವಲ ಸಾಂಪ್ರದಾಯಿಕ ಆಚರಣೆಗೆ ಸೀಮಿತವಾಗಿ ಶೋಷಣೆಗೆ ಇಂಬಾದದ್ದು ಭಾರತದ ದುರಂತ. ಇಂದಿಗೂ ಜಾತಿ, ಧರ್ಮಗಳನ್ನು ವೈಜ್ಞಾನಿಕ ದೃಷ್ಟಿಯಿಂದ ನೋಡದೆ ಅಂಧಾಚರಣೆಯಲ್ಲಿ ತೊಡಗಿರುವುದು ಮನುಕುಲದ ಸಂಕಷ್ಟಕ್ಕೆ ಕಾರಣವಾಗಿದೆ.

**ಜಾತಿ** : ವಿವೇಕಾನಂದರು ಜಾತಿಯನ್ನು ಕುರಿತು 'ವೈವಿಧ್ಯತೆ' ಎಂದರು. ಜಗತ್ತಿನಲ್ಲಿ ಎಷ್ಟು ಜೀವಿಗಳಿವೆಯೋ ಅಷ್ಟು ಜಾತಿಗಳಿವೆ. ಅವು ಕೇವಲ ಮನುಷ್ಯರಿಗಷ್ಟೇ ಸೀಮಿತವಾಗಿಲ್ಲ. ಪ್ರಾಣಿ ಹಾಗೂ ಸಸ್ಯ ವರ್ಗಗಳಿಗೂ ಅನ್ವಯಿಸುತ್ತದೆ ಎಂಬ ಜಾತಿಯ ವ್ಯಾಪಕತೆಯನ್ನು ಮನವರಿಕೆ ಮಾಡಿದರು. ನಿಜ, ವಿಶ್ವದ ಪ್ರತಿಯೊಂದು ಜೀವವೂ ತನ್ನ 'ತನ'ದ ತಾನನದಲ್ಲೆ ತನ್ಮಯವಾಗುವ ಗುಣವನ್ನು ಹೊಂದಿರುತ್ತದೆ. ಆ ತನ್ನ 'ತನ'ವೆ ಅದರ ಜಾತಿ. ಪ್ರಕೃತಿಯ ಪಂಚಭೂತಗಳ ಆಸ್ವಾದನೆ ಮಾಡುವಾಗ ಜಾತಿ ಧರ್ಮಗಳ ಸೋಂಕಿಗೆ ಯಾವ ಜೀವಿಗಳೂ ಸಿಲುಕಿರುವುದಿಲ್ಲ. ಸೂರ್ಯೋದಯ, ಸೂರ್ಯಾಸ್ತಮಗಳನ್ನಾಗಲಿ, ಚಂದ್ರೋದಯದ ಚುಂಬಕ ಶಕ್ತಿಯನ್ನಾಗಲಿ ಸೃಷ್ಟಿಯ ಪ್ರತಿಯೊಂದು ಜೀವಗಳೂ ಸಹಜವಾಗಿ ಮುಕ್ತ ಮನಸ್ಸಿನಿಂದ ಸವಿದು ಆನಂದಿಸುತ್ತವೆ. ಸೂರ್ಯೋದಯ ಚಂದ್ರೋದಯಗಳು ಭಿನ್ನಭಿನ್ನ ಜಾತಿ ಧರ್ಮಗಳ ದೃಷ್ಟಿಗೆ ಭಿನ್ನಭಿನ್ನವಾಗಿ ಕಾಣದೆ ಆಸ್ವಾದಿಸುವವರ ಗುಣ ಧರ್ಮಗಳಿಗೆ ಅನುಗುಣವಾಗಿರುತ್ತವೆ.

ಇಷ್ಟು ವ್ಯಾಪಕವಾದ, ವೈವಿಧ್ಯಮಯವಾದ ಜೀವಶಕ್ತಿಯನ್ನು ಸಂಕುಚಿತಗೊಳಿಸಿ ಜಾತಿಯ ಹೆಸರಿನಲ್ಲಿ ಮನುಷ್ಯ ಮನುಷ್ಯರೊಳಗೆ ಮೇಲು-ಕೀಳು, ಸ್ಪೃಶ್ಯ-ಅಸ್ಪೃಶ್ಯತೆಯನ್ನು ಸಮಾಜ ಹುಟ್ಟುಹಾಕಿದೆ. ಸಮಾಜದ ಈ ವಿಕೃತಿಗೆ ಗೌತಮ ಬುದ್ಧ ವೈಜ್ಞಾನಿಕ ವಿಶ್ಲೇಷಣೆಯನ್ನು ನೀಡಿ ಜಾತಿಯನ್ನು ಕುರಿತು ಸ್ಪಷ್ಟ ಅರಿವನ್ನು ಕರುಣಿಸಿದ್ದಾನೆ.

ಪ್ರಕೃತಿ ವಿಸ್ಮಯವಾದುದೆಂತೋ ಅಂತೆ ಅರ್ಥಪೂರ್ಣವೂ ಆಗಿದೆ. ಸೃಷ್ಟಿಗೆ ತನ್ನದೇ ಆದ ಸೂತ್ರವೂ ಇದೆ. ಆ ಸೂತ್ರವನ್ನು ಅರಿತು ಅದರಂತೆ ನಡೆದರೆ ಜೀವನ ಸಾರ್ಥಕ, ಅದರಿಂದ ಹೊರಳಿದರೆ ನಿರರ್ಥಕ.

ಗೌತಮ ಬುದ್ಧ ಜಾತಿಯನ್ನು ಸಜಾತಿ-ವಿಜಾತಿ ಎಂದು ಎರಡು ಬಗೆಯಲ್ಲಿ ಗುರುತಿಸುತ್ತಾನೆ. ಹಸು-ಹೋರಿಗಳು ಕೂಡಿದರೆ ಕರು ಹುಟ್ಟುತ್ತದೆ; ಅದು ಸಜಾತಿ. ಎಮ್ಮೆ-ಕೋಣಗಳು ಕೂಡಿದರೆ ಕರು ಹಾಕುತ್ತದೆ; ಅದು ಸಜಾತಿ. ಹಸು ಮತ್ತು ಕೋಣ ಕೂಡಿದರೆ ಕರು ಹುಟ್ಟುವುದಿಲ್ಲ; ಅದು ವಿಜಾತಿ. ಈ ಹಿನ್ನೆಲೆಯಲ್ಲಿ ಗೌತಮ ಬುದ್ಧ ಸಮಾಜ ಹುಟ್ಟುಹಾಕಿದ ಜಾತಿ ಧರ್ಮಗಳ ನೆಲೆಯಲ್ಲಿ ಸಜಾತಿಯನ್ನು ವಿಶ್ಲೇಷಿಸಿ ಗುರುತಿಸುತ್ತಾನೆ.

ಬ್ರಾಹ್ಮಣ ಹೆಂಗಸು ಶೂದ್ರ ಗಂಡಿನೊಂದಿಗೆ ಕೂಡಿದರೆ ಮಕ್ಕಳಾಗುವುದಿಲ್ಲವೆ? ಆಗುತ್ತದೆ. ಬ್ರಾಹ್ಮಣತಿಯೊಂದಿಗೆ ಹೊಲೆಯ ಕೂಡಿದರೆ, ಹೊಲತಿಯೊಂದಿಗೆ ಬ್ರಾಹ್ಮಣ ಕೂಡಿದರೆ ಮಕ್ಕಳಾಗುವುದಿಲ್ಲವೆ? ಆಗುತ್ತದೆ. ಮುಸಲ್ಮಾನ್ ಹೆಣ್ಣಿನೊಂದಿಗೆ ಕ್ರಿಶ್ಚಿಯನ್ ಗಂಡು ಕೂಡಿದರೆ, ಕ್ರಿಶ್ಚಿಯನ್ ಹೆಣ್ಣಿನೊಂದಿಗೆ ಹಿಂದೂ ಗಂಡು ಕೂಡಿದರೆ ಹಾಗೂ ಹಿಂದೂ ಹೆಣ್ಣಿನೊಂದಿಗೆ ಕ್ರಿಶ್ಚಿಯನ್ ಅಥವಾ ಮುಸಲ್ಮಾನ್ ಗಂಡು ಕೂಡಿದರೆ ಮಕ್ಕಳಾಗುವುದಿಲ್ಲವೆ? ಆಗುತ್ತದೆ. ಯಾವ ಒಂದು ಹೆಣ್ಣು ಮತ್ತು ಒಂದು ಗಂಡು ಕೂಡಿದರೆ ಮಕ್ಕಳು ಆಗುತ್ತದೆಯೋ ಅದು ಸಜಾತಿ; ಯಾವ ಒಂದು ಹೆಣ್ಣು ಮತ್ತು ಗಂಡು ಕೂಡಿದರೆ ಮಕ್ಕಳು ಆಗುವುದಿಲ್ಲವೋ ಅದು ವಿಜಾತಿ.

ಗೌತಮ ಬುದ್ಧನ ಈ ವೈಜ್ಞಾನಿಕ ದೃಷ್ಟಿ ಆಪ್ಯಾಯಮಾನವಾದುದಾಗಿದೆ. ಇದು ಸಮಾಜ ಸೃಷ್ಟಿಸಿಕೊಂಡಿರುವ ಜಾತಿ ಭ್ರಮೆಯನ್ನು ಕಿತ್ತೆಸೆದು ಮನುಕುಲ ಒಂದೇ ಎಂಬ ಸ್ಪಷ್ಟ ಅರಿವನ್ನು ಮೂಡಿಸುತ್ತದೆ. ಆ ಅರಿವಿನ ಕಣ್ಣು ತೆರೆಸುವ ಗೌತಮ ಬುದ್ಧನ ಈ ವೈಜ್ಞಾನಿಕ ದೃಷ್ಟಿ ಮನುಕುಲದ ಬೆಳಕು.

**ಧರ್ಮ** : ಧರ್ಮದಲ್ಲಿ ಎರಡು ವಿಧ. ಒಂದು ನಿಸರ್ಗದತ್ತ ಧರ್ಮ ಮತ್ತೊಂದು ಮಾನವ ನಿರ್ಮಿತ ಧರ್ಮ. ಋತು ನಿಯಮಗಳನ್ನು ಅರಿತು ಅದಕ್ಕೆ ಅನುಗುಣವಾಗಿ ಬದುಕುವುದು ವಿಹಿತ. ಆ ನಿಸರ್ಗಧರ್ಮಗಳ ಹಿಂದಿರುವ ಶಕ್ತಿಗಳ ಸಾಕ್ಷಾತ್ಕಾರದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವುದೇ ಮಾನವ ನಿರ್ಮಿತ ಧರ್ಮ.

ಮಾನವ ನಿರ್ಮಿತ ಧರ್ಮಗಳು ಅನೇಕ. ಅವರವರ ರೀತಿ ನೀತಿ ಸಂಪ್ರದಾಯಗಳಿಗೆ ಅನುಗುಣವಾಗಿ ಅದರ ಸಾಕ್ಷಾತ್ಕಾರಕ್ಕಾಗಿ ರೂಪುಗೊಂಡಿರುವುದು. ಆದರೆ ಅವು ಸಾಕ್ಷಾತ್ಕಾರದ ಗುರಿಯಿಂದ ದೂರ ಉಳಿದು ಕೇವಲ ಸಾಂಪ್ರದಾಯಿಕ ಆಚರಣೆಗಳಿಗೆ ಮಾತ್ರ ಸೀಮಿತವಾದದ್ದು ಅವುಗಳ ಹಿನ್ನಡೆಗೆ, ತನ್ಮೂಲಕ ಸಮಾಜದ ಅನೇಕ ವೈರುಧ್ಯಗಳಿಗೆ ಕಾರಣವಾಗಿದೆ.

ಈ ಹಿನ್ನೆಲೆಯಲ್ಲಿಯೆ ಸ್ವಾಮಿ ವಿವೇಕಾನಂದರು ''ಧರ್ಮ ಬಾಯಿಯ ಮಾತಲ್ಲ, ನಂಬಿಕೆಯಲ್ಲ, ಸಿದ್ಧಾಂತವಲ್ಲ ಅಥವಾ ಅದೊಂದು ಕೋಮುವಾರು ಭಾವನೆಯೂ ಅಲ್ಲ; ಅದು ದೇವಸ್ಥಾನ ಕಟ್ಟುವುದರಲ್ಲಿ, ಸಾಮಾಜಿಕ ಪೂಜೆಗೆ ಹೋಗುವುದರಲ್ಲಿಯೂ ಇಲ್ಲ, ಗ್ರಂಥಗಳಲ್ಲಿಲ್ಲ, ಸಂಸ್ಥೆಯಲ್ಲಿಯೂ ಇಲ್ಲ, ಮಾತಿನಲ್ಲಿಲ್ಲ, ಉಪವಾಸದಲ್ಲಿಯೂ ಇಲ್ಲ; ಧರ್ಮವೆಂದರೆ ಸಾಕ್ಷಾತ್ಕಾರ'' ಎಂದದ್ದು. ಧರ್ಮ ಕೇವಲ ಸಾಂಪ್ರದಾಯಿಕ ಆಚರಣೆಗೆ ಸೀಮಿತವಾದುದಲ್ಲ; ಅದು ಅನುಭವಕ್ಕೆ ತಂದುಕೊಂಡು ಅದೆ ಆಗುವುದಾಗಿದೆ.

ಧರ್ಮ ಎಂದರೆ ಬಂಧನಕ್ಕೊಳಗಾಗುವುದಲ್ಲ, ಬಿಡುಗಡೆಗೊಳ್ಳುವುದು. ದೇವರು ಒಬ್ಬನೆ, ಮನುಷ್ಯರೆಲ್ಲಾ ಅವನ ಮಕ್ಕಳು ಎನ್ನುವುದೇ ಎಲ್ಲ ಧರ್ಮಗಳ ತಿರುಳು. ಆದರೆ ಅದರಿಂದ ಹೊಮ್ಮುವ ವಿಕೃತ ರೂಪವೇ ನಾನು ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಜೈನ, ಸಿಖ್ ಮುಂತಾಗಿ ಪ್ರತ್ಯೇಕಗೊಳ್ಳುವುದು. ಹೀಗೆ ಈ ವಿಕೃತ ಭಾವನೆಗೆ ಬಲಿಯಾಗಿರುವ ಕಾರಣ ಕೋಮು ಸಂಘರ್ಷಗಳು ಭುಗಿಲೇಳುತ್ತಿವೆ. ಆ ಕಾರಣವೆ ಆಫ್ಘಾನಿಸ್ತಾನದ ಬಮಿಯಾನಿನ ೧೭೫ ಅಡಿ ಎತ್ತರದ ಬುದ್ಧ ಪ್ರತಿಮೆ ನಾಶಗೊಳ್ಳುತ್ತದೆ. ಬಾಬ್ರಿ ಮಸೀದಿ ನೆಲಸಮವಾಗುತ್ತದೆ. ಅದು ಧರ್ಮದ ಕ್ರಿಯೆಯಲ್ಲ, ಧರ್ಮದ ವಿಕೃತತೆ.

ಧರ್ಮ ಎಂದರೆ ಅರಿವಿನಿಂದ ಅರಿವಿಗೆ ಕೊಂಡೊಯ್ಯುವುದು, ಸ್ಥಗಿತಗೊಳಿಸುವುದಲ್ಲ. ಸ್ಥಗಿತಗೊಳ್ಳುವುದೆಂದರೆ ನಿಂತ ನೀರಿನಂತೆ ಮಲಿನಗೊಳ್ಳುವುದು. ಧರ್ಮ ಮಲಿನಗೊಳ್ಳುವುದಲ್ಲ, ನಿರಂತರ ನಿರ್ಮಲವಾದುದು. ಇರುವ ಸ್ಥಿತಿಯಿಂದ ಉನ್ನತ ಸ್ಥಿತಿಗೆ ಎತ್ತಿಕೊಳ್ಳುವ ವಾಹಕ ಧರ್ಮ.

ಗೌತಮ ಬುದ್ಧ ಧರ್ಮಕ್ಕೆ ವೈಜ್ಞಾನಿಕ ವಿಶ್ಲೇಷಣೆಯನ್ನು ಒಂದು ಸಣ್ಣ ನಿದರ್ಶನದ ಮೂಲಕ ನೀಡುತ್ತಾನೆ. ನೀವು ಪಯಣಿಸುತ್ತಿದ್ದೀರಿ. ದಾರಿ ಮಧ್ಯೆ ಅಡ್ಡವಾಗಿ ನದಿ ಹರಿಯುತ್ತಿದೆ. ಅದನ್ನು ದಾಟಬೇಕು. ತೆಪ್ಪದಲ್ಲಿ ಕುಳಿತು ಈ ದಡದಿಂದ ಆ ದಡಕ್ಕೆ ತಲುಪುತ್ತೀರಿ. ಆ ದಡದಿಂದ ಈ ದಡಕ್ಕೆ ನನ್ನನ್ನು ತಲುಪಿಸಿದ್ದು ತೆಪ್ಪ ಎಂದು ಅದನ್ನು ತಲೆಯ ಮೇಲೆ ಹೊತ್ತುಕೊಂಡು ಪೇಟೆಯಲ್ಲಿ ಸಂತೆಯಲ್ಲಿ ಅಲೆಯುತ್ತೀರೇನು? ಇಲ್ಲ. ಅಂತಹ ಮೂರ್ಖ ಕೆಲಸವನ್ನು ಯಾರೂ ಮಾಡುವುದಿಲ್ಲ. ಹಾಗೆ ಧರ್ಮ ; ನಿಮಗೆ ಅದು ಅರಿವನ್ನು ತಂದುಕೊಟ್ಟ ಮೇಲೆ ಅದನ್ನು ಬಿಟ್ಟು ಮೇಲೆ ಮೇಲೆ ಹೋಗಬೇಕು. ನಾನು ಹಿಂದೂ, ನಾನು ಮುಸ್ಲಿಂ, ನಾನು ಕ್ರಿಶ್ಚಿಯನ್, ನಾನು ಜೈನ, ಬೌದ್ಧ, ಸಿಖ್ ಮುಂತಾಗಿ ಉಳಿಯಕೂಡದು. ಈ ಹಿನ್ನೆಲೆಯಲ್ಲೆ ವೇದವು ''ಜ್ಞಾನ ಎಲ್ಲ ಕಡೆಯಿಂದಲೂ ಬರಲಿ'' ಎಂದಿದ್ದರೆ ಕುವೆಂಪು 'ಓ ನನ್ನ ಚೇತನ ಆಗು ನೀ ಅನಿಕೇತನ' ಎಂದದ್ದು. ಜಾತಿ ಮತ ಪಂಥಗಳೆಂಬ ಸಂಕುಚಿತ ಮನೆಗಳನ್ನು ಮನಸ್ಸಿನಲ್ಲಿ ಕಟ್ಟಿಕೊಳ್ಳದೆ ಅನಂತವಾಗಬೇಕು. ಅನಂತವಾಗುವುದೆ ಸಹಜ ಪ್ರಕೃತಿ, ಧರ್ಮ; ಇಲ್ಲವಾದಲ್ಲಿ ಬದುಕಿನ ವಿಕೃತಿ, ಕರ್ಮ.

ಜಾತಿ, ಧರ್ಮಗಳ ಹೆಸರಿನಲ್ಲಿ ಕುರುಡಾಗಿರುವ ಮನುಕುಲಕ್ಕೆ ಜಾತಿ ಧರ್ಮಗಳನ್ನು ಕುರಿತ ಬುದ್ಧನ ವೈಜ್ಞಾನಿಕ ದೃಷ್ಟಿ ಸತ್ಯ ಸಾಕ್ಷಾತ್ಕಾರದ ಅತ್ಯಂತ ಸರಳ ಸೂತ್ರವಾಗಿದೆ. ಇದನ್ನು ಗೌತಮ ಬುದ್ಧ ಹೇಳಿ ೨೬೦೦ ವರ್ಷಗಳು ಸಂದರೂ ಮನುಕುಲ ಇನ್ನೂ ಕಣ್ಣು ತೆರೆಯದೆ ಕುರುಡಾಗಿರುವುದು ಅದರ ದುರಂತವೇ ಸರಿ.

ಜ. ಹೊ. ನಾರಾಯಣಸ್ವಾಮಿ
೨೦೬೪ಅ, 'ಮಾನವ', ಉತ್ತರ ಬಡಾವಣೆ
ಹಾಸನ - ೫೭೩ ೨೦೧

''**ಹೊಸತು**'' ಜುಲೈ ಸಂಚಿಕೆಯಲ್ಲಿ ಶ್ರೀನಿವಾಸನ್‌ರ ''ಸತ್ಯ ಮತ್ತು ಮೌಲ್ಯ'' ಲೇಖನ ನನ್ನ ಈ ಲೇಖನವನ್ನು ಪ್ರಚೋದಿಸಿದೆ. ''ಮೌಲ್ಯ'' ಎಂಬ ಶಬ್ದಕ್ಕೆ ನಾವು ಸಾಮಾನ್ಯವಾಗಿ ಬಳಸುವ ಅರ್ಥವೇ ಇಲ್ಲ. ಇಂಗ್ಲಿಷ್‌ನ VALUE ಪದಕ್ಕೆ ಸಮಾನಾರ್ಥದಲ್ಲಿ ಬಳಸುತ್ತೇವಷ್ಟೆ. ಸಂಸ್ಕೃತ ಶಬ್ದಕೋಶದಲ್ಲಿ ಮೌಲ್ಯ ಎಂದರೆ Price ಎಂದಿಷ್ಟೇ ಅರ್ಥ ಇರುತ್ತದೆ. ಮೌಲ್ಯಕ್ಕೆ ಬದಲು ಧರ್ಮ ಶಬ್ದ ಹೆಚ್ಚು ಸಮಂಜಸ. ಇಂದು ಧರ್ಮ ಶಬ್ದವನ್ನು ಮತ, ಪಂಥ ಎಂಬರ್ಥದಲ್ಲಿ ಬಳಸಿ ಅದಕ್ಕೆ ಅಪಮಾನ ಮಾಡಲಾಗುತ್ತಿದೆ. ಆ ಶಬ್ದಕ್ಕಿರುವ ನಿಜವಾದ ಗೌರವವನ್ನು, ಮೌಲ್ಯವನ್ನು, ಬೆಲೆಯನ್ನು ಹಿಂದಿರುಗಿಸಬೇಕಾಗಿದೆ ಇಂದು.

ಭಾರತೀಯ ಚಿಂತಕರು, ತತ್ತ್ವಜ್ಞರು ಸತ್ಯ ಮತ್ತು ಧರ್ಮಗಳ ಕುರಿತು ವಿಶೇಷವಾಗಿ ಚಿಂತಿಸಿ ಕೆಲವು ನಿರ್ಣಯಗಳಿಗೆ ಬಂದಿರುವುದು ಪ್ರಾಚೀನ ಸಾಹಿತ್ಯವನ್ನು ಅವಲೋಕಿಸಿದಾಗ ಗೊತ್ತಾಗುತ್ತದೆ. ಪೂರ್ವ ಗುರುಕುಲಗಳಲ್ಲಿ ವಿದ್ಯಾರ್ಥಿಗಳ ಶಿಕ್ಷಣ ಮುಗಿದಾಗ ಗುರುವಿನ ಆದೇಶದ ಪ್ರಾರಂಭವೇ, ''ಸತ್ಯಂ ವದ, ಧರ್ಮಂ ಚರ'' ಎಂದು. ಆದರೆ ಅಲ್ಲಿ ಸತ್ಯವೆಂದರೇನು ? ಧರ್ಮವೆಂದರೇನು ? ವಿವರಣೆ ಇಲ್ಲ. ಗುರು ಮುಂಚೆಯೇ ವಿವರಣೆ ನೀಡಿರುತ್ತಿದ್ದ. ಉಪನಿಷತ್‌ನ ಈ ಆದೇಶಕ್ಕೆ ತರುವಾಯದ ಗ್ರಂಥಗಳಲ್ಲಿ ವಿವರಣೆ ದೊರೆಯುತ್ತದೆ. ಮನುಧರ್ಮನ ''ದಶಕಂ ಧರ್ಮ ಲಕ್ಷಣಮ್'' ಎಂಬ ಗುಣಗಳ ಪಟ್ಟಿ ಮೊದಲನೆಯದು. ರಾಮಾಯಣದ ಕಾಲದಲ್ಲಿದ್ದ ''ಧರ್ಮವ್ಯಾಧ'' ಎಂಬ ಬೇಡರ ಕುಲದ, ಮಾಂಸ ಮಾರುತ್ತಿದ್ದ ಜ್ಞಾನಿ ಇತ್ತಿರುವ ವ್ಯಾಖ್ಯೆ ಹೀಗಿದೆ : ಯದ್ಭೂತಹಿತಮತ್ಯಂತಂ ತತ್ಸತ್ಯಮಿತಿ ನಿಶ್ಚಯಃ ॥ (ಸಕಲ ಜೀವಿಗಳಿಗೆ ಲೇಸನ್ನು ಬಯಸುವುದು, ಮಾಡುವುದು ಸತ್ಯವೆಂದು ನಿಶ್ಚಯ). ಸತ್ಯವೆಂದರೆ ನುಡಿ, ಧರ್ಮವೆಂದರೆ ನಡೆ. ನುಡಿ-ನಡೆಗಳೆರಡನ್ನು ಎಲ್ಲ ಜೀವಿಗಳಿಗೂ ಅತ್ಯಂತ ಹಿತಕಾರವಾಗಿಸುವುದು ಅವಶ್ಯವೆಂದೇ ಅಭಿಪ್ರಾಯ. ಇಲ್ಲಿ ''ಸತ್ಯ'' ಒಂದೇ ಪದ ಹೇಳಿದ್ದರೂ, ''ಧರ್ಮ'' ಪದವೂ ಜೊತೆಗೂಡಿರುತ್ತದೆ.

ವಿವರಣೆ ಸ್ವಲ್ಪ ಅಗತ್ಯ. ಸತ್ಯ ಮತ್ತು ಧರ್ಮ ಈ ಶಬ್ದಗಳಿಗೆ ಮೂಲ ಶಬ್ದ ''ಋತ'' ಎಂಬ ಈಗ ಬಳಕೆ ತಪ್ಪಿರುವ ಬಹು ಮುಖ್ಯ ಶಬ್ದ. ಅದಕ್ಕೆ ವಿರುದ್ಧಾರ್ಥದ ''ಅನೃತ'' ಮಾತ್ರ ಹೆಚ್ಚು ಬಳಕೆಯಲ್ಲಿದೆ. ''ಋತ'' ಎಂದರೆ ಸಮಾಜದ ಸುವ್ಯವಸ್ಥೆ, (ವಿಶ್ವದ್ದೂ ಸಹ) ಸುಕ್ಷೇಮಕ್ಕೆ ಅಗತ್ಯವಾದುದೆಲ್ಲವೂ. ''ಸತ್ಯ'' ಈ ''ಋತ''ದ ವಾಕ್ ರೂಪ, 'ಧರ್ಮ' ಕ್ರಿಯಾ ರೂಪ. ಋತವೆಂಬ ಮಹಾಮೌಲ್ಯಕ್ಕನುಗುಣವಾಗಿ ನುಡಿ-ನಡೆಗಳಿದ್ದಾಗ ಮಾತ್ರ ಅವು ಸತ್ಯ, ಧರ್ಮವಾಗುವುವು – ಆ ನುಡಿ ಸುಳ್ಳಿರಲಿ, ನಿಜವಿರಲಿ, ಆ ನಡೆ ಒಪ್ಪಿರಲಿ, ತಪ್ಪಿರಲಿ !

ಧರ್ಮವ್ಯಾಧನ ವ್ಯಾಖ್ಯೆ ''ಸಕಲ ಜೀವಿಗಳಿಗೂ'' ಎಂದಿರುವುದನ್ನು ತರುವಾಯ ಮಹಾಭಾರತದ ಕಾಲದಲ್ಲಿ ವ್ಯಾಸ ಮಹರ್ಷಿ ಮತ್ತು ಕೃಷ್ಣ ಯೋಚಿಸಿ ತಿದ್ದಿದರು. ಸಮಾಜ ಸಾಧು ಸಜ್ಜನರು, ದುಷ್ಟ ದುರ್ಬುದ್ಧಿಯವರ ಮಿಶ್ರಣ ಸದಾಕಾಲಕ್ಕು ಎಂಬುದನ್ನು ಗಮನಿಸಿ, ''ಸತ್ಯಸ್ಯ ವಚನಂ ಶ್ರೇಯಃ ಸತ್ಯಜ್ಞಾನಂ ತು ದುಷ್ಕರಂ। ಯತ್ ಸತಾಂ ಹಿತಮತ್ಯಂತಂ ತತ್ ಸತ್ಯಮಿತಿ ನಿಶ್ಚಯಃ ॥

ತಿಳಿವು

# ಸತ್ಯ ಮತ್ತು ಧರ್ಮ

ಧರ್ಮಸ್ಯಾಚರಣಂ ಶ್ರೇಯೋ ಧರ್ಮಜ್ಞಾನಂ ತು ದುಷ್ಕರಂ ।

ಯಃ ಸತಾಂ ಧಾರಕೋ ನಿತ್ಯಂ ಸ ಧರ್ಮ ಇತಿ ನಿಶ್ಚಯಃ ॥ ಎಂದರು.

(ಸತ್ಯ - ಧರ್ಮಗಳ ಪ್ರಕಾರ ನಮ್ಮ ನುಡಿ-ನಡೆಗಳು ಇರುವುದು ಶ್ರೇಯಸ್ಕರ, ನಿಜವೇ. ಆದರೆ ಸತ್ಯ-ಧರ್ಮಗಳ ಸರಿಯಾದ ಜ್ಞಾನ ಕ್ಲಿಷ್ಟವಾದುದು. ನಮ್ಮ ನಿಶ್ಚಯವಿದು : ಯಾವ ನುಡಿ-ನಡೆ ಸಮಾಜದ ಸಾಧು-ಸಜ್ಜನರಿಗೆ ಹಿತಕರವೂ, ರಕ್ಷಣೆ ನೀಡಬಲ್ಲುದೂ ಆಗಿರುವುವೋ ಅವು ಮಾತ್ರ ಸತ್ಯ ಹಾಗೂ ಧರ್ಮ.) ಇದನ್ನು ಮತ್ತೊಮ್ಮೆ ಸಮರ್ಥಿಸಿ ಕೃಷ್ಣ, ''ಯಃ ಸತಾಂ ಧಾರಕೋ ನಿತ್ಯಂ ಸ ಧರ್ಮ ಇತಿ ನಿಶ್ಚಯಃ'' ಎಂದಿರುತ್ತಾನೆ. ಈ ಮಾತುಗಳ ಜೊತೆಗೆ ಕೌಶಿಕನೆಂಬ ''ಸತ್ಯವಾದಿ''ಯ ದೃಷ್ಟಾಂತವನ್ನೂ ಕೊಟ್ಟಿರುತ್ತಾನೆ (ತಾನು ಸತ್ಯವನ್ನೇ ಹೇಳುವವನೆಂದು ಶಪಥ ಮಾಡಿದ್ದ ಕೌಶಿಕ ತನ್ನ ರಕ್ಷಣೆ ಬೇಡಿ ಬಂದು ಅಡಗಿಕೊಂಡ ಅಮಾಯಕನನ್ನು ಬೆನ್ನಟ್ಟಿ ಬಂದ ಧೂರ್ತರಿಗೆ ತಿಳಿಸಿ ಕೊಲೆಗೆ ಕಾರಣನಾದ ಕತೆ).

ಆ ಕೃಷ್ಣನೇ ಭಾರತ ಯುದ್ಧಕ್ಕೆ ಮೊದಲು ಗೀತೆಯಲ್ಲಿ,

''ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।

ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ ಎಂದ. ಧರ್ಮ - ಋತಧರ್ಮ (ಮೂಲಧರ್ಮ) - ಸುಸ್ಥಿರಗೊಳಿಸಲು ಸಾಧುಗಳ ರಕ್ಷಣೆ ಹೇಗೆ ಮುಖ್ಯವೋ ದುಷ್ಟ ಕಾರ್ಯಾಸಕ್ತರ ಶಾಸನ ನಾಶಗಳೂ ಮುಖ್ಯ. ಈ ದ್ವಿಮುಖ ಕರ್ತವ್ಯ ನಿರ್ವಹಣೆ ಆಗಾಗ ಅತಿ ಅವಶ್ಯಕ ಎಂದಿರುವುದನ್ನು ಗಮನಿಸಿದಾಗ ಸತ್ಯ-ಧರ್ಮಗಳ ಮೊದಲಿನ ಅವನದೇ ವ್ಯಾಖ್ಯೆಗೆ ಇನ್ನೊಂದು ತಿದ್ದುಪಡಿ ಅವನೇ ಸೂಚಿಸಿರುವುದು ಕಾಣುತ್ತದೆ. ಆತನ ಕೃತಿಗಳೂ ಸಹ ಇದರ ಪ್ರಕಾರವೇ ಇದ್ದವು. ಕೃಷ್ಣ ತನ್ನ ಕಾಲದ ಸಮಾಜದಲ್ಲಿನ ಸಾಧು ಸಜ್ಜನ, ಧರ್ಮಿಷ್ಠ ವ್ಯಕ್ತಿಗಳನ್ನು ಅಪಾರ ಪ್ರೀತಿಸುತ್ತ, ನೆರವು ನೀಡುತ್ತಿದ್ದ. ಆದರೆ ದೌಷ್ಟ್ಯವನ್ನು ಪ್ರಬಲವಾಗಿ ಎದುರಿಸಿದ. ಅಂದಿನ ಕುಪ್ರಸಿದ್ಧ ದುರ್ಮಾರ್ಗಿಗಳನ್ನು, ಶಾಸನಕ್ಕೆ ಬಗ್ಗದವರನ್ನು ನಾಶವನ್ನೇ ಮಾಡಿದ - ತನ್ನ ಬಂಧುಗಳಾಗಿದ್ದವರನ್ನೂ ಬಿಡದೆ. ರಾಮನೂ ತನ್ನ ಕಾಲದಲ್ಲಿ ಹೀಗೆಯೇ ಮಾಡಿದವನು – ''ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ.'' ಧರ್ಮ ಎಂದರೆ ಈ ದ್ವಿಮುಖ ಕರ್ತವ್ಯ.

ಕೃಷ್ಣನ ಈ ದೃಷ್ಟಿಯನ್ನು ಇನ್ನಷ್ಟು ವಿಶದಪಡಿಸಲೆಂದೇ ನಮ್ಮ ದೇಶದ ಚರಿತ್ರೆಯ ಅತ್ಯಂತ ಹೀನ ದೀನ ಮತ್ತು ಒಂದು ನಿರ್ಣಾಯಕ ಘಟ್ಟವಾಗಿದ್ದ ಕ್ರಿ.ಶ. ೧೩ನೇ ಶತಕದಲ್ಲಿ ಕರ್ನಾಟಕದ ಪ್ರಸಿದ್ಧ ತತ್ತ್ವಜ್ಞ, ಚಿಂತಕ ಮಧ್ವಾಚಾರ್ಯ ''ಸತ್ಯ-ಧರ್ಮ''ದ ದ್ವಾಪರದ ವ್ಯಾಖ್ಯಾನಕ್ಕೆ ಹೊಸ ತಿದ್ದುಪಡಿ ಜೋಡಿಸಿದ್ದಾರೆ : ''ಸತಾಂ ವೃದ್ಧಿ ಕರೋ ಧರ್ಮಃ ಅಸತಾಂ ಹ್ರಾಸಕಾರಕಃ । ಅಯಂ ತು ನಿಶ್ಚಿತೋ ಧರ್ಮೋಽಹ್ಯಧರ್ಮೋಽನ್ಯೋ ವಿಪಶ್ಚಿತಃ ॥ ಹರ್ಷಃ ಸತ್ಸು ತಥಾಽಸತ್ಸು ಧರ್ಮೋ ಧರ್ಮ ವಿಪರ್ಯಯಃ ॥ ತೇಷಾಂ ವೃದ್ಧೌ ತಥಾ ಹ್ರಾಸೌ ಸರ್ವಂ ಜ್ಞೇಯಮಶೇಷತಃ । ಏತದರ್ಥಂ ಚ ಧರ್ಮಾಣಾಂ ಮರ್ಯಾದಾ ವೈದಿಕಾದಿಕಾ । ಮೂಲಧರ್ಮ ವಿರುದ್ಧಾ ತು ಸಾ ನ ಗ್ರಾಹ್ಯಾ ಕಥಂಚನ ॥ (ಒಂದು ನುಡಿ ಹಾಗೂ ನಡೆ ಸತ್ಯ-ಧರ್ಮವಾಗಲು ಅವು ಸಜ್ಜನರ ಸಂಖ್ಯೆ-ಶಕ್ತಿಗಳನ್ನು ವೃದ್ಧಿಗೊಳಿಸುವಾಗಲೇ ದುರ್ಜನರ ಸಂಖ್ಯೆ ಶಕ್ತಿಗಳನ್ನು ಹ್ರಾಸಗೊಳಿಸಲೂಬೇಕು. ಇದಕ್ಕೆ ವಿರುದ್ಧವಾದರೆ ಅವೇ ಅಸತ್ಯ ಅಧರ್ಮವಾಗುವುವು. ಸಜ್ಜನರಿಗೆ ಹರ್ಷ ತರುವಂಥವು ಧರ್ಮ, ದುರ್ಜನರಿಗೆ ಹರ್ಷ ತಂದರೆ ಅವೇ ಅಧರ್ಮ. ಆಡತಕ್ಕುದು ಮಾಡತಕ್ಕದು ಸಜ್ಜನರ ಒಳಿತಿಗಾಗಿ, ದುರ್ಜನರ ಕೇಡಿಗಾಗಿ ಎಂಬುದೇ ಮುಖ್ಯ ಗ್ರಹಿಕೆಯಾಗಬೇಕು. ವೇದಾದಿಗಳು ಆದೇಶಿಸುವ ರೀತಿ-ನೀತಿಗಳೆಲ್ಲವೂ ಧರ್ಮಗಳ ಸ್ಥಿರತೆಗೆ, ಸಂರಕ್ಷಣೆಗಾಗಿಯೇ. ಋತ ಧರ್ಮ (ಮೂಲಧರ್ಮ)ಕ್ಕೆ ವಿರುದ್ಧವಾದ ರೀತಿ-ನೀತಿಗಳನ್ನು ಸರ್ವಥಾ ಅನುಸರಿಸಬಾರದು).

ತಾಳ್ಮೆ, ಸೈರಣೆ, ಕ್ಷಮೆಗಳನ್ನು ಎತ್ತಿಹಿಡಿಯುವ, ಎಂಥ ನೀಚ, ದುಷ್ಟ, ಭ್ರಷ್ಟರ ಬಗ್ಗೆಯೂ, ''ಪಾಪ ! ಹೋಗಲಿ ಬಿಡಿ !'' ಎನ್ನುವ ಪ್ರವೃತ್ತಿ ಸಮಾಜದಲ್ಲಿ ಅನಿಷ್ಟವಾದುದು. ಅಂಥ ತಾಳ್ಮೆ, ಸೈರಣೆ, ಕ್ಷಮೆ ಅಧರ್ಮವೆಂದು ಮಧ್ವರೇ ಘೋಷಿಸಿರುವರು : ಕ್ಷಮಾ ಸರ್ವತ್ರ ಧರ್ಮೋ ನ । ಪಾಪ ಹೇತುಶ್ಚ ದುರ್ಜನೇ। ಸಾಮರ್ಥ್ಯ ಯುಕ್ತಾನಾಂ ರಾಜ್ಞಾಂ ॥ (ಶಿಕ್ಷಿಸಲು ಸಮರ್ಥನಾದ ಅಧಿಕಾರಿ ಕ್ಷಮಿಸಲೇಬಾರದಂಥ ಸಂದರ್ಭದಲ್ಲಿ ದುಷ್ಟನನ್ನು ಕ್ಷಮಿಸುವುದರಿಂದ ಪಾಪ ಘಟಿಸುತ್ತದೆ. ಎಲ್ಲ ಸಮಯಗಳಲ್ಲೂ ಕ್ಷಮೆಯು ಧರ್ಮವಲ್ಲ). ''ಧಿಕ್ ! ಕ್ಷಮಾಮೀದೃಶೇ ಜನೇ'' ಎಂದು ರಾಮನೂ ಉದ್ಗರಿಸಿರುತ್ತಾನೆ.

ನೆನಪಿನಲ್ಲಿ ಉಳಿಸಿಕೊಳ್ಳಬೇಕಾದ ಅರ್ಥ : ಸಾಮಾನ್ಯ ದೃಷ್ಟಿಯಿಂದ ಒಂದು ನುಡಿ ನಿಜವಿರಲಿ, ಸುಳ್ಳೇ ಆಗಿರಲಿ ಮತ್ತು ಒಂದು ಕ್ರಿಯೆ ಒಪ್ಪಿರಲಿ, ತಪ್ಪೇ ಆಗಿರಲಿ ಆ ನುಡಿ-ಕ್ರಿಯೆಗಳ ಪರಿಣಾಮದ ಅನುಸಾರ ಸತ್ಯ-ಧರ್ಮಗಳ ಇತ್ಯರ್ಥವಾಗುತ್ತದೆ. ದೇಶದಲ್ಲಿ ದೌಷ್ಟ್ಯ, ಅನಾಚಾರ, ಅತ್ಯಾಚಾರ, ಭ್ರಷ್ಟಾಚಾರಗಳು ಹೆಚ್ಚಿವೆ ಹಾಗೂ ಹೆಚ್ಚಾಗುತ್ತಲೂ ಇವೆಯಲ್ಲವೆ ? ಆದ್ದರಿಂದ ಸತ್ಯ, ಧರ್ಮ, ಸೈರಣೆ, ತಾಳ್ಮೆ, ಕ್ಷಮೆ ಇವುಗಳು ವಿಶೇಷ ಚರ್ಚೆಗೆ ಒಳಗಾಗಿ ನಮ್ಮ ಪೂರ್ವಿಕರ ನಿರ್ಣಯಗಳು ಸ್ವೀಕಾರಾರ್ಹವೇ, ಅನುಸರಿಸಲು ಯೋಗ್ಯವೇ ಎನ್ನುವುದರ ಮೇಲೆ ಸಮಾಜದ ಒಳಿತು ಅವಲಂಬಿಸಿದೆ.

ಬ. ನಾ. ರಘುರಾಮ
''ಗುಲ್‌ಮೊಹರ್'', ಹೌಸಿಂಗ್ ಬೋರ್ಡ್ ಕಾಲೋನಿ
ಸಾಗರ - ೫೭೭ ೪೦೧

HOSATHU Kannada Monthly / September 2001 Rs. 10
RNI Regn. No. KARKAN/1999/614 REGD. CPMG / KA / BGE – 7 / 2001 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial